# ಅಲೆಯುವ ಮನ

ಪ್ರೊ|| ಎ. ಎನ್. ಮೂರ್ತಿರಾವ್





ಮೈಸೂರು
ಕಾವ್ಯಾಲಯ : ಪ್ರಕಾಶಕರು

ಕನ್ನಡ ಕಾವ್ಯಮಾಲೆ

# ಅಲೆಯುವ ಮನ

ಎ. ಎಸ್. ಮೂರ್ತಿರಾವ್

Dr. S.S. Hiremath



ಮೈಸೂರು
ಕಾವ್ಯಾಲಯ : : ಪ್ರಕಾಶಕರು

*ALEYUVAMANA* (The Wandering Mind)–A Collection of fourteen personal essays in Kannada. By A. N. Moorthy Rao. First published in 1957. By Kavyalaya Publishers, Mysore–9 (570009) Reissued 1959, (Twice), 1961, 1973.

ಐದನೆಯ ಮುದ್ರಣ: ೧೯೭೩





ಮುದ್ರಕರು

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು

4300

## ಮೊದಲ ಮಾತು

ಈ ಪುಸ್ತಕದಲ್ಲಿ ಸೇರಿರುವ ಪ್ರಬಂಧಗಳಲ್ಲಿ ಬಹುಭಾಗ ಆಗಿಂದಾಗ ಪತ್ರಿಕಾ ಸಂಪಾದಕರ, ಅಥವಾ ಆಲ್ ಇಂಡಿಯಾ ರೇಡಿಯೋ ನಿಲಯದವರ ಅಪೇಕ್ಷೆಯಂತೆ ಬರೆದದ್ದು. 'ಕಾರ್ ರಿಪೇರಿ, ನೀನೇ ಮಾಡಿ ನೋಡು', 'ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು'—ಇವೆರಡೂ ಆಕಾಶ ವಾಣಿಯಿಂದ ಪ್ರಸಾರವಾಗಿ ಅನಂತರ ಸ್ವಲ್ಪ ಬದಲಾವಣೆ ಹೊಂದಿ ವಿಸ್ತಾರ ಗೊಂಡವು. ರೇಡಿಯೋ ಪ್ರಸಾರಕ್ಕಾಗಿ ಬರೆದ ಲೇಖನಗಳೆಲ್ಲವೂ ಈ ರೀತಿ ಬದಲಾವಣೆ ಹೊಂದಿ ಹೊಸರೂಪವನ್ನು ತಾಳಿವೆ. ಪತ್ರಿಕೆಗಳಿಗಾಗಿ ಬರೆದ ಲೇಖನಗಳು ಬಹುಮಟ್ಟಿಗೆ ಮೊದಲಿನ ರೂಪದಲ್ಲೇ ಇವೆ.

ಹುಲಿಗಳು ಯಾರ ಮೇಲೂ ಹಿಂದಿನಿಂದ ನೆಗೆಯುವುದಿಲ್ಲವೆಂದು ನನ್ನ ಮಿತ್ರರೊಬ್ಬರು ಒಂದು ಥಿಯರಿಯನ್ನು ಮುಂದಿಟ್ಟಿದ್ದರು. 'ವ್ಯಾಘ್ರಗೀತೆ' ಅದನ್ನು ಗೇಲಿ ಮಾಡುವುದಕ್ಕಾಗಿ ಕಟ್ಟಿದ ಕಥೆ. ಅನಂತರ ಅದು ಆಕಾಶ ವಾಣಿಯಿಂದ ಪ್ರಸಾರವಾಯಿತು; 'ಜನಪ್ರಗತಿಯಲ್ಲಿ' ಪ್ರಕಟವೂ ಆಯಿತು. ಪ್ರಸಾರವನ್ನು ಕೇಳಿದವರೊಬ್ಬರು "ನಿಮ್ಮ ಕಥೆಯಲ್ಲಿ ಹುಲಿ ಯಾರು, ಶಾನುಭೋಗರು ಯಾರು ?" ಎಂದು ಪ್ರಶ್ನೆ ಹಾಕಿದರು. ಹುಲಿ ಶಾನು ಭೋಗರಿಬ್ಬರೂ ಸಂಪೂರ್ಣವಾಗಿ ಕಾಲ್ಪನಿಕ ವ್ಯಕ್ತಿಗಳು. ಮೇಲೆ ತೋರುವ ಹಾಸ್ಯವಲ್ಲದೆ ಈ ಕಥೆಯಲ್ಲಿ ಒಳ ಅರ್ಥ ಏನೇನೂ ಇಲ್ಲ.

'ಹೆಂಡತಿಯ ಹೆಸರು', 'ಕೆನ್ಸಿಂಗ್ಟನ್ ಪಾರ್ಕ್', ಹರಕೆಗಳು', ಎಂಬ ಪ್ರಬಂಧಗಳಲ್ಲಿ ಮೊದಲ ಎರಡು 'ಪ್ರಬುದ್ಧ ಕರ್ಣಾಟಕ'ದಲ್ಲಿಯೂ ಮೂರನೆ ಯದು 'ಛಾಯಾ' ಪತ್ರಿಕೆಯಲ್ಲೂ ಪ್ರಕಟವಾಗಿದ್ದವು. ಮೊದಲನೆಯದರ ಇಂಗ್ಲಿಷ್ ಅನುವಾದವನ್ನು 'ತ್ರಿವೇಣಿ' ಪ್ರಕಟಿಸಿತು. 'ಹೋಟಲುಗಳು', 'ದಿವಾನಖಾನೆಯ ಅಂದ ಚೆಂದ' ಎಂಬ ಪ್ರಬಂಧಗಳು ಅನುಕ್ರಮವಾಗಿ 'ಸುಳವು ಪೊಳವು', 'ಮುತ್ತು ಹವಳ' ಎಂಬ ಸಂಕಲನಗಳಲ್ಲಿ ಪ್ರಕಟವಾಗಿ ದ್ದುವು. 'ಮಹಾರಾಜಾ ಕಾಲೇಜಿನ ಕಾಮನ್ ರೂಮ್' ಎಂಬ ಪ್ರಬಂಧ ಆ ಕಾಲೇಜಿನ ಶತಮಾನೋತ್ಸವ ಸಂಪುಟದಲ್ಲಿ ಅಚ್ಚಾಗಿದ್ದ ನನ್ನ ಇಂಗ್ಲಿಷ್ ಲೇಖನದ ಅನುವಾದ. 'ಕ್ಲೀಷಾಪ್ರವೀಣರ ಸಾಕ್ಷ್ಯ' 'ಜನಪ್ರಗತಿ'ಗಾಗಿ ಬರೆದದ್ದು.

'The Problem of Writers: The Short Story', 'The Professional Stamp: The Author' ಎಂಬ ಶೀರ್ಷಿಕೆಗಳನ್ನುಳ್ಳ ಎರಡು ಭಾಷಣಗಳನ್ನು ನಾನು ಆಕಾಶವಾಣಿಯಿಂದ ಪ್ರಸಾರಮಾಡಿದ್ದೆ. 'ಸಣ್ಣ ಕಥೆಯ ಹಾವಳಿ', 'ಸಾಹಿತಿಯ ಚಹರೆ' ಎಂಬ ಪ್ರಬಂಧಗಳಿಗೆ ಆ ಇಂಗ್ಲಿಷ್ ಭಾಷಣಗಳೇ ಆಧಾರ. ಇಲ್ಲಿ ಆ ಭಾಷಣಗಳು ಬಹುಮಟ್ಟಿಗೆ ವಿಸ್ತಾರಗೊಂಡು ರೂಪಾಂತರ ಹೊಂದಿವೆ. ಇವೆರಡು ಪ್ರಬಂಧಗಳಿಗೂ ಸಾಹಿತ್ಯವೇ ವಿಷಯವಾದರೂ ನನ್ನ ಉದ್ದೇಶ ಸಾಹಿತ್ಯವಿಮರ್ಶೆಯಲ್ಲವೆಂದು ಬಹುಶಃ ಸ್ಪಷ್ಟವಾಗಿಯೇ ಇರಬೇಕು. ಕೆಲವು ವೇಳೆ ನಮ್ಮ ಆಪ್ತ ಮಿತ್ರರಿಗೆ ಪ್ರಿಯವಾದ ವಿಷಯಗಳನ್ನು ಕೀಟಲೆಗಾಗಿ ಹಾಸ್ಯಮಾಡುವ 'impish' ಮನೋವೃತ್ತಿ ನಮ್ಮೆಲ್ಲರಲ್ಲೂ ಇರುತ್ತದೆ. ಅವರ ಉತ್ಸಾಹದಲ್ಲಿ ನಿಜವಾಗಿ ನಾವೂ ಭಾಗಿಗಳು; ಅವರಿಗೆ ಪ್ರಿಯವಾದ ಈ ವಿಷಯಗಳು ನಮಗೂ ಪ್ರಿಯವೇ. ಆದರೂ ಕ್ಷಣಕಾಲ ಆ ಉತ್ಸಾಹದಿಂದ ಹೊರಗೆ ನಿಂತು ಅವರಿಗೆ (ಮತ್ತು ನಮಗೆ!) ಮುದ್ದಾದುದನ್ನು ಗೇಲಿಮಾಡಬೇಕೆನ್ನಿಸುತ್ತದೆ. ಜೀವನದಲ್ಲಿ ನಾವು ಅನುಭವಿಸಬಹುದಾದ ಆನಂದಗಳಲ್ಲಿ ಇದೂ ಒಂದೆಂದು ನನ್ನ ನಂಬಿಕೆ. ಇವೆರಡು ಪ್ರಬಂಧಗಳೂ ಈ ಬಗೆಯ ಮನೋಧರ್ಮದಿಂದ ಹೊರಬಂದವು. ನನಗೂ ಸಣ್ಣಕಥೆಗೂ ಬದ್ಧದ್ವೇಷವೇನೂ ಇಲ್ಲ. ಸಾಹಿತಿಗಳಲ್ಲಿ ಯಾವ ಪಂಗಡದವರ ವಿಷಯದಲ್ಲಾಗಲಿ ಅಸಹನೆಯೂ ಇಲ್ಲ. 'ಸಾಹಿತಿಯ ಚಹರೆ'ಯಲ್ಲಿ ಕಂಡುಬರುವಂಥ ವಾದ ವಿವಾದಗಳ ವಿಷಯದಲ್ಲಿ ಆಸಕ್ತಿಯುಂಟು. ಅಂಥ 'ಕಲಹ' ಆಗಿಂದಾಗ ನಡೆಯುತ್ತಲೇ ಇರಬೇಕು—"lest one good custom should corrupt the world."

ಮೇಲೆ ಹೇಳಿರುವಂತೆ ಈ ಲೇಖನಗಳಿಗೆ ಕಾರಣರಾದ ಆಲ್ ಇಂಡಿಯಾ ರೇಡಿಯೋವಿನವರಿಗೂ ಪತ್ರಿಕೆಗಳ ಮತ್ತು ಸಂಕಲನಗಳ ಸಂಪಾದಕರಿಗೂ ನನ್ನ ವಂದನೆಗಳು.

ಇನ್ನುಳಿದ ಎರಡು ಪ್ರಬಂಧಗಳು—'ಟೆಲಿಫೋನ್' ಮತ್ತು 'ಅಕ್ಕಿಹೆಬ್ಬಾಳು'—ಪ್ರಕಟವಾಗುತ್ತಿರುವುದು ಇದೇ ಮೊದಲು.

ಬೆಂಗಳೂರು
೯–೯–೧೯೫೯

ಎ. ಎನ್. ಮೂರ್ತಿರಾವ್

## ಕೃತಜ್ಞತೆ

ಈ ಪುಸ್ತಕದ ಪ್ರತಿಗಳು ಖರ್ಚಾಗಿ ಬಹುಕಾಲ ಸಂದರೂ ಪುನರ್ಮುದ್ರಣ ಮಾಡಲು ಅವಕಾಶವಾಗಿರಲಿಲ್ಲ. ಇದೀಗ ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಲವು ಅಲ್ಲಿಯ ಕಾಲೇಜುಗಳ ಪ್ರಥಮ ವರ್ಷದ ಅಭ್ಯಾಸಕ್ಕೆ ಪಠ್ಯವಾಗಿ ಈ ಗ್ರಂಥವನ್ನು ಗೊತ್ತುಮಾಡಿ ಉಪಕಾರಮಾಡಿದ್ದಾರೆ. ಈ ವಿಷಯದಲ್ಲಿ ಅಭ್ಯಾಸ ಮಂಡಲದ ಸದಸ್ಯರಿಗೂ, ಮಂಡಲದ ಅಧ್ಯಕ್ಷರಾದ ಪ್ರೊ|| ಸಿ. ಕೆ. ದೀಕ್ಷಿತರಿಗೂ ನಾವು ಅತ್ಯಂತ ಋಣಿಯಾಗಿದ್ದೇವೆ. ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಒಡೆಯರು ಎಂದಿನಂತೆ ಅಂದವಾಗಿ ಪುಸ್ತಕವನ್ನು ಸಕಾಲದಲ್ಲಿ ಮುದ್ರಿಸಿ ಕೊಟ್ಟಿರುತ್ತಾರೆ. ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಪ್ರಕಾಶಕರು

# ವಿಷಯಸೂಚಿಕೆ

# ಕೆನ್ಸಿಂಗ್ಟನ್ ಪಾರ್ಕ್

ನಾನು ಬೆಂಗಳೂರಿಗೆ ಹೋಗುವುದು ಬಹುಮಟ್ಟಿಗೆ ಜನಸಂದಣಿಯಲ್ಲಿ ಕಾಲ ಹರಣಮಾಡುವುದಕ್ಕೆ. ಮೈಸೂರಿನಲ್ಲಿ ವರ್ಷಗಟ್ಟಲೆ ನಿರ್ಜನವಾದ ಬೀದಿಗಳಲ್ಲಿ ತಿರುಗಿ, ಕುಕ್ಕನಹಳ್ಳಿ ಕೆರೆಯ ಏರಿಯ ಮೇಲೆ ಒಂಟಿಯಾಗಿ ಕುಳಿತು, ಕವಿಗಳಂತೆ ನಾನೂ ಪ್ರಕೃತಿ ಸೌಂದರ್ಯದಿಂದ ಪ್ರೇರಿತವಾದ ಧ್ಯಾನಸಮಾಧಿಯಲ್ಲಿದ್ದೇನೆಂದು ಭ್ರಾಂತಿಗೊಳ್ಳುವ ಕಾಲ ಕಳೆದುಹೋಯಿತು ನನ್ನ ಜೀವನಸವಾಹಿನಿ ದಡದುಂಬಿ ಹರಿಯುವ ಬದಲು ಯಾವುದೋ ಹಳ್ಳದಲ್ಲಿ ಸಿಕ್ಕಿಬಿದ್ದು ಹಸುರುಗಟ್ಟುತ್ತ ಬಂದಿದೆ. ಪ್ರತಿ ದಿನವೂ ಅದೇ ಸಾಲುಮರಗಳು, ಅದೇ ಸಂಧ್ಯಾರಾಗ, ಅದೇ ಕೆರೆಯಲ್ಲಿ ದೀಪಗಳ ಪ್ರತಿಬಿಂಬ, ನಿಶ್ಶಬ್ದತೆ—ಇದನ್ನು ಧ್ಯಾನಿಸಿ ಮುಗ್ಧನಾಗುವ ಕವಿಯ ಅಂತರ್ಮುಖತೆಯೆಂದರೆ ನನಗೆ ಜುಗುಪ್ಸೆ ಹುಟ್ಟುತ್ತದೆ. ನನಗೆ ಈಗ ರುಚಿಸುವುದೆಂದರೆ—ಜನನಿಬಿಡವಾದ ಬೀದಿಗಳು, ಬೈಸಿಕಲ್ ಮೋಟಾರುಗಳ ಸಂದಣಿ, ಜಟಕಾದವರ ಚಾವಟಿಯ ಶಬ್ದದ ವೈಖರಿ, ವಿದ್ಯುದ್ದೀಪರಂಜಿತವಾದ ಅಂಗಡಿಗಳಲ್ಲಿ ಕಂಗೊಳಿಸುವ ವಸ್ತ್ರಭೂಷಣಗಳು, ಬೆಳಕಿಗೆ ವೈವಿಧ್ಯವನ್ನು ಕೊಡುವ ನಿಯಾನ್ ಸೈನುಗಳು, ಅಲ್ಲಲ್ಲಿಯೇ ಕೇಳಿಬರುವ ರೇಡಿಯೋ ಸಂಗೀತ, ಹೋಟೆಲುಗಳಿಂದ ಬರುವ ಭಕ್ಷ್ಯಗಳ ಕಂಪು....ಒಂದು ದಿನದ ಮಟ್ಟಿಗಾದರೂ ನನ್ನ ಜೀವನದ ಬಿಗುಮಾನವನ್ನು ಮರೆತು ಕೈಯಲ್ಲಿ ಒಂದು ಪೊಟ್ಟಣ ಗರಿಯಾದ ತಿಂಡಿಯನ್ನು ಹಿಡಿದು ಕುರುಕುತ್ತಾ ದೊಡ್ಡ ಪೇಟೆಯಲ್ಲಿ ನಿರಾತಂಕನಾಗಿ ಅಲೆಯಬೇಕೆಂದು, ನಾನು ಮೊನ್ನೆ ಬೆಂಗಳೂರಿಗೆ ಹೊರಟದ್ದು. ಅಲ್ಲಿರುವ ನನ್ನ ಮಿತ್ರರೂ ನನ್ನ ಮನೋವೃತ್ತಿಗೆ ಹೊಂದಿಕೊಳ್ಳತಕ್ಕವರೇ; ಆದರೆ ಈ ಬಾರಿಯೇನೋ ಒಬ್ಬೊಬ್ಬರಿಗೆ ಒಂದೊಂದು ತರಹ ಹುಚ್ಚು ಹಿಡಿದಂತೆ ತೋರಿತು.

ನನಗೆ ತಾತ್ಕಾಲಿಕವಾಗಿ ಅನ್ನದಾತರಾಗಿದ್ದ ಭಟ್ಟರು ಆಗ ಸಂಸ್ಕೃತ ವ್ಯಾಸಂಗದಲ್ಲಿ ಮುಳುಗಿದ್ದರು; ಆದರೆ ಸಾಹಿತ್ಯಭಾಗದಲ್ಲಲ್ಲ, ಕರ್ಮಕಾಂಡದಲ್ಲಿ. ನಾನು ಬೆಳಗ್ಗೆ ಕಾಫಿ ತೀರಿಸಿಕೊಂಡು ಹೊರಡೋಣವೆಂದಿದ್ದರೆ ಭಟ್ಟರು ವಿವಾಹಾದಿ ಕರ್ಮಗಳ ಮೇಲೆ ಒಂದು ಉಪನ್ಯಾಸವನ್ನಾರಂಭಿಸಿದರು. ಕಾಫಿಯನ್ನು ಹೊಗಳುವುದರಲ್ಲಿ ಉಪನ್ಯಾಸವನ್ನು ಮರೆಯಿಸಿ ತಲೆ ತಪ್ಪಿಸಿಕೊಂಡು ಹೋಗಬೇಕೆಂದು ಹವಣಿಸುತ್ತಿರುವಲ್ಲಿ ನನ್ನ ಪ್ರಿಯಮಿತ್ರ

ರಾಯರು ಬಂದರು. ರಾಯರು ಉತ್ತಮವರ್ಗದ ಸಾಹಿತಿಗಳು, ಕಥೆಗಾರರು–ಆದರೂ ಅವರನ್ನು ನೋಡಿದಾಗ ನನಗೆ ಸಂತೋಷವೇ ಆಯಿತು. ಸಾಧಾರಣವಾಗಿ ಸಾಹಿತಿಗಳೆಂದರೆ ಹಸಿದ ಹುಲಿಯಂತೆ ಕಂಡವರ ಮೇಲೆ ಬಿದ್ದು, ತಮ್ಮ ಕೃತಿಗಳನ್ನು ಪ್ರಯೋಗಿಸಿ, ಅವರನ್ನು ಅರೆಜೀವಮಾಡಿ, ಅನಂತರ ಮತ್ತೊಂದು ಸಲದ ಪ್ರಯೋಗಕ್ಕೆ ಉಳಿದಿರಲೆಂದು ಸ್ವಲ್ಪ ಅನ್ನ ಹಾಕಿ ಹೊರದೂಡುತ್ತಾರೆ. "ನಿನ್ನೆ ಸಂಜೆ ಲಂಡನ್ನಿನಲ್ಲಿ ಪ್ರಕಟವಾದ ಪುಸ್ತಕವನ್ನೋದಿದಿರಾ ?" ಎಂದು ಪ್ರಶ್ನೆ ಕೇಳಿ ನಿಮ್ಮ ತೇಜೋವಧೆ ಮಾಡುತ್ತಾರೆ. ರಾಯರು ಹಾಗಲ್ಲ. ಅಲ್ಲದೆ ಅವರ ಮುಖದಲ್ಲಿ ಒಂದು ಬಗೆಯ ಆತ್ಮಸಂತೋಷ, ತೃಪ್ತಿ, ಶಾಂತಿ—ಇವು ಯಾವಾಗಲೂ ನಗುತ್ತಿರುತ್ತವೆ. ತುಂಬಿದ ಮುಖ, ತುಂಬಿದ ಧಾರಾಳ—ಅವರನ್ನು ನೋಡಿದೊಡನೆಯೇ ನಿಮಗೆ ಔತಣ ಹೇಳಲು ಬಂದಿದಾರೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಅವರು ಏರ್ಪಡಿಸುವ ಊಟ ಸಹ ಹಿತವಾದದ್ದು, ಅಲ್ಲದೆ ಮಿತವಾದದ್ದಲ್ಲ. ಊಟಕ್ಕೆ ಕುಳಿತಾಗ ಅವರು ತಮ್ಮ ಕೃತಿಗಳ ವಿಷಯ ಪ್ರಸ್ತಾಪಿಸುವುದೇ ಇಲ್ಲ. ನಾಳೆ ನಡೆಯಲಿರುವ ಸಂಗೀತಕಚೇರಿ, ಪ್ರದರ್ಶಿತವಾಗಲಿರುವ ಚಿತ್ರ, ತಾರೆಯರ ಗುಣಾವಗುಣಗಳು—ಮುಂತಾದ ವಿಷಯಗಳಲ್ಲಿ ಟೀಕೆ ಮಾಡಿ, ಸೂಕ್ತವಾದ ಸಲಹೆಗಳನ್ನು ಕೊಟ್ಟು, ನಿಮಗೆ ವ್ಯರ್ಥವಾದ ವೆಚ್ಚವಿಲ್ಲದಂತೆ ಮಾಡುತ್ತಾರೆ; ಅಥವಾ ವೆಚ್ಚವಾಗಬೇಕಾದರೆ ಅದನ್ನು ತಾವೇ ವಹಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಚಿನ್ನದಂಥ ಮನುಷ್ಯ. ಆ ಚಿನ್ನದ ಉಪಯೋಗ ನಮಗೆ ಅನೇಕ ವೇಳೆ ದೊರೆತಿದೆ. ಆದ್ದರಿಂದ ಅವರನ್ನು ನೋಡಿದಾಗ ನಿಜವಾಗಿಯೂ ಆನಂದವಾಯಿತು. ಆದರೆ ಅಂದೇನೋ ಅವರು ಔತಣ ಹೇಳುವುದಲ್ಲದೆ ಬೇರೆ ಉದ್ದೇಶವನ್ನು ಇಟ್ಟುಕೊಂಡಿದ್ದಂತೆ ತೋರಿತು. ಅವರ ತಲೆಯನ್ನು ಈ ಕೆನ್ಸಿಂಗ್ಟನ್ ಪಾರ್ಕಿನ ಹುಳು ಕೊರೆದಿತ್ತು.

ಅವರು ಹಿಂದೆ ಆ ಪಾರ್ಕಿನ ವಿಷಯವಾಗಿ ಉತ್ತಮವಾದ ಪ್ರಬಂಧವೊಂದನ್ನು ಬರೆದಿದ್ದರು. ಪ್ರಬಂಧದ ಕಲೆಗೆ ತಾವಲ್ಲದೆ ಆ ಪಾರ್ಕೇ ಕಾರಣವೆಂದು ಅವರಿಗೆ ಹೇಗೋ ಭ್ರಮೆ ಹುಟ್ಟಿರಬೇಕು. ಅಂದಿನಿಂದ ಅವರ ಮನೆಯಲ್ಲಿ ಇತರ ಭಕ್ಷ್ಯಗಳೊಡನೆ ನಂಜಿಕೊಳ್ಳಲು ಕೆನ್ಸಿಂಗ್ಟನ್ ಪಾರ್ಕನ್ನೂ ಬಡಿಸುವ ಪದ್ಧತಿಯಾಗಿಹೋಗಿದೆ. ಆ ದಿನವೂ ನಮ್ಮನ್ನು ಊಟಕ್ಕೆ ಬರಹೇಳಿ ಅನಂತರ ಪಾರ್ಕಿಗೆ ಎಳೆದುಕೊಂಡು ಹೋದರು. ನಾನು ಪಾರ್ಕನ್ನು ನೋಡಿದ್ದೇನೆಂದು ಗಿಣಿಗೆ ಹೇಳುವ ಹಾಗೆ ಹೇಳಿದೆ; ಬೇರೆ ಕೆಲಸವಿದೆಯೆಂದು ಅಂಗಲಾಚಿದೆ. ಆದರೂ ರಾಯರ ಸೌಜನ್ಯದ ಹಿಂದೆ

ಅಡಗಿರುವ ವಜ್ರಮುಷ್ಟಿಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

ನಮ್ಮ ಭಟ್ಟರಲ್ಲಿ ಗೌರವಾರ್ಥವಾಗಿ ಮೋಟಾರು ಎಂದು ಕರೆಸಿಕೊಳ್ಳುವ ಚಿಕ್ಕ ವಾಹನವೊಂದಿದೆ. ಅದರಲ್ಲಿ ನಾವೆಲ್ಲರೂ ಉಸಿರು ಹಿಡಿದುಕೊಂಡು ಕುಳಿತು ಹೊರಟೆವು. ನಮ್ಮ ಮಿತ್ರರಾದ ಆಚಾರ್ಯರಿಗೂ ಕೆನ್ಸಿಂಗ್ಟನ್ ಪಾರ್ಕೆಂದರೆ ಪ್ರಾಣ. ಆದ್ದರಿಂದ ಮಲ್ಲೇಶ್ವರದಲ್ಲಿ ಅವರ ಮನೆಗೆ ಹೋಗಿ ಅವರನ್ನು ತೊಡೆಯ ಮೇಲೆ ಕೂರಿಸಿಕೊಂಡು ದಾರಿಯಲ್ಲಿ ಲಾರಿಗಳ ಗುರಿಗೆ ಸಿಕ್ಕದೆ ಪಾರ್ಕನ್ನು ತಲಪಿದೆವು. ಆಗಲೇ ಬಿಸಿಲೇರಿತ್ತು. ಹೊರಡುವ ಮುನ್ನ ಮಾವಳ್ಳಿಯ ಹೋಟಲಿಗೆ ಭೇಟಿ ಕೊಡೋಣವೆಂಬ ನನ್ನ ಸಲಹೆಗೆ ಭಟ್ಟರು 'ವೀಟೊ' ಹಾಕಿದ್ದರು. ಇಷ್ಟೆಲ್ಲಾ ಪಾಡುಪಟ್ಟು ಊರಿಗೆ ಬಹುದೂರದಲ್ಲಿರುವ ಪಾರ್ಕಿಗೆ ಬಂದದ್ದಕ್ಕೆ ಪ್ರತಿಫಲವೂ ಏನೂ ಕಾಣಲಿಲ್ಲ. ಪಾರ್ಕಿನಲ್ಲಿ ಎತ್ತ ನೋಡಿದರೂ ಜನರ ಸುಳಿವಿಲ್ಲ; ನೆಲದ ಮೇಲೆ ಹಸುರಿನ ಚಿಹ್ನೆಯಿಲ್ಲ; ಹೂವಿನ ಗಿಡಗಳನ್ನೇನೋ ಬೆಳೆಸಿದ್ದರೂ ಎಲ್ಲಾ ಒಣಗಿ ನಿಂತಿದ್ದವು. ಅಲ್ಲಲ್ಲಿ ರಸ್ತೆಯಲ್ಲಿ ನಿಂತಿದ್ದ ಲಾರಿಗಳಿಂದ ಪಾರ್ಕಿನ ಅಂದಕ್ಕೆ ಒಪ್ಪ ಕೊಟ್ಟಂತೇನೂ ಆಗಲಿಲ್ಲ. ಆದರೆ ಇದೊಂದೂ ರಾಯರ ಉತ್ಸಾಹವನ್ನು ಉಡುಗಿಸಲಿಲ್ಲ. ಪಾರ್ಕಿನ ಸೊಬಗನ್ನು ಮೊದಲ ನೋಟದಲ್ಲಿ ಮನಗಾಣಲಾಗುವುದಿಲ್ಲವೆಂದೂ ಪದೇ ಪದೇ ಬಂದು ಅದರ ಆವರಣದಲ್ಲಿ ನೆನೆಯಬೇಕೆಂದೂ ಅಪ್ಪಣೆ ಕೊಡಿಸಿದರು. ಆದರೂ ನನ್ನ ಮುಖದಲ್ಲಿ ಉತ್ಸಾಹ ಕಾಣದೆ ಇದ್ದುದನ್ನು ನೋಡಿ "ಈಗೇನೋ ನೆಲವೆಲ್ಲಾ ಒಣಗಿದೆ. ಆದರೆ ವಸಂತಕಾಲದಲ್ಲಿ ಇದರ ಸೊಬಗನ್ನು ನೋಡಬೇಕಾಗಿತ್ತು" ಎಂದರು. ಈಗ ಇಳಿವಯಸ್ಸಾಗಿರುವವರು ಹಿಂದೆ ಯುವತಿಯರಾಗಿದ್ದಿರಬೇಕು, ನಿಜ. ಆದರೆ ಕೇವಲ ಆ ನೆನಪು ಮಾತ್ರವಾದರೆ ಯಾರ ಮನಸ್ಸನ್ನೂ ಸೆಳೆಯಲಾರದು.

ನನಗೂ ಪಾರ್ಕಿನ ಹುಚ್ಚು ಹಿಡಿಸುವವರೆಗೆ ಹಿಂದಿರುಗುವುದಿಲ್ಲವೆಂದು ರಾಯರು ಪ್ರತಿಜ್ಞೆ ಮಾಡಿದ್ದಿರಬೇಕು. ಅಲ್ಲಿಂದ ನಮ್ಮನ್ನು ಹತ್ತಿರವಿರುವ ಕೆರೆಗೆ ಕರೆದುಕೊಂಡು ಹೋದರು. ಅದರಲ್ಲಿ ಒಲೆಯ ಗುಪ್ಪುಗಳಂತೆ ಮೂರು ದಿಣ್ಣೆಗಳಿವೆ. ದೋಣಿಯಲ್ಲಿ ಕುಳಿತು ಆ 'ದ್ವೀಪ'ಗಳಿಗೆ ಹೋಗಬೇಕೆಂದು ನನ್ನ ಮಿತ್ರರೆಲ್ಲಾ ನಿಶ್ಚಯಿಸಿದರು. ನೌಕಾವಿಹಾರದ ವಿಷಯದಲ್ಲಿ ನನಗೆ ಸ್ವಲ್ಪ ಮೊಗಲ ಬಾದಷಹರ ಅಭಿರುಚಿ. ನೌಕೆಯ ಮಾಟದಲ್ಲಿಯೂ ವರ್ಣವಿನ್ಯಾಸದಲ್ಲಿಯೂ ಕಲೆಯ ಕೌಶಲ ಎದ್ದು ತೋರುತ್ತಿರಬೇಕು; ಅದು ಒರಗುದಿಂಬುಗಳಿಂದಲೂ ರತ್ನಗಂಬಳಿಗಳಿಂದಲೂ ಸುಸಜ್ಜಿತವಾಗಿರಬೇಕು. ಶರತ್ಕಾಲದ ರಾತ್ರಿ, ಚಂದ್ರಿಕೆ, ನನ್ನ ಪ್ರೇಮಾನುವರ್ತಿ

ಯಾದ ಗೆಳತಿಯ ಮಧುರ ಸಲ್ಲಾಪ, ಗೀತಗೋವಿಂದದ ಅಷ್ಟಪದಿಗಳ ಸುಶ್ರಾವ್ಯವಾದ ಲಯ—ಈ ಬಗೆಯ ಕನಸೇನಿದ್ದರೂ ಅಂದಿನ ಅನುಭವ ದಿಂದ ಮಣ್ಣುಗೂಡಿಹೋಯಿತು. ಬೇಸಗೆಯ ನಡುಹಗಲಿನ ಬಿಸಿಲು ಶರಚ್ಚಂದ್ರನುತಿರಲಿಲ್ಲ. ನಮ್ಮ ಆಚಾರ್ಯರ ಕವನಗಳು ಎಂತೇ ಇರಲಿ, ಇನಿಯಳ ಕೊರಳ ದನಿಗೆ ಸರಿದೂಗಲಾರವು. ಶಾಸ್ತ್ರವ್ಯಾಖ್ಯಾನದಿಂದ ಕಿವಿಯನ್ನು ಕೊರೆಯುತ್ತಿದ್ದ ಭಟ್ಟರ ಜಲ್ಪನೆಗೂ ಪ್ರೇಮಾಲಾಪಕ್ಕೂ ಯಾವ ಸಾದೃಶ್ಯವೂ ತೋರಲಿಲ್ಲ. ಇದರ ಮೇಲೆ, ಮೀನು ಹಿಡಿಯುವವನ ದೋಣಿಯೇ ಈ ರಸಿಕರಿಗೆ ಕ್ರೀಡಾನೌಕೆ ; ಅದೂ ವರ್ಷಗಟ್ಟಲೆ ಸಾವಿರಾರು ಜನರಿಗೆ ಸೇವೆ ಮಾಡಿ ಹಣ್ಣಾಗಿತ್ತು. ಅದನ್ನು ನಡೆಸುವುದಕ್ಕೆ ನಾವಿಕನಿರ ಲಿಲ್ಲ. ತಾವು ಸರಳ ಜೀವಿಗಳೆಂದೂ ಯಾವ ಕೆಲಸಕ್ಕಾದರೂ ಸಿದ್ಧರೆಂದೂ ಹೆಮ್ಮೆಪಡುತ್ತ ರಾಯರೂ ಆಚಾರ್ಯರೂ ತಾವೇ ಹುಟ್ಟು ತೆಗೆದುಕೊಂಡು ಹೊರಟರು. ಕಥೆ ಕವನಗಳನ್ನು ಕಟ್ಟುವುದಕ್ಕೂ ದೋಣಿ ನಡೆಸುವುದಕ್ಕೂ ನಡುವೆ ಸ್ವಲ್ಪ ಅಂತರವಿದೆಯೆಂಬುದನ್ನು ಅವರು ಮರೆತರೂ ನಾನು ಮರೆಯ ಲಾಗಲಿಲ್ಲ. ನನ್ನ ಜೀವಕ್ಕೆ ಬೆಲೆಯುಂಟು. ಮೇಲೆ ಬಿಸಿಲಿನ ತಾಪ; ಒಳಗೆ ಹಸಿವಿನ ತಾಪ ; ಜೊತೆಗೆ ಅಕಾಲದ ದುರ್ಮರಣದ ಭೀತಿ. ಆದರೂ ಬೇರೆ ಪಥವಿಲ್ಲದ್ದರಿಂದ ಹೆಂಡತಿ ಮಕ್ಕಳನ್ನು ಒಂದು ಬಾರಿ ನೆನೆದು, ನಂಬದ ದೈವಗಳಿಗೆಲ್ಲಾ ಮನಸ್ಸಿನಲ್ಲಿಯೇ ಕೈಮುಗಿದು, ಹಣೆಯ ಬರಹ ವಿದ್ದಂತಾಗಲೆಂದು ದೋಣಿಯಲ್ಲಿ ಕುಳಿತೆ. ಅದು ನಿರ್ದಿಷ್ಟವಾದ ಗುರಿ ಇಲ್ಲದೆ ಸರ್ಪಗಮನದಿಂದ ಮುಂದುವರಿಯಿತು. ಆ ವಕ್ರಗತಿಯನ್ನು ನೋಡಿ ರಾಯರಿಗೆ ಸ್ವಲ್ಪ ನಾಚಿಕೆಯಾಗಿರಬೇಕು. "ಯಾವ ಗುರಿಯೂ ಇಲ್ಲದೆ ನಿಶ್ಚಿಂತೆಯಾಗಿ ದೋಣಿಯನ್ನು ತೇಲಿಬಿಡುವುದರಲ್ಲಿಯೂ ಒಂದು ಅಪೂರ್ವ ವಾದ ಸೌಖ್ಯವಿದೆ" ಎಂದು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ ಹುಟ್ಟಿ ನಿಂದ ನನಗೆ ತುಷಾರ ಸ್ನಾನ ಮಾಡಿಸಿದರು. ಆದರೂ ಈ ನಾವಿಕರ ಕೌಶಲವನ್ನು ನೋಡುವುದರಲ್ಲಿ ನನ್ನ ಸಂಕಟ ಮರೆಯಾಯಿತೆಂದೇ ಹೇಳ ಬೇಕು. ಆಚಾರ್ಯರು ಹುಟ್ಟನಿಂದ ತಮ್ಮ ಮುಖವನ್ನೇ ತಿವಿದುಕೊಂಡಾಗ ಲಂತೂ ನಾನು ಅಲ್ಲಿಗೆ ಬಂದದ್ದು ವ್ಯರ್ಥವಲ್ಲವೆಂದು ದೃಢವಾಯಿತು. ಉಳಿದ ಕಷ್ಟಗಳು ಎಷ್ಟಿದ್ದರೇನು ! "ನ ಹಿ ಸುಖಂ ದುಃಖೈರ್ವಿನಾ ಲಭ್ಯತೆ"

ನಾವಿಕರು ದೋಣಿಯನ್ನು ನಡೆಸಿದರೋ ಅಥವಾ ದೋಣಿಯೇ ನಾವಿಕರನ್ನು ಎಳೆದೊಯ್ದಿತೋ, ಅಂತೂ ಒಂದು ದ್ವೀಪಕ್ಕೆ ಬಂದು ಸೇರಿ ದೆವು. ನನ್ನ ಮಿತ್ರರು ಉತ್ಸಾಹದಿಂದ ನೆಲಕ್ಕೆ ಹಾರಿ, ನೀರಿಗೆ ಬಿದ್ದು

ಒದ್ದೆ ಬಟ್ಟೆಗಳನ್ನು ಹಿಂಡಿಕೊಂಡು ದಡವನ್ನು ಹತ್ತಿದರು. ದ್ವೀಪವೇನೋ ರಮ್ಯವಾಗಿತ್ತೆಂದು ಒಪ್ಪಬೇಕು. ಅಂದವಾಗಿ ರಚಿಸಿದ್ದ ಪುಷ್ಪಶಯ್ಯೆಗಳ ಮೇಲೆ ಮರದ ನೆರಳಿನ ನಡುವೆ ನುಸುಳಿ ನಲಿಯುವ ಸೂರ್ಯರಶ್ಮಿ ಮನೋಹರವಾಗಿತ್ತು. ನೀರಿನ ಅಂಚಿನವರೆಗೂ ಹೂವಿನ ಪೊದೆಗಳನ್ನು ಬೆಳೆಯಿಸಿದ್ದರು. ಮಧ್ಯದಲ್ಲಿ ಒಂದು ಸಣ್ಣ ಮಂಟಪದೊಳಗೆ ಪೀಠಗಳಿದ್ದವು. ನಮ್ಮ ಸರಳಜೀವಿ ನಾವಿಕರು ಆಯಾಸದಿಂದ ಏದುತ್ತಾ ಅಲ್ಲಿಗೆ ಹೋಗಿ ಕುಳಿತರು. ನಾನು ದಡದಲ್ಲಿಯೇ ಒಂದು ಲತಾದ್ವಾರದಲ್ಲಿ ನಿಂತು ಕೆರೆಯಲ್ಲಿ ಒಂದನ್ನೊಂದು ಅಟ್ಟಿ ಬರುತ್ತಿದ್ದ ಅಲೆಗಳ ಸೊಬಗನ್ನು ನೋಡುತ್ತಾ ತಲ್ಲೀನನಾದೆ. ಕ್ಷಣಕಾಲ ಮನಸ್ಸಿಗೆ ನೆಮ್ಮದಿಯಾಯಿತು ಎಂದುಕೊಳ್ಳುವಷ್ಟರಲ್ಲಿಯೇ ಹಿಂದಿನಿಂದ "ಓಹೋಹೋ, ಇಲ್ಲಿ ನೋಡಿ ವರ್ಡ್ಸ್‌ವರ್ತ್ ನಿಂತಿದ್ದಾನೆ!" ಎಂದು ಭಟ್ಟರ ಧ್ವನಿ ಕೇಳಿಬಂತು. ಕವಿವರ್ಯ ಆಚಾರ್ಯರೂ ಹುಸಿನಗೆ ನಗುತ್ತ ಮುಂದೆ ಬಂದರು. ಪ್ರಕೃತಿಯ ಸೊಬಗು ತಮಗೊಬ್ಬರಿಗೇ ಗುತ್ತಿಗೆಯೆಂದು ತಿಳಿದಿದ್ದರೋ ಏನೋ. ಇವರಂತೆ ದಿನಕ್ಕೆ ಇಪ್ಪತ್ತನಾಲ್ಕು ಘಂಟೆ ಕವಿಯಾಗಿರುವ ಹಂಬಲು ನನಗಿಲ್ಲವಾದರೂ ಆ ಘಳಿಗೆಯಲ್ಲೇನೋ ನನಗೆ ನಿಜವಾಗಿಯೂ ವರ್ಡ್ಸ್‌ವರ್ತನ ಮನೋಭಾವನೇ ಇತ್ತು ; ಹಾಸ್ಯಕ್ಕೇನೂ ಕಾರಣವಿದ್ದಂತೆ ತೋರಲಿಲ್ಲ. ಅಲೆಗಳ ಮತ್ತು ಹೂವುಗಳ ದಿವ್ಯನೃತ್ಯದ ಹಬ್ಬ ಕಣ್ಣೆದುರಿಗಿದ್ದರೂ ನನ್ನ ಮಿತ್ರರಿಗೆ ನನ್ನನ್ನು ಹಾಸ್ಯಮಾಡುವುದರ ಮೇಲೆಯೇ ಜ್ಞಾನ. ಭಟ್ಟರು "ನಮ್ಮ ಅಭಿನವ ವರ್ಡ್ಸ್‌ವರ್ತನ ಫೋಟೋ ತೆಗೆಯುತ್ತೇನೆ" ಎಂದು ತಮ್ಮ ಕ್ಯಾಮೆರಾವನ್ನು ಕ್ಲಿಕ್ಕಿಸಿದರು. ಮೂರು ದಿನವಾದ ಮೇಲೆ ಆ ಚಿತ್ರವನ್ನು ನೋಡಿದೆವು. ಅಷ್ಟೇನೂ ಚೆನ್ನಾಗಿರಲಿಲ್ಲ. ಅದನ್ನು ಕಂಡು ಈ ಮೂವರೂ ಹುಚ್ಚು ಹುಚ್ಚಾಗಿ ನಕ್ಕರು. ನಾನೇನೋ ವರ್ಡ್ಸ್‌ವರ್ತ್ ಅಲ್ಲದಿರಬಹುದು, ಆದರೆ ಭಟ್ಟರು ಫೋಟಾಗ್ರಫರೂ ಅಲ್ಲ ; ಚಿತ್ರವನ್ನು ನೋಡುವವರು ಇದನ್ನು ಮರೆಯದಿರಲಿ.

ನನ್ನನ್ನು ಹಾಸ್ಯಮಾಡಿ ನಕ್ಕ ಆಚಾರ್ಯರು ಈಗ ತಾವೇ ಅಲ್ಲಿ ನಿಂತು, ನಿಮಿಲಿತನೇತ್ರರಾಗಿ, ಒಂದು ಬಗೆಯ "ಕವಿಸಹಜವಾದ" ಅಂತರ್ದೃಷ್ಟಿಯಿಂದ ಸುತ್ತಲೂ ನೋಡುತ್ತಾ, "ಈಗ ಬೆಂಗಾಡಾಗಿರುವ ಈ ಉಪವನವೆಲ್ಲಾ ವಸಂತಋತುವಿನಲ್ಲಿ ಪುಷ್ಪಿತವಾದರೆ ಎಂತಹ ಸಂಯಮಿಯ ಮನಸ್ಸನ್ನಾದರೂ ಸೆಳೆಯುವುದು. ಪಟ್ಟಣದ ಗಲಭೆ, ಜನರ ಆತುರ, ಕೇವಲ ಮೃತ್ಸಮಾನವಾದ ಹೊನ್ನಿಗಾಗಿ ಹೋರಾಡುವ ಕರುಬುಜನರ

ರಾಗದ್ವೇಷಾದಿಗಳು—ಇವೆಲ್ಲವನ್ನೂ ಬಿಟ್ಟು ಬರಬಾರದೆ ಈ ಶಾಂತಿಯ ನೆಲೆವೀಡಿಗೆ! ಇಲ್ಲಿ ನಿಂತು ಧ್ಯಾನಮಾಡುವವನಿಗೆ, ಪ್ರಕೃತಿಯ ಹೃದಯವನ್ನು ಒಳಹೋಗುವವನಿಗೆ, ಜೀವನದ ರಹಸ್ಯ ಹಸ್ತಗತವಾದೀತು!" ಎಂದು ಉದ್ಗಾರ ತೆಗೆದರು. ಮಾನವನ ಕಷ್ಟನಿಷ್ಠುರಗಳಿಗೆ ಬೆನ್ನು ತಿರುಗಿಸಿ ಹಸಿವಿನ ಸಂಕಟವನ್ನು ಮರೆಯುವ ಈ ಬಗೆಯ ಪ್ರಕೃತಿಪ್ರೇಮವನ್ನು ನೋಡಿದರೆ ನನಗೆ ಮೈ ಉರಿಯುತ್ತದೆ. ಹೀಗೆ ಮಾತನಾಡುವವರು ನಾನು ಹಿಂದಿನಿಂದ ಬಲ್ಲ ಕರುಣೆಯ ಮೂರ್ತಿಯಾದ ಆಚಾರ್ಯರಿರಬಹುದೆ ಎಂದು ನನಗೆ ಸಂದೇಹವುಂಟಾಯಿತು. ನಾನು ತಟ್ಟನೆ ದೋಣಿಗೆ ಹೋಗಿ ಕುಳಿತು, ಅವರು ಬರದಿದ್ದರೆ ನಾನೊಬ್ಬನೇ ಹೊರಟುಹೋಗುವೆನೆಂದು ಮುಷ್ಕರ ಹೂಡಿದ ಮೇಲೆ ಈ ಹದಿನಾರಾಣೆ ಕವಿಗಳೆಲ್ಲರೂ ನನ್ನನ್ನು "ಸೌಖ್ಯಘಾತಕ" ಎಂದು ಶಪಿಸುತ್ತ ಇಳಿದು ಬಂದರು. ಅಲ್ಲಿಂದ ನಾವು ರಾಯರ ಮನೆಯನ್ನೂ ನನ್ನ ತಾಳ್ಮೆಯ ಎಲ್ಲೆಯನ್ನೂ ತಲಪುವ ವೇಳೆಗೆ ಮಧ್ಯಾಹ್ನ ಒಂದು ಘಂಟೆಯಾಗಿತ್ತು.

ಊಟಕ್ಕೆ ಕುಳಿತು ಸ್ವಲ್ಪ ಹೊತ್ತಾದ ಮೇಲೆ ಕೆನ್ಸಿಂಗ್ಟನ್ ಪಾರ್ಕ್ ಪಿಶಾಚಗ್ರಸ್ತರಾಗಿದ್ದ ಈ ಮೂವರಿಗೂ ವಿಮೋಚನೆಯ ಕಾಲ ಬಂದಂತೆ ತೋರಿತು. ಆಚಾರ್ಯರು ಶ್ಯಾಮಿಗೆ ಪಾಯಸದ ವಿಷಯದಲ್ಲಿ ತಮ್ಮ ವಿಚಾರಪರಿಪ್ಲುತವಾದ ಅಭಿಪ್ರಾಯಗಳನ್ನು ಕೊಟ್ಟರು; ರಾಯರು ದೇವಿಕಾರಾಣಿಯ ಅಭಿನಯ ಕೌಶಲವನ್ನು ವಿಮರ್ಶಿಸಿದರು; ಭಟ್ಟರು ಕಾನನಬಾಲೆಯ ಗಾನವನ್ನು ಹೊಗಳಿದರು. ಇಂಥ ಗಹನವಾದ ವಿಷಯಗಳಲ್ಲಿ ನನ್ನ ಮನಸ್ಸಿಗೂ ವರ್ತನೆ ಹೆಚ್ಚು. ಅಲ್ಲದೆ ಇವರೆಲ್ಲರೂ ಅನುಭವಿಗಳು. ಅವರ ವಿಮರ್ಶೆ ದಿಗ್ದರ್ಶಕವಾದದ್ದು. ನನ್ನ ಅಸಮಾಧಾನ ಮಾಯವಾಗಿ ಉಲ್ಲಾಸ ತಲೆದೋರಿತು. ಮೂರು ಘಂಟೆಯ ಹೊತ್ತಿಗೆ ರಾಯರು ಕಾಫಿ ತಂದುಕೊಟ್ಟಾಗಲಂತೂ ಅವರಿಗೆ ಅರ್ಧ ರಾಜ್ಯವನ್ನೇ ಕೊಟ್ಟುಬಿಡುವುದರಲ್ಲಿದ್ದೆ.

ಆದರೆ ಬರಸಿಡಿಲು ಹೊಡೆಯಬೇಕಾದರೆ ಆಕಾಶ ನಿರ್ಮಲವಾಗಿರುವಾಗಲೇ. ನಾವೆಲ್ಲರೂ ಪ್ರಸನ್ನರಾಗಿರುವ ಸಮಯ ನೋಡಿಕೊಂಡು ರಾಯರು ಅದುವರೆಗೂ ಅಡಗಿಸಿಟ್ಟಿದ್ದ ತಮ್ಮ ದುರುದ್ದೇಶವನ್ನು ಹೊರಗೆಡಹಿದರು. ಉಳಿದವರು ಏನೂ ತಿಳಿಯದಂತೆ ಎಲೆ ಅಡಿಕೆ ಮೆಲ್ಲುತ್ತಿದ್ದರು. ಕೆನ್ಸಿಂಗ್ಟನ್ ಪಾರ್ಕಿನ ವಿಷಯವಾಗಿ ನಾವೆಲ್ಲರೂ ಒಂದೊಂದು ಲೇಖನವನ್ನು ಬರೆಯಬೇಕೆಂದೂ, ಅದೆಲ್ಲವನ್ನೂ ಒಟ್ಟುಗೂಡಿಸಿ ಪುಸ್ತಕ

ರೂಪದಲ್ಲಿ ಪ್ರಕಟಿಸಬೇಕೆಂದೂ ರಾಯರ ಸೂಚನೆ. ಪಾರ್ಕಿನ ಭೂತ ಮತ್ತೆ ಬೃಹದಾಕಾರದಿಂದ ಎದ್ದು ನಿಂತಿತು. ಭಟ್ಟರೇನೋ—ಅವರು ಮೊದಲಿನಿಂದಲೂ ಒಳಸಂಚಿನಲ್ಲಿದ್ದಿರಬಹುದು—"ರಾಯರು ಇಷ್ಟು ಒಳ್ಳೆಯ ಊಟ ಹಾಕಿಸಿರುವಾಗ ಅವರ ಮಾತಿನಂತೆ ನಡೆಯುವುದು ನಮ್ಮ ಕರ್ತವ್ಯ" ಎಂದು ಅಭಿಪ್ರಾಯಪಟ್ಟರು. ಇದುವರೆಗೂ ನಿಷ್ಕಪಟಿಗಳಾಗಿದ್ದ ರಾಯರು ಇಂಥ ಅಧೋಗತಿಗೆ ಇಳಿಯಬಲ್ಲರೆಂದು ನಾನು ನಂಬಲಾರದೆ ಹೋದೆ. ಹಸಿದವರಿಗೆ ಅನ್ನವಿಟ್ಟದ್ದಕ್ಕೆ ಈ ರೀತಿ ಪ್ರತಿಫಲವನ್ನು ಅಪೇಕ್ಷಿಸುವಷ್ಟು ಕೆಟ್ಟರಲಾರರು. ಕನಸಿನಲ್ಲಾದರೂ ಇಂಥ ಭಾವನೆಗಳನ್ನು ಅವರಿಗೆ ಆರೋಪಿಸಿದವರಿಗೆ ರೌರವಾದಿ ನರಕಪ್ರಾಪ್ತಿಯಾದೀತು. ಹೀಗೆ ನಾನು ಎಷ್ಟು ಹೇಳಿದರೂ ಗಮನಕೊಡದೆ ಭಟ್ಟರು ತಮ್ಮ ವಾದವನ್ನೇ ಸಮರ್ಥಿಸಿದರು. ನನಗೆ ರಾಯರ ಸೂಚನೆಯೂ ಭಟ್ಟರ ವಾದವೂ ವಿಚಿತ್ರವಾಗಿ ಕಂಡವು. ಇವರೆಲ್ಲರೂ ಸಾಹಿತ್ಯಪ್ರೇಮಿಗಳು. ಆದರೂ ರಾಯರು ಇಷ್ಟವಿಲ್ಲದವರಿಂದ ಲೇಖನ ಬರೆಯಿಸಲು ತೊಡಗಿದ್ದರು. ಭಟ್ಟರು ಕೇವಲ ಕೃತಜ್ಞತೆಗಾಗಿ ಬರೆದುಕೊಡಲು ಸಿದ್ಧರಾಗಿದ್ದರು. ಮಧ್ಯೆ ನಾನೇನು ಮಾಡಬೇಕು! ನನಗೆ ಲೇಖನ ಬರೆಯುವುದೆಂದರೆ ಪ್ರಾಣಸಂಕಟ; ಕರೆದಾಗ ಪ್ರಸನ್ನಳಾಗುವಷ್ಟು ಸುಲಭಳಲ್ಲ, ನನ್ನ ಸ್ಫೂರ್ತಿದೇವಿ. ಅಲ್ಲದೆ ನನಗೆ ಆ ಪಾರ್ಕಿನ ಮೇಲೆ ಪ್ರೇಮವಿಲ್ಲ, ಸಾವಿರ ಬಾರಿ ಇಲ್ಲ. "ಖಂಡಿತವಾಗಿಯೂ ನಾನು ಒಂದಕ್ಷರವನ್ನೂ ಬರೆಯುವುದಿಲ್ಲ, ಇಂಥ ಪುಸ್ತಕಗಳನ್ನು ಪ್ರಕಟಿಸುವುದರಲ್ಲಿ ನನಗೆ ನಂಬಿಕೆಯಿಲ್ಲ, ವಾಚಕವೃಂದ ನನಗೇನೂ ಅಪರಾಧಮಾಡಿಲ್ಲ" ಎಂದು ನಿಷ್ಠುರೋಕ್ತಿಗಳನ್ನಾಡಿ ಅಲ್ಲಿಂದ ಓಡಿ ಹೋದೆ.

ಮೈಸೂರಿಗೆ ಬಂದ ಮೇಲೆ ರಾಯರಿಂದ ಒಂದು ಪತ್ರ ಬಂತು: "ನೀವು ವಚನ ಕೊಟ್ಟಿರುವಂತೆ ಲೇಖನವನ್ನು ಬೇಗ ಕಳುಹಿಸುತ್ತೀರೆಂದು ನಂಬಿದ್ದೇನೆ" ಎಂದು! ನಾನು ಉತ್ತರ ಕೊಡಲಿಲ್ಲ. ಆದರೆ ಮೊದಲು ವಾರಕ್ಕೊಂದು, ಅನಂತರ ಎರಡು, ಮೂರು—ಕೊನೆಗೆ ಕಾಗದಗಳ ಸುರಿಮಳೆಯೇ ಆರಂಭವಾಯಿತು. ಇನ್ನು ಸುಮ್ಮನಿರಲು ಸಾಧ್ಯವಾಗಲಿಲ್ಲ. ಬೇರೆ ಯಾರಾದರೂ ಆಗಿದ್ದರೆ ಜಗಳವಾಡಬಹುದಾಗಿತ್ತು; ರಾಯರೊಡನೆ ಅದು ಸಾಧ್ಯವಿಲ್ಲ. ಅವರ ಸ್ವಭಾವ ಎಷ್ಟು ಮೃದುವಾಗಿದ್ದರೂ ಒಟ್ಟಿನಲ್ಲಿ ಅವರ ಸೂಚನೆಯೆಂದರೆ ಅವರ ಆಜ್ಞೆ. ಆದ್ದರಿಂದಲೇ ಅವರನ್ನು ಕೊನೆಯವರೆಗೂ ಎದುರಿಸಿ ನಿಲ್ಲಲಾರದೆ ಈ ಲೇಖನವನ್ನು ಬರೆದೆ. ತಪ್ಪು ನನ್ನದಲ್ಲ.

## ಹೋಟಲುಗಳು

ಹೋಟಲಿಗೆ ಹೋಗುವುದು ಕೆಟ್ಟದೆಂದು ಪ್ರಪಂಚವೇ ಒಪ್ಪುತ್ತದೆ. ನಾವು ಕೂಡ ಹೋಟಲಿನಲ್ಲಿ ಕಾಫಿಯನ್ನು ಸವಿಯುತ್ತಾ ಕುಳಿತಿರುವಾಗ ಈ ವಿಷಯವನ್ನು ಕೂಲಂಕಷವಾಗಿ ವಿಮರ್ಶಿಸಿ ಎಷ್ಟೋ ಸಾರಿ ಇದೇ ನಿರ್ಣಯಕ್ಕೆ ಬಂದಿದ್ದೇವೆ. ಹೋಟಲಿನವರು ಕೇವಲ ಹಣದಾಸೆಗಾಗಿ ಕೆಲಸ ಮಾಡುವವರು ; ನಮ್ಮ ಆರೋಗ್ಯವೂ ಸೌಖ್ಯವೂ ಅವರಿಗೇನು ಬೇಕು ! ಅಲ್ಲಿ ನಾವು ಒಬ್ಬರಿಗಾಗಿ ಖರ್ಚು ಮಾಡುವ ಹಣದಲ್ಲಿ ಮನೆಯವರೆಲ್ಲರಿಗೂ ಮೃಷ್ಟಾನ್ನ ಭೋಜನ ಮಾಡಿಸಬಹುದು. ಅದಲ್ಲದೆ ಮನೆಯಲ್ಲಿ ಹೆಂಡತಿ ಮಕ್ಕಳೊಡನೆ ಸುಖಸಲ್ಲಾಪಮಾಡುತ್ತಾ, ನಮ್ಮ ನಲ್ಲೆಯ ಪ್ರೇಮದಲ್ಲಿ ನೆನೆದು ನಮ್ಮ ಹಸಿವಿಗೆ ಮಾತ್ರವಲ್ಲದೆ ಹೃದಯಕ್ಕೂ ತಂಪೆರೆಯುವ ತಿಂಡಿ ತೀರ್ಥಗಳನ್ನು ನಿರಾಕರಿಸಿ ಹೋಟಲಿನವನಿಗೆ ದುಡ್ಡು ಸುರಿಯುವುದು ಯಾವ ನ್ಯಾಯ ? ಆಹಾರದಲ್ಲಿ ಮುಖ್ಯವಾಗಿರಬೇಕಾದ ನೈರ್ಮಲ್ಯ ಸಹ ಹೋಟಲು ತಿಂಡಿಗಳಲ್ಲಿ ದೊರೆಯುವುದಿಲ್ಲ—ಇತ್ಯಾದಿ ವಿಷಯಗಳನ್ನು ಮನಸ್ಸಿಗೆ ತಂದುಕೊಂಡೇ ನಾವು ಹೋಟಲಿಗೆ ಹೋಗುವುದನ್ನು ಒಂದು ಸಲವಲ್ಲ, ಸಾವಿರ ಸಲ ತ್ಯಜಿಸಿದ್ದೇವೆ. ನಮ್ಮ ಹಿರಿಯರಂತೂ ಹೋಟಲಿಗೆ ಹೋಗುವುದು ಕೆಟ್ಟದ್ದು ಮಾತ್ರವಲ್ಲ, ಪಂಚ ಮಹಾಪಾತಕಗಳಲ್ಲಿ ಒಂದು ಎಂದೇ ಭಾವಿಸಿದ್ದರು. ಅವರ ಕಾಲದಲ್ಲಿ ಹೋಟಲುಗಳಿಗೆ ಸಭ್ಯಸಮಾಜದಲ್ಲಿ ಸ್ಥಳವೇ ಇರಲಿಲ್ಲ. ಹೋಟಲು, ಕುಡಿತ, ನಾಟಕ, ಸೂಳೆಗಾರಿಕೆ, ಸಂಗೀತ—ಇವೆಲ್ಲವೂ ಹೆಚ್ಚು ಕಡಿಮೆ ಒಂದೇ ವರ್ಗಕ್ಕೆ ಸೇರಿದ್ದವು. ಆದ್ದರಿಂದಲೇ ಹಿರಿಯರು, ಪುರೋಹಿತರು, ಮೊದಲಾದವರು ಹುಡುಗರಿಗೆ ಕೆಟ್ಟ ಮೇಲ್ಪಂಕ್ತಿಯನ್ನು ಹಾಕಬಾರದೆಂಬ ಸದುದ್ದೇಶದಿಂದ ಹೋಟಲಿಗೆ ಹೋದಾಗಲೆಲ್ಲಾ ಗುಟ್ಟಾಗಿಯೇ ಹೋಗುತ್ತಿದ್ದರು.

ಆದರೆ ಅಲ್ಲಿ ಹೋಗುವುದರಿಂದ ಜಾತಿ ಕೆಡುವುದೆಂದೂ ಅದರ ಹತ್ತಿರವೂ ಸುಳಿಯಬಾರದೆಂದೂ ಕಟ್ಟಾಜ್ಞೆಯಾಗಿದ್ದುದರಿಂದ ಸ್ವಾತಂತ್ರ್ಯ ಪ್ರಿಯರಾದ ನಮಗೆ ಹಿರಿಯರ ನಿಯಮವನ್ನು ಮುರಿದು ಆ ಪಾಪದ ರುಚಿಯನ್ನು ಸವಿಯುವುದು ಕರ್ತವ್ಯವಾಗಿ ತೋರಿತು. ನಿಷಿದ್ಧವಾದ ಕಾರ್ಯವನ್ನು ಮಾಡುವುದರಲ್ಲಿ ಅಪೂರ್ವವಾದೊಂದು ಸೌಖ್ಯವಿದೆ. ಅದರ ಅನುಭವ ನಮಗೆ ಬೇಡವೆ? ಇದರ ಮೇಲೆ ಮನೆಯಲ್ಲೋ—ನಮಗೆ

ಅಜೀರ್ಣವಾದೀತೆಂಬ ಭಯದಿಂದ ತಿಂಡಿಯನ್ನು ಔಷಧಿಯ ಪ್ರಮಾಣದಲ್ಲಿ ಕೊಡುತ್ತಿದ್ದರು. ಮನೆಯಲ್ಲಿ ಅಜೀರ್ಣಕ್ಕೆ ಅವಕಾಶವಿಲ್ಲದ್ದರಿಂದ ನಾವು ಅದನ್ನು ಹೋಟಲಿನಲ್ಲಿ ಕೊಂಡುಕೊಳ್ಳಬೇಕಾಯಿತು. ಅಜೀರ್ಣವಾಗಲಿ ಬಿಡಲಿ, ಆ ತಿಂಡಿ ರುಚಿಯಾಗಿಯೇನೋ ಇರುತ್ತಿತ್ತು. ಬೀದಿಯಲ್ಲಿ ಹೋಗುತ್ತಿರುವಾಗ, ಹೋಟಲಿನವರು ಕರಿಯುತ್ತಿರುವ ತಿಂಡಿಗಳ ಕಂಪೂ ಆಗ ತಾನೆ ಕಾವಲಿಯ ಮೇಲೆ ಬೀಳುತ್ತಿರುವ ದೋಸೆಯ ಇಂಪಾದ ಮೆಲು ದನಿಯೂ ನಮ್ಮ ಮನೋನಿಶ್ಚಯವನ್ನು ಕರಗಿಸಿ, ತಮ್ಮ ಮೃದುವಾದ ಪಾಶಗಳಿಂದ ನಮ್ಮನ್ನು ಬಿಗಿದು ನಮಗೆ ಅರಿವಿಲ್ಲದಂತೆಯೇ ನಮ್ಮನ್ನು ಸೆಳೆದುಕೊಳ್ಳುವುವು. ಆ ತಿಂಡಿಗಳ ಹೆಸರು ಸಹ ಅದೆಷ್ಟು ಮನೋರಂಜಕ ವಾಗಿರುವುದು! ಹಾಗೆ ಹೆಸರು ಕೊಡುವ ಕಲೆ ನಮ್ಮ ಮನೆಯವರಿಗೆ ಬರದು. ಅನುಪಮ ಸುಂದರಿಯಾದ ಯುವತಿಯನ್ನು ಲಲಿತ ಎಂದು ಕರೆಯುದೆ ಸುಬ್ಬಿ ಎಂದೋ ತಿಮ್ಮು ಎಂದೋ ಕರೆಯುವುದೇಕೆ? ಈರುಳ್ಳಿಯ ಉಪ್ಪಿಟ್ಟೋ ಕೇಸರಿ ಸಜ್ಜಿಗೆಯೂ ರುಚಿಯಾಗಿರಬಹುದು. ಆದರೆ ಆ ಹೆಸರಿನ ತಿಂಡಿಗಳನ್ನು ಯಾರು ಮೆಚ್ಚುತ್ತಾರೆ? ಅವನ್ನೇ ಕಾಂದಾಭಾತ್ ಎಂದೋ ಕೇಸರಿಭಾತ್ ಎಂದೋ ಕರೆದರೆ ನಮ್ಮ ಮನಸ್ಸು ಸೋಲ ಬಹುದು.

ಹೀಗೆ ಮನೆಯವರು ತಮ್ಮ ಮೌಢ್ಯದಿಂದಲೂ ಅರಸಿಕತೆಯಿಂದಲೂ ಕಲಾಪ್ರೇಮಿಗಳಾದ ಯುವಕರನ್ನು ತಾವಾಗಿಯೇ ಹೋಟಲಿಗೆ ತಳ್ಳಿದಂತಾ ಯಿತು. ಇದಲ್ಲದೆ ನಮ್ಮ ಹಳ್ಳಿಗೆ ಮಸಾಲೆ ದೋಸೆಯ ರುಚಿ ಇಳಿಯುವ ವೇಳೆಗೆ ಹೋಟಲುಗಳ ಸ್ಥಿತಿಯೂ ಉತ್ತಮಗೊಂಡಿತ್ತು. ಹಿಂದೆ 'ಕಾಫಿ ಕ್ಲಬ್' ಎಂದು ಕರೆಸಿಕೊಳ್ಳುತ್ತಿದ್ದ ಹೋಟಲುಗಳು ಆಗ 'ಫಲಾಹಾರ ಮಂದಿರ'ಗಳಾಗಿದ್ದುವು. ಈಗಿನಂತೆ ಅಗ್ಗದ ಶೃಂಗಾರದಿಂದ ಮೆರೆಯುವ 'ಭವನ'ಗಳು ಇನ್ನೂ ಬಂದಿರಲಿಲ್ಲ. ಗಾಜಿನ ಗೂಡುಗಳಲ್ಲಿ ಮೆಟ್ಟಲು ಮೆಟ್ಟ ಲಾಗಿ ಭಕ್ಷ್ಯಗಳನ್ನು ಪ್ರದರ್ಶಿಸುವ 'ಭಟಜಿ'ಗಳೂ 'ಪ್ರಸಾದ್'ರೂ ಮೈಸೂರಿಗೆ ಇನ್ನೂ ಕಾಲಿಟ್ಟಿರಲಿಲ್ಲ. ಹೋಟಲಿನ ಸಾಮ್ರಾಜ್ಯ ಸೂತ್ರಗಳು ಇನ್ನೂ ಉಡುಪಿಯವರ ಕೈಯಲ್ಲಿಯೇ ಇದ್ದವು. ಅವರ ಹೋಟಲುಗಳು ಈಗಿನವರಿಗೆ ಸ್ವಲ್ಪ ಅನಾಗರಿಕವಾಗಿ ಕಂಡರೂ ಅಲ್ಲಿ ಒಂದು ಬಗೆಯ ಚಿತ್ತಾಕರ್ಷಕ ವಾದ ಆವರಣವಿತ್ತು. 'ಕೋಮಲ ವಿಲಾಸ' 'ಆನಂದ ವಿಲಾಸ' ಎಂದು ಕರೆಯಿಸಿಕೊಳ್ಳುತ್ತಿದ್ದ ಈ ಹಳೆಯ ಮಾದರಿ ಹೋಟಲುಗಳನ್ನು ಈಗಲೂ ಒಂದೊಂದು ಕಡೆ ಕಾಣಬಹುದು. ಅಲ್ಲಿಯ ಆವರಣ ನಲವತ್ತು ಐವತ್ತು

ವರ್ಷಗಳ ಹಿಂದಿನ ಮೈಸೂರಿನದು. ಅಲ್ಲಿಯ ಗೋಡೆಗಳಿಗೆ ಈಗಿನ 'ಭವನ' ಗಳಲ್ಲಿರುವಂತೆ ಕಣ್ಣು ಕೊರೆಯುವ ಜಪಾನ್ ಹಂಚುಗಳ ಜೋಡಣೆಯಿಲ್ಲ. ದೇಹದ ಪ್ರಮಾಣವನ್ನೇ ಅರಿಯದ ಸಿಂಹ ಸಾರಂಗಗಳ ಚಿತ್ರಗಳು ಕಣ್ಣು ನೋಯಿಸುವುದಿಲ್ಲ; ಎತ್ತ ನೋಡಿದರೂ ನಿಮ್ಮನ್ನು ಅಣಕಿಸುವ ನಿಲುಗನ್ನಡಿಗಳಿಲ್ಲ. ಅಲ್ಲಿಯ ಆವರಣದಲ್ಲಿ ಒಂದು ಬಗೆಯ ಸೌಮ್ಯತೆಯಿದೆ. ಅಲ್ಲಿರುವ ಚಿತ್ರಗಳೆಂದರೆ ರವಿವರ್ಮನ ಕೃತಿಗಳು, ಮೈಸೂರಿನ ರಾಜಮನೆತನದವರ ಚಿತ್ರಗಳು, ಅಂಬೆಗಾಲಿನ ಕೃಷ್ಣ, ಚಾಮುಂಡೇಶ್ವರಿ, ರಾಜರಾಜೇಶ್ವರಿ ಮೊದಲಾದ ಹಳೆಯ ಕಾಲದ ವರ್ಣಕೃತಿಗಳು. ಆಂಗ್ಲ ಸಂಸ್ಕೃತಿಯ ಸೋಂಕು ತಗಲಿದ ಮೇಲೆ ಪಾಶ್ಚಾತ್ಯ ರಮಣಿಯರ ಚಿತ್ರಗಳೂ ಬಂದು ಸೇರಿದ್ದುಂಟು. ಅಲ್ಲಿಯ ಕುರ್ಚಿ ಮೇಜುಗಳು ಅಷ್ಟೇನೂ ಮೆರುಗಿನಿಂದ ಹೊಳೆಯುವುದಿಲ್ಲ. ಆದರೆ ಆ ಸ್ಥಳವೆಲ್ಲ ಅಗರುಬತ್ತಿಯ ಸುಗಂಧದಿಂದ ತುಂಬಿರುತ್ತದೆ.

ನಾವು ಹೈಸ್ಕೂಲಿನಲ್ಲಿರುವಾಗಲೇ ಈ ಹೋಟಲುಗಳಲ್ಲಿ ಹಳೆಯ ಮತ್ತು ಹೊಸ ನಾಗರಿಕತೆಗಳ ಘರ್ಷಣೆ ಪ್ರಾರಂಭವಾಗಿತ್ತು. ಹಾಸನದ ಟೋಪಿಯೂ ಹಿಂಜುಟ್ಟೂ ಫರ್‌ಟೋಪಿಯ ಮತ್ತು ಕ್ರಾಪಿನ ದಾಳಿಯನ್ನೆದುರಿಸಲಾರದೆ ಹಿಮ್ಮೆಟ್ಟುತ್ತಿದ್ದುವು. ಸಮಾಜದಲ್ಲಾಗುತ್ತಿದ್ದ ಬದಲಾವಣೆಗಳನ್ನೆಲ್ಲಾ ಈ ಹೋಟಲುಗಳು ಸ್ವಲ್ಪ ಮಟ್ಟಿಗೆ ಪ್ರತಿಬಿಂಬಿಸುತ್ತಿದ್ದವು. ಆದರೂ ಅಲ್ಲಿಯ ಗಿರಾಕಿಗಳೆಲ್ಲಾ ಒಟ್ಟಿನಲ್ಲಿ ಹಳೆಯ ಕಾಲದವರೇ. ಸಾಧಾರಣವಾಗಿ ಹೋಟಲಿನವರು ಬದುಕುವುದು ವಿದ್ಯಾರ್ಥಿಗಳಿಂದ. ಆದರೆ ಈ ಹೋಟಲುಗಳು ವಿಶೇಷವಾಗಿ ಸಂಗೀತಗಾರರ, ನಾಟಕದ ಕಂಪೆನಿಯವರ ಮತ್ತು ಅವರಿಗೆ ಆಶ್ರಯದಾತರಾದ ಸಂತೆಪೇಟೆಯ ವರ್ತಕರ ಅಭಿಮಾನಕ್ಕೆ ಪಾತ್ರವಾಗಿದ್ದುವು. ಈಗಲೂ ಅಲ್ಲಿ ವರದಾಚಾರ್ಯರ ಕಂಪನಿಯ ನಟರ ವಿಮರ್ಶೆ ನಡೆಯುತ್ತಿರುತ್ತದೆ. ನೀವೇನಾದರೂ ಮಧ್ಯೆ ತಲೆಹಾಕಿ ಈಗಿನ ಕಾಲದ ನಟರ ಪ್ರಶಂಸೆಮಾಡಿದರೆ ಅವರು "ನಾಟಕದ ವಿಷಯ ನಿಮಗೇನ್ರಿ ಗೊತ್ತು? ನಕಲಿ ಅನ್ನುವುದು ಕೃಷ್ಣಮೂರ್ತಿಯ ತಲೆಗೇ ಹೋಯಿತು. ವರದಾಚಾರ್ಯರ ಹಾಗೆ ಒಂದು ಕಂದ ಅನ್ನಬೇಕಾದರೆ ಏಳು ಜನ್ಮ ತಪಸ್ಸು ಮಾಡಿ ಬರಬೇಕು" ಎಂದು ನಿಮ್ಮ ಬಾಯಿ ಮುಚ್ಚಿಸಿಬಿಡುತ್ತಾರೆ. ಇನ್ನೂ ಸ್ವಲ್ಪ ವಯಸ್ಸಾದವರಿಗೆ ವರದಾಚಾರ್ಯರನ್ನು ಹೊಗಳಿದರೂ ಸಹಿಸದು. "ಆಚಾರ್ಯರ ಗುರುಗಳು ಗೌರೀನರಸಿಂಹಯ್ಯನವರನ್ನು ನೀವು ಕಾಣಿರಿ—ಅವರ ಜಾಡೇ ಬೇರೆ. ವರದಾಚಾರ್ಯರು ಇನ್ನೆಷ್ಟು ಲಾಗ ಹಾಕಿದರೂ ಆ ಮಟ್ಟಕ್ಕೆ ಏರಲಾರರು.

ಪಾಪ, ಈ ಹುಡುಗರಿಗೇನು ಗೊತ್ತು, ನಿನ್ನೆ ಮೊನ್ನೆಯವರು !" ಎಂದು ನಿಮ್ಮ ಸಹಾಯಕ್ಕೆ ಬರುತ್ತಾರೆ. ಅವರಿಗೆ ನಿಮ್ಮನ್ನು ಕಂಡರೆ ಕೋಪವಿಲ್ಲ, ಕನಿಕರ ಮತ್ತು ತಿರಸ್ಕಾರ ಮಾತ್ರ. ಹೋಟಲಿನವನ ಗಮನವೆಲ್ಲಾ ಬಹು ಮಟ್ಟಿಗೆ ಈ ಗುಂಪಿನವರ ಮೇಲೆಯೇ ಇರುತ್ತದೆ. ಅವನು ನಿಮ್ಮ ಕಡೆ ತಿರುಗಬೇಕಾದರೆ ಈ ಕಲಾಭಿಮಾನಿಗಳ ಸೇವೆ ಮುಗಿದ ಮೇಲೆಯೇ.

ಈಚೆಗೆ ಪ್ರಾಶಸ್ತ್ಯ ಪಡೆದಿರುವ ಬಾಲೂಷಾ, ಸೋನಪಪಡಿ, ಗುಲಾಬ್ ಜಾಮೂನ್, ಮೊದಲಾದ ತಿಂಡಿಗಳು ಈ ಹಳೆಯ ಹೋಟಲುಗಳಲ್ಲಿ ಸಿಕ್ಕದಿದ್ದರೂ, ನಮ್ಮ ಸರಳವಾದ ಮೈಸೂರು ಪೋಸೆ, ಹೊಯ್ ಗಡುಬು, ಬಾಳೆಕಾಯಿ ಬೋಂಡ—ಮೊದಲಾದವು ದೊರೆಯಬೇಕಾದರೆ ಅಲ್ಲಿ ಮಾತ್ರ. ಆದ್ದರಿಂದಲೇ ನಮ್ಮಲ್ಲಿ ಕೆಲವರಿಗೆ ಈ ಹೋಟಲುಗಳನ್ನು ಕಂಡರೆ ಅಭಿಮಾನ. ಆದರೂ ನಾವು ನಮ್ಮ ಆದರವನ್ನೆಲ್ಲ ಯಾವುದೊಂದು ಹೋಟಲಿಗೂ ಧಾರೆಯೆರೆಯುತ್ತಿರಲಿಲ್ಲ. ತಿಂಡಿಗಳನ್ನು ಅನೇಕ ಕಡೆ ರುಚಿ ನೋಡಿ, ಅವುಗಳ ಗುಣಾವಗುಣಗಳ ವಿಷಯದಲ್ಲಿ ಶೋಧನೆ ನಡೆಸಿ, ಹೋಟಲುಗಳನ್ನು ಐಟಂವಾರ್ ಗ್ರೇಡ್‌ವಾರ್ ವಿಂಗಡಿಸಿಟ್ಟುಕೊಳ್ಳದವರನ್ನು ಕಂಡರೆ ನಮಗೆ ತಿರಸ್ಕಾರ. ಬಾದಷಹರಿಗೆ ದೊಡ್ಡ ಜನಾನಾ ಹೇಗೆ ಭೂಷಣವೋ ಪಟ್ಟಣವಾಸದವರಿಗೆ ಅನೇಕ ಹೋಟಲುಗಳನ್ನು ಚಾಲ್ತಿಯಲ್ಲಿಟ್ಟುಕೊಂಡಿರುವುದು ಹಾಗೆಯೇ ಭೂಷಣ. ಸಿಹಿ ತಿಂಡಿಗೆ ಬೊಂಬಾಯಿ ಆನಂದಭವನ, ಕಾರದ ತಿಂಡಿಗೆ ಸಂತೇಪೇಟೆಯ ಹೋಟಲು, ಮೈಸೂರು ಸಾದಾ ದೋಸೆಗೆ ಹಳ್ಳದಕೇರಿಯ ಸೊಟ್ಟಮೂತಿ ಸುಬ್ಬರಾಯರ ಹೋಟಲು (ಜೊತೆಗೆ ನಾಗಣ್ಣನವರ ಅಂಗಡಿಯಿಂದ ಬೆಣ್ಣೆ)—ಹೀಗೆ ಅವುಗಳ ಯೋಗ್ಯತಾನುಸಾರ ನಮ್ಮ ಕೃಪಾಕಟಾಕ್ಷ ಎಲ್ಲಾ ಹೋಟಲುಗಳ ಮೇಲೆಯೂ ಬೀಳುತ್ತಿತ್ತು.

ಆದರೆ ನಮ್ಮ ಆಶ್ರಯ ಹೋಟಲುಗಳಿಗೆ ದೊರಕುವುದಕ್ಕೆ ಅಲ್ಲಿಯ ತಿಂಡಿಗಳ ರುಚಿಯೊಂದೇ ಕಾರಣವಲ್ಲ ; ಅಲ್ಲಿಯ ಮಾಣಿಯ ಯೋಗ್ಯತೆಯೂ ಒಂದು ಮುಖ್ಯ ಕಾರಣ. 'ಮಾಣಿ' ಎಂಬ ಪದ ಮಾಣವಕ ಎಂಬುದರಿಂದ ಬಂದಿತಂತೆ. ಎಲ್ಲಿಂದಲಾದರೂ ಬರಲಿ, ಮಾಣಿಯೆಂದರೆ ಹೋಟಲಿನಲ್ಲಿ ನಮಗೆ ತಿಂಡಿ ಕೊಡುವ ಮನುಷ್ಯ. ಅವನಿಲ್ಲದಿದ್ದರೆ ಹೋಟಲಿನ ಮುಖ್ಯ ಅಂಗವೇ ಊನವಾದಂತೆ. ಪ್ರಪಂಚದಲ್ಲಿ ನಾವು ಯಾರನ್ನು ಬೇಕಾದರೂ ಹಿಡಿದು ಅವರ ಮೇಲೆ ಅಧಿಕಾರ ನಡೆಸಬಹುದು ; ಆದರೆ ಮಾಣಿಗಳ ಮೇಲೆ ನಮ್ಮ ಜೋರು ಏನೇನೂ ನಡೆಯುವುದಿಲ್ಲ. ನನ್ನ ಸ್ನೇಹಿತನೊಬ್ಬನು ತನಗೆ

ತಿಂಡಿ ಕೊಟ್ಟ ಮಾಣಿಯ ಬೆನ್ನು ತಟ್ಟಿ ಅವನಿಗೆ ಪೆಪ್ಪರ್‌ಮೆಂಟು ಕೊಟ್ಟಿದ್ದನ್ನು ನೋಡಿದ್ದೇನೆ. ಅದೇ ಸ್ನೇಹಿತನು ಇನ್ನೊಬ್ಬ ಮಾಣಿಯನ್ನು ಕತ್ತೆತ್ತಿ ನೋಡುವ ಧೈರ್ಯವಿಲ್ಲದೆ ಅವನು ತಂದುಕೊಟ್ಟ ಹರಳೆಣ್ಣೆ ವಾಸನೆಯ ಕಾಫಿಯನ್ನು ಚಪ್ಪರಿಸುತ್ತಾ ಕುಡಿಯುವಂತೆ ನಟಿಸಿದ್ದನ್ನೂ ನೋಡಿದ್ದೇನೆ.

ಮಾಣಿಯ ವಯಸ್ಸು ಇಪ್ಪತ್ತು ಇಪ್ಪತ್ತೈದಕ್ಕೆ ಮೀರಿರಬಾರದು. ಮೀರಿದ್ದರೆ ಅವನಲ್ಲಿರಬೇಕಾದ ಸರಳತೆಯೂ ಮಾನುಷಸಹಾನುಭೂತಿಯೂ ಕಳೆದುಹೋಗಿ ಅವನ ಸ್ವಭಾವವೇ ಬದಲಾಯಿಸುತ್ತದೆ. ಅಲ್ಲಿಂದಾಚೆಗೆ ಅವನು ಹುಡುಗನಲ್ಲ, ತಾನೂ ಒಬ್ಬ ಗಣ್ಯನಾದ ಮನುಷ್ಯ. ಅವನು ನಿಮಗೆ ತಿಂಡಿಯನ್ನು ತಂದುಕೊಟ್ಟರೂ ತನ್ನ ಘನತೆಯನ್ನು ಸ್ಪಷ್ಟಪಡಿಸುವುದಕ್ಕಾಗಿ ಸ್ವಲ್ಪ ಸಾವಕಾಶವಾಗಿಯೇ ತಂದು, ನಿಮ್ಮ ಇರವನ್ನೇ ಕಾಣದವನಂತೆ ಅದನ್ನು ನಿಮ್ಮ ಮುಂದೆ ಬಡಿದು ಹೋಗುತ್ತಾನೆ. ತಿಂಡಿಯ ಲೆಕ್ಕವನ್ನು ಕೊಡಬೇಕಾದರೆ ಚಕ್ರವರ್ತಿಯು ಬಿರುದನ್ನು ದಯಪಾಲಿಸುವ ದರ್ಪದಿಂದಲೂ ಗಾಂಭೀರ್ಯದಿಂದಲೂ ಕೊಡುತ್ತಾನೆ. ಆ ವಯಸ್ಸಿಗೇ ಅವನ ಮುಖಕ್ಕೆ ಸರ್ವಶಾಸ್ತ್ರಪಾರಂಗತನ ಕಳೆ ಬಂದಿರುತ್ತದೆ. ಅವನ ಗಾಂಭೀರ್ಯವನ್ನೂ 'ದಾಸಿ ನಾನು' ಎಂಬ ಭಾವವನ್ನೂ ನೋಡಿದರೆ ಅವನು ಮನುಜ ಸಂಬಂಧವಾದ ಕುಂದುಕೊರತೆಗಳೆಲ್ಲವನ್ನೂ ಜಯಿಸಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದವನಂತೆ ಕಾಣುತ್ತಾನೆ. ನಿಮ್ಮ ಕೋಪವಾಗಲಿ ಹೊಗಳಿಕೆಯಾಗಲಿ ಜುಗುಪ್ಸೆಯಾಗಲಿ ಅವನ ಮೇಲೆ ಯಾವ ಪರಿಣಾಮವನ್ನೂ ಮಾಡುವುದಿಲ್ಲ. ನಮ್ಮ ಕಚೇರಿಯ ಬಳಿ ಇರುವ ಹೋಟಲಿನ ಮಾಣಿಯೊಬ್ಬನು ಈ ತೆರದವನು. ಅವನೊಡನೆ ಸ್ವತಂತ್ರಿಸಿ ಮಾತಾಡಲು ಇಂದಿಗೂ ನನಗೆ ಧೈರ್ಯವಿಲ್ಲ. ನೀವು ಜವಾನನೊಡನೆ ವರ್ತಮಾನವನ್ನು ಕಳಿಸಿ ಹತ್ತು ನಿಮಿಷವಾದಮೇಲೇ ಅವನು ಹೊರಡಬೇಕಾದರೆ. ಬಂದವನು ನಿಮ್ಮ ಕಡೆಯೇ ನೋಡದೆ, ಭೂಮ್ಯಾಕಾಶಗಳನ್ನು ಸಾವಧಾನವಾಗಿ ಪರೀಕ್ಷಿಸಿ, ತ್ಯಾಗರಾಜ ಕೀರ್ತನೆಯ ಪಲ್ಲವಿಯೊಂದನ್ನು ಮೆಲ್ಲನೆ ಸಿಳ್ಳು ಹಾಕಿ, ಅನಂತರ 'ಏನು ತರಲಿ, ಸಾರ್ ?' ಎಂದು ಮತ್ತೆ ದಿಗಂತವನ್ನು ನೋಡುತ್ತಾ ನಿಲ್ಲುತ್ತಾನೆ. 'ಏನಿದೆ ?' ಎಂದು ನೀವು ಕೇಳುವುದೇ ತಡ, "ಜಾಮೂನ್, ಜಿಲೇಬಿ, ಜಹಾಂಗೀರ್, ಬಾಸುಂದಿ, ಬಾದಾಮಿ ಹಲ್ವಾ, ಬಾಲುಷಾ, ಕಾರಾಬೂಂದಿ, ಕಾರಾಸೇವ್' ಎಂದು ಉಸಿರು ತೆಗೆದುಕೊಳ್ಳದೆಯೇ ಒದರಿಬಿಡುತ್ತಾನೆ. ಆ ಶಬ್ದಸಾಗರದಲ್ಲಿ ನೀವು ಮುಳುಗಿ ಹೆಣಗಾಡು

ತ್ತಿರುವುದು ಅವನ ಕಣ್ಣಿಗೆ ಬಿದ್ದರೂ ಅವನಿಂದ ನಿಮಗೆ ಸಹಾನುಭೂತಿ ಯೇನೂ ದೊರಕದು. ಯಾವ ತಿಂಡಿ ಬೇಕೆಂದು ನೀವು ನಿಶ್ಚಯಿಸುವವರೆಗೂ ಅವನಿಗೆ ತಾಳ್ಮೆಯಿಲ್ಲ. "ತಿಂಡಿಯನ್ನು ಆರಿಸಿಕೊಳ್ಳುವುದು ಸಹ ತಿಳಿಯದು, ಈ ವ್ಯಗಗಳಿಗೆ" ಎಂಬ ಅರ್ಥವುಳ್ಳ ತಿರಸ್ಕಾರಸೂಚಕವಾದ ನೋಟವನ್ನು ಬೀರಿ ಬಾಗಿಲಿನ ಕಡೆಗೆ ಹೊರಟೇ ಬಿಡುತ್ತಾನೆ. ನೀವು ಹನ್ನೆರಡು ವರ್ಷ ಕಾಲ ಸಂತತವಾಗಿ ಅದೇ ಹೋಟಲಿಗೆ ಹೋಗುತ್ತಿದ್ದರೆ ಅವನೇನಾದರೂ ನಿಮ್ಮ ವಿಷಯದಲ್ಲಿ ಕೃಪೆ ತೋರಿ ಹಸನ್ಮುಖಿಯಾಗಬಹುದು. ಅದುವರೆಗೂ ನೀವು ಅವನನ್ನು ತಾಳ್ಮೆಯಿಂದ ಓಲೈಸುತ್ತಿರಬೇಕು.

ಆನಂದಭವನದ ವಿಷಯದಲ್ಲಿ ನನಗಿದ್ದ ಆದರಕ್ಕೆ ಅಲ್ಲಿಯ ಮಾಣಿಯೇ ಕಾರಣ. ಅವನು ಸುಮಾರು ಇಪ್ಪತ್ತು ವರ್ಷದ ಸ್ಫುರದ್ರೂಪಿ, ಸ್ವಲ್ಪ 'ಷೋಕಿಲಾಲ್.' ಅಲ್ಲಿ ಕೆಲಸ ಮಾಡುವಾಗಲೂ ಗರಿಮುರಿಯದ ರೇಷ್ಮೆ ಷರಟನ್ನೇ ಧರಿಸಿರುತ್ತಾನೆ. ತಲೆಗೂದಲು ಕೇಶರಂಜನ ತೈಲದಿಂದ ಮಿನುಗುತ್ತಿರುತ್ತದೆ. ಅವನಿಗೆ ಸಿನೆಮಾ ಸಂಗೀತವೆಂದರೆ ಪ್ರಾಣ. ಆದರೆ ನಡತೆ ಬಹುಶಃ ಅಷ್ಟು ಶುದ್ಧವಾಗಿರಲಾರದು. ಕಣ್ಣು ಆಗಲೇ ಗುಳಿಬಿದ್ದು ಮುಖದಲ್ಲಿ ಸುಖಲೋಲುಪತೆಯ ಚಿಹ್ನೆ ಕಾಣುತ್ತದೆ. ಅದು ಹೇಗಾದರೂ ಇರಲಿ, ಅವನಲ್ಲಿ ನೈಜವಾಗಿರುವ ತಾಳ್ಮೆ, ಸೇವೆಯಲ್ಲಿ ಅವನಿಗಿರುವ ಸಂತೋಷ, ಅವನ ನಗುಮುಖ—ಇವು ಎಲ್ಲರ ಆದರವನ್ನೂ ಸಂಪಾದಿಸಿದ್ದವು. ನೀವು ಬಿಸಿಲಿನಲ್ಲಿ ಬಳಲಿ ಬಂದರೆ ಅವನು ಮಹಡಿಯ ಮೇಲೆ ತಂಪಾಗಿರುವ ಮಿಗ್ನೋನಿಯಾ ಲತಾಗೃಹದಲ್ಲಿ ನಿಮಗಾಗಿ ಬೇರೆ ಕುರ್ಚಿಗಳನ್ನು ಹಾಕಿಸುತ್ತಾನೆ. ತಿಂಡಿಯ ಪಟ್ಟಿಯನ್ನು ಕೊಟ್ಟ ಕ್ಷಣ 'ಏನು ತರಲಿ' ಎಂದು ಕೇಳದೆ, ನಿಮಗೆ ಬೇಕಾದ್ದನ್ನು ಆರಿಸಿಕೊಳ್ಳಲು ಕಾಲ ದೊರೆಯಲೆಂದು ನೀರು ತರುವ ವ್ಯಾಜದಿಂದ ಹೊರಟುಹೋಗುತ್ತಾನೆ. ಅನಂತರ ತಾನಾಗಿಯೇ "ಜಿಲೇಬಿ ಚೆನ್ನಾಗಿದೆ, ಬೋಂಡ ಈಗ ತಾನೆ ಮಾಡಿದ್ದು" ಎಂದು ವಿನಯವಾಗಿ ಸಲಹೆ ಕೊಡುತ್ತಾನೆ. ನೀವು ಸ್ಪೆಷಲ್ ಕಾಫಿ ಬೇಕೆಂದರೆ "ಸ್ಪೆಷಲ್ ಕಾಫಿಯಲ್ಲಿ ದೊಡ್ಡಸ್ತಿಕೆ ಹೊರತು ಇನ್ನೇನೂ ಇಲ್ಲ, ಸಾರ್. ಚೆನ್ನಾಗಿ ಮಾಡಿ ತರುತ್ತೇನೆ" ಎಂದು ಹೇಳಿ ನಿಮಗೆ ಹಣವನ್ನುಳಿಸುತ್ತಾನೆ. ಅವನು ಅಷ್ಟಾವಧಾನ ಶತಾವಧಾನ ಕಲಿತಿರಬೇಕು. ಹತ್ತು ಜನರು ಒಂದೇ ಸಲ ಬೇರೆ ಬೇರೆ ತಿಂಡಿಗಳನ್ನು ಕೇಳಿದರೂ ಎಲ್ಲವನ್ನೂ ನೆನಪಿಟ್ಟುಕೊಂಡು ಚಾಚೂ ತಪ್ಪದೆ ತರುತ್ತಾನೆ. ಅಲ್ಲಿಯ ತಿಂಡಿಗಳ ರುಚಿ ಮಾಣಿಯ ಗುಣದಿಂದ ಇಮ್ಮಡಿಯಾದಂತೆ ತೋರುತ್ತದೆ.

"ಮನೆಯ ತಿಂಡಿಗಳು ನಮ್ಮ ನಲ್ಲೆಯ ಪ್ರೇಮಹಸ್ತದಿಂದಲೇ ಬರುತ್ತವೆ. ಆ ಸೌಖ್ಯಕ್ಕೂ ಹೋಟಲಿನ ಸೌಖ್ಯಕ್ಕೂ ಹೋಲಿಕೆಯೆಲ್ಲಿ?" ಎಂದು ಕೆಲವರು ಹೇಳಬಹುದು. ನಮ್ಮ ನಲ್ಲೆಯರ ಹಸ್ತಕ್ಕೆ ಕಾಫಿ ಮಾಡುವುದಕ್ಕಿಂತ, ಇದ್ದಲು ಒಲೆಯನ್ನು ಹೊತ್ತಿಸುವುದಕ್ಕಿಂತ, ಉಚಿತವಾದ ಕೆಲಸವಿದೆ. ಅದಲ್ಲದೆ ನಮಗೂ ಅವರಿಗೂ ಇರುವ ಬಾಂಧವ್ಯದಿಂದ ನಮ್ಮ ಸ್ವಾತಂತ್ರ್ಯಕ್ಕೆ ಕುಂದು ಬರುವುದುಂಟು. ಮಾಣಿಯನ್ನು ಹತ್ತು ಸಲ ತಿಂಡಿಗಾಗಿ ಓಡಿಯಾಡಿಸುವಂತೆ ಹೆಂಡತಿಯನ್ನು ಓಡಿಸಲಾಗುವುದಿಲ್ಲ. ಮಾಣಿ ಎಷ್ಟು ಒಳ್ಳೆಯವನಾದರೂ ನಮಗೆ ದೂರದವನು. ನಿಮ್ಮ ಅಪ್ಪಣೆಯನ್ನು ಪಾಲಿಸಿದ ನಂತರ ನಿಮಗೂ ಅವನಿಗೂ ಇರುವ ಸಂಬಂಧ ಕಡಿದುಹೋಗುತ್ತದೆ. ನೀವು ದಿನಕ್ಕೆ ಹತ್ತು ಸಲ ಕಾಫಿ ಕುಡಿಯಿರಿ, ಬೇಡವೆನ್ನುವ ಹಕ್ಕು ಅವನಿಗಿಲ್ಲ. ಮನೆಯಲ್ಲಿ ನಿಮಗೆ ಈ ಸ್ವಾತಂತ್ರ್ಯವಿಲ್ಲ. ನಿಮ್ಮ ಹೆಂಡತಿ ನಿಮಗೆ ಕಾಫಿ ಕೊಟ್ಟ ಮೇಲೆ ತಮ್ಮ ಕೆಲಸಕ್ಕೆ ತಾವು ಹೋಗದೆ ಅಲ್ಲಿಯೇ ನಿಲ್ಲುತ್ತಾರೆ; ಕಾಫಿ ಕುಡಿಯುವುದರಿಂದಾಗುವ ದುಷ್ಪರಿಣಾಮಗಳ ಮೇಲೆ ಪುಟ್ಟದೊಂದು ಉಪನ್ಯಾಸ ಕೊಡುತ್ತಾರೆ. ಕಾಫಿಯ ಜೊತೆಗೆ ಹಾಲುಸಕ್ಕರೆ ಬೆರೆದ ಹಾಗೆ ಉಪನ್ಯಾಸ ಬೆರೆಯುವುದಿಲ್ಲವೆಂದು ಆಕೆಗೆ ಹೊಳೆಯುವುದೇ ಇಲ್ಲ. ನೀವು ನಿರಾಳವಾಗಿ ಮನಸ್ಸನ್ನು ಅಲೆಯಬಿಟ್ಟು ಯೂರೋಪಿನ ಸಂಗ್ರಾಮಸಿದ್ಧತೆ, ನೀವು ಬರೆಯಬೇಕೆಂದಿರುವ ಕಾವ್ಯ, ಕಾನನ ಬಾಲೆಯ ಅಭಿನಯಕೌಶಲ ಮುಂತಾದ ಗಹನವಾದ ವಿಷಯಗಳನ್ನು ಚಿಂತಿಸುತ್ತಿರುವಾಗ ನಿಮ್ಮ ಗಮನವನ್ನು ಕಾಫಿಯ ದುರ್ಗುಣಗಳ ಕಡೆಗೆಳೆದರೆ ನಿಮಗೆ ಕೋಪ ಬರುವುದು ಸಹಜ. ಕಾಫಿ ಕುಡಿದ ಮೇಲೆ ಕೆಲವರಿಗೆ ಸಿಗರೇಟ್ ಹಚ್ಚುವ ಚಟ; ಅಂಥವರ ಪಾಡಂತೂ ಹೇಳತೀರದು. ಗಂಡನ ಯೋಗ್ಯತೆ ಹೆಂಡತಿಗೆ ತಿಳಿದಿದ್ದರೂ (ತಿಳಿದಿಲ್ಲವೆಂದು ಭಾವಿಸಿದ್ದರೆ ಅದು ಶುದ್ಧ ಮರುಳುತನ!) ಆಕೆಯ ಎದುರಿಗೇ ಸಿಗರೇಟ್ ತೆಗೆಯುವುದು ಸಭ್ಯತನವಲ್ಲ. ಇದು ಆಕೆಗೂ ಗೊತ್ತು—ಆದರಿಂದಲೇ ಆಕೆ ಏನೇನೋ ವ್ಯಾಜ ತೆಗೆದುಕೊಂಡು ಅಲ್ಲಿಯೇ ನಿಲ್ಲುತ್ತಾರೆ.

ಹೀಗೆ ಮನೆಯಲ್ಲಿ ವೈಮನಸ್ಯವನ್ನು ತಂದುಕೊಂಡು ಸಂಕಟಪಡುವುದಕ್ಕಿಂತ ಅನಾರೋಗ್ಯಕರವಾದರೂ ಹೋಟಲು ತಿಂಡಿ ತಿನ್ನುವುದೇ ಉತ್ತಮ. ದೇಹದ ಆರೋಗ್ಯಕ್ಕಿಂತ ಮನಸ್ಸಿನ ಆರೋಗ್ಯವೂ ಗಂಡಹೆಂಡಿರ ಸಾಮರಸ್ಯವೂ ಮುಖ್ಯ. ಹೋಟಲಿಗೆ ಹೋಗುವುದು ಅನ್ಯಾಯವೆಂದು ಕೂಗುವವರ ಮಾತಿಗೆ ಹೆದರಬಾರದು, ಅವರ ವಾದಕ್ಕೆ ಮರುಳಾಗಬಾರದು.

ಅದು ಕೇವಲ ಸ್ವಾರ್ಥಿಗಳ ವಾದ. ಮನೆಯ ತಿಂಡಿಗಳಿಂದ ನಮಗೇನೋ ಸುಖವಿರಬಹುದು. ಆದರೆ ಘಳಿಗೆಗೊಂದು ಸಲ ನಮಗಾಗಿ ದುಡಿಯ ಬೇಕಾದ ನಮ್ಮ ಪತ್ನಿಯರಿಗೆ ಸುಖವೆ? "ಅವರು ನಮಗಾಗಿ ಎಷ್ಟು ಕಷ್ಟ ವಾದರೂ ಸಂತೋಷದಿಂದ ಅನುಭವಿಸುತ್ತಾರೆ. ಅದು ಕಷ್ಟವೆಂಬ ಅರಿವು ಸಹ ಅವರಿಗಿಲ್ಲ" ಎಂದು ಹೇಳುವುದೆಲ್ಲಾ ನಿಜ. ಆದರೆ ಅವರ ನಿಷ್ಕಪಟ ವಾದ ಪ್ರೇಮವನ್ನೂ ಹೃದಯದ ಸರಳತೆಯನ್ನೂ ನಾವು ದುರುಪಯೋಗ ಪಡಿಸುತ್ತಿಲ್ಲವೆ ಎಂದು ಎಷ್ಟೋ ವೇಳೆ ನನ್ನ ಮನಸ್ಸು ತಪಿಸಿದೆ. ನಾವು ಹೋಟಲಿಗೆ ಹಣವನ್ನು ತೆರಲು ಹಿಂಜರಿದು ನಮ್ಮ ಪತ್ನಿಯರನ್ನು ಹೀಗೆ ಕಷ್ಟಪಡಿಸುವುದಕ್ಕಿಂತ ಹೇಯವಾದ ಕಾರ್ಯವಿಲ್ಲ. ಖರ್ಚಿಗಾಗಿ ಹಿಂದೆ ಮುಂದೆ ನೋಡಬಾರದು. ಮನುಷ್ಯನು ಬದುಕುವುದು ಹಣದಿಂದಲ್ಲ, ನಿಸ್ವಾರ್ಥವಾದ ಪ್ರೇಮದಿಂದ. ನಮ್ಮ ಪತ್ನಿಯರ ಸೌಂದರ್ಯವೂ ಪ್ರೇಮವೂ ಹೀಗೆ ಅಡಿಗೆಯ ಮನೆಯಲ್ಲಿ ವ್ಯಯವಾಗಬೇಕೆ? ಕೋಮಲವಾದ ಆ ಪುಷ್ಪವನ್ನು ಬೆಂಕಿಯ ಮುಂದೆ ಬಾಡಿಸುವುದೆ! ನಿಷ್ಪಕ್ಷಪಾತವಾಗಿ ನೋಡಿದರೆ ನಾವು ಹೋಟಲಿಗೆ ಹೋಗುವುದು ನಮ್ಮ ಪತ್ನಿಯರ ಮೇಲೆ ನಮಗಿರುವ ಪ್ರೇಮದ ಗುರುತು.

# ಹೆಂಡತಿಯ ಹೆಸರು

ನಮ್ಮಲ್ಲಿ ಮದುವೆಯ ದಿನ ಧಾರೆಯಾದ ಮೇಲೆ ವರನು ವಧುವಿನ ಕೈಹಿಡಿದು ದೇವರ ಮನೆಗೆ ಕರೆದುಕೊಂಡು ಹೋಗಿ ದೇವರಿಗೂ ಹಿರಿಯರಿಗೂ ನಮಸ್ಕಾರಮಾಡಿ ಬರುವ ಪದ್ಧತಿ. ಸಾಧಾರಣವಾಗಿ ದೇವರ ಸನ್ನಿಧಿಗೆ ಹೋಗುವ ಮಾರ್ಗ ಸುಗಮವಾದದ್ದಲ್ಲ. ಈ ಸಂದರ್ಭದಲ್ಲೂ ಹಾಗೆಯೇ. ದೇವರ ಮನೆಯ ಹೊಸಲ ಬಳಿ ನಿಮ್ಮನ್ನು ಅಡ್ಡಗಟ್ಟಿ ಯುವತಿಯರ ಸೈನ್ಯವೊಂದು ನಿಂತಿರುತ್ತದೆ. ಈ ಪ್ರಮಿಳೆಯರಿಗೆ ಹಿಂಗಾವಲಾಗಿ ಮಧ್ಯ ವಯಸ್ಸಿನ ಹೆಂಗಸರೂ ಕೆಲವರು ಸೇರಿರುತ್ತಾರೆ. ಗುಂಪಿನಲ್ಲಿ ಮುಕ್ಕಾಲುಪಾಲು ಜನ ನಿಮಗೆ ಅಪರಿಚಿತರು; ನೀವು ಧೂರ್ತರಾಗಿ ಅವರನ್ನು ತಳ್ಳಿಕೊಂಡು ಒಳಗೆ ಹೋಗುವುದು ಸಾಧ್ಯವಿಲ್ಲ. ಇಂಥ ಕಷ್ಟ ಕಾಲದಲ್ಲಿ ನಿಮಗೆ ಸಹಾಯಮಾಡಬಹುದಾದ ನಿಮ್ಮ ತಾಯಿ ಮತ್ತು ಅಕ್ಕತಂಗಿಯರೂ ಸಹ ತಾತ್ಕಾಲಿಕವಾಗಿ ಶತ್ರುಪಕ್ಷವನ್ನೇ ಅವಲಂಬಿಸಿರುತ್ತಾರೆ. ನಿಮ್ಮ ಜೀವನದ ಗೆಳತಿಯಾಗಿರಲು ಒಪ್ಪಿ ಕೈಹಿಡಿದು ನಿಂತಿರುವ ಆ ಹುಡುಗಿಯ ಬೆಂಬಲವನ್ನೂ ನೀವು ನೆಚ್ಚುವಹಾಗಿಲ್ಲ. ನೀವು ಹೆಂಡತಿಯ ಹೆಸರು ಹೇಳುವವರೆಗೆ ಹೊಸಲು ದಾಟಕೂಡದೆಂದು ಆ ಯುವತಿಯರ ಷರತ್ತು. ಅದಕ್ಕೆ ಒಪ್ಪಿದರೇ ನಿಮಗೆ ದೇವರ ಸಾನ್ನಿಧ್ಯ ದೊರಕೀತು. ವಧು ಗಂಡನ ಹೆಸರು ಹೇಳಬೇಕೆಂಬ ನಿಯಮವೂ ಉಂಟು. ಆದರೆ ಆ ಹೆಂಗಸರು ಸ್ವಜಾತಿವಾತ್ಸಲ್ಯದಿಂದ ಅವಳನ್ನು ಅಷ್ಟೊಂದು ಪೀಡಿಸುವುದಿಲ್ಲ. ಅವಳು ತಲೆ ತಗ್ಗಿಸಿಕೊಂಡು ಏನೋ ಗೊಣಗಿದರೂ ತೃಪ್ತರಾಗಿ ಅವಳ ಗೊಡವೆ ಬಿಟ್ಟು ತಮ್ಮ ಶಕ್ತಿಯನ್ನೆಲ್ಲಾ ನಿಮ್ಮ ಮೇಲೆಯೇ ಪ್ರಯೋಗಿಸುತ್ತಾರೆ. "ಹೆಂಡತಿಯ ಹೆಸರು ಹೇಳುವ ಧೈರ್ಯವಿದೆಯೇ ಈ ಗಂಡಿಗೆ?" ಎಂದು ಪರೀಕ್ಷೆಮಾಡಿ ನೋಡುವುದು ಮದುವೆಯ ಕಲಾಪದಲ್ಲಿ ಅವಶ್ಯವಾದ ಅಂಗವಾಗಿ ಹೋಗಿದೆ. ಹೆಸರು ಹೇಳುವುದು ಅಷ್ಟೇನೂ ಕಷ್ಟವಲ್ಲ. ಆ ಹೆಸರಿಗೆ ಹೆದರಬೇಕಾದ ಪ್ರಮೇಯವೇನೋ ಮುಂದೆ ಬರಬಹುದು, ಆದರೆ ಈಗಲೇ ಇಲ್ಲ. ಅವಳು ನಮ್ಮನ್ನು ಕಾಡಿ ಪ್ರಾಣ ತೆಗೆಯಬೇಕಾದರೆ ಒಂದೆರಡು ವರ್ಷ ಕಳೆದು ಈಗ ಮುಗ್ಧೆಯಾಗಿರುವವಳು ಪಳಗಿದ ಗೃಹಿಣಿಯಾಗಬೇಕು; ಅಲ್ಲಿಯವರೆಗೆ ಭಯವಿಲ್ಲ. ಆದರೂ ಬಾಗಿಲಿನಲ್ಲಿ ನಿಮ್ಮನ್ನು ತಡೆದು

ನಿಂತಿರುವ ಈ ಕೇವಲ ಹೆಂಗಸರ ಆಜ್ಞಾಧಾರಕರಾಗಿ ಅವರು ಹೇಳಿದಂತೆ ಕುಣಿದರೆ ಗಂಡಸಿನ ಮಾನ ಏನಾಗಬೇಕು ! ಅಲ್ಲದೆ ನಿಮ್ಮ ಹೆಂಡತಿಯ ಹೆಸರು ಅವರಿಗೇನು ತಿಳಿಯದೆ ಇಲ್ಲ. ಹೆಸರು ಹೇಳಲು ನಾಚುವ ಯುವಕರನ್ನು ಪೀಡಿಸಿ, ಗೇಲಿಮಾಡಿ, ಅವರ ಬಾಯಿಂದ ಅದನ್ನು ಹೊರಡಿಸುವುದರಲ್ಲಿ ಅವರಿಗೆ ಸ್ವಲ್ಪ ವಿನೋದ. ನೀವು ಸ್ವಲ್ಪವೂ ಅನುಮಾನಿಸದೆ ಅವರು ಕೇಳಿದ ಕ್ಷಣವೇ ಹೆಸರನ್ನು ಕೂಗಿಬಿಟ್ಟರೆ ಆ ವಿನೋದಕ್ಕೆ ಭಂಗ ಬಂದೀತು. ಕದನದಲ್ಲಿ ಸ್ವಲ್ಪ ಹೊತ್ತು ಹೋರಾಟ ನಡೆದ ಮೇಲೆ ಸೋಲಾದರೆ ಅವಮಾನವಿಲ್ಲ. ಯುದ್ಧಕ್ಕೆ ನಿಲ್ಲದೆಯೇ ಹೋದರೆ ನಿಮಗೆ ಮಾನವಿಲ್ಲ, ಎದುರಾಳಿಗೆ ಗೆಲವಿನ ಸಂತೋಷವೂ ಇಲ್ಲ. ಆದ್ದರಿಂದ ಆ ಸನ್ನಿವೇಶದಲ್ಲಿ ಹೆಂಡತಿಯ ಹೆಸರು ಹೇಳಲು ಸಂಕೋಚಪಡುವುದು, ಅಥವಾ ಸಂಕೋಚವನ್ನು ನಟಿಸುವುದು, ನಮ್ಮ ಕರ್ತವ್ಯವೆಂದರೂ ಎನ್ನಬಹುದು.

ಇನ್ನು ಮೊದಲಬಾರಿ ದೀಪಾವಳಿಗೆ ಅವಳ ಮನೆಗೆ ಹೋದಾಗ, ಮನೆಯವರೆಲ್ಲ ಬೇರೆ ಕೆಲಸದಲ್ಲಿದ್ದು ಮಧ್ಯಾಹ್ನದ ಕಾಫಿಯನ್ನು ಅವಳೇ ತಂದುಕೊಟ್ಟರೆ, ನೀವು ಅರ್ಧ ನಾಚಿಕೆಯಿಂದ, ಅರ್ಧ ಯಾರಾದರೂ ಕಂಡಾರೆಂಬ ಭಯದಿಂದ, ಹಿಂದೆ ಮುಂದೆ ನೋಡಿ ಕೊನೆಗೆ ಹೇಗೋ ಧೈರ್ಯ ತಂದುಕೊಂಡು ಅವಳ ಕೈಹಿಡಿದು, ಹೆಸರಿಟ್ಟು ಕೂಗಿ, ಕುಳಿತುಕೊ ಎನ್ನಬಹುದು. ಆದರೆ ಅತ್ತೆ ಮಾವಂದಿರ ಎದುರಿಗೆ "ನೀವೆಲ್ಲಾ ಹಿಂದಿನ ಕಾಲದವರು, ನಾವು ಹಳೆಯ ಪದ್ಧತಿಗಳಿಗೆ ಸೊಪ್ಪು ಹಾಕುವವರಲ್ಲ" ಎನ್ನುವಂತೆ ನಿರ್ಲಕ್ಷ್ಯವಾಗಿ ನಿಮ್ಮವಳ ಹೆಸರನ್ನು ಕೂಗಿ ನಿಮ್ಮ ಯುವನಾಗರಿಕತೆಯನ್ನು ಮೆರೆಸುವುದು ನ್ಯಾಯವಲ್ಲ. ಆದ್ದರಿಂದ ಅವರೆದುರಿಗೆ "ಅವಳು" ಅವಳಾಗಿಯೇ ಉಳಿಯುತ್ತಾಳೆ. ಆಕೆ ನಿಮ್ಮ ಮನೆಗೇ ಬಂದಮೇಲೆ ಯಾದರೂ ತಂದೆತಾಯಿಯರೆದುರಿಗೆ ಅವಳೊಡನೆ ಅಷ್ಟು ಸಲಿಗೆಯಿಂದ ವರ್ತಿಸುವುದು ಧರ್ಮವಲ್ಲ. ಅದಕ್ಕಿಂತಲೂ ಹೆಚ್ಚಾಗಿ ಲೌಕಿಕವಲ್ಲ. ಯಾವಾಗಲೂ ಅವಳ ಹೆಸರು ಉಚ್ಚರಿಸಿ ಅಭ್ಯಾಸವಿಲ್ಲದ್ದರಿಂದ ಅವಳೊಡನೆ ಏಕಾಂತದಲ್ಲಿರುವಾಗಲೂ ಅದು ಸ್ವಲ್ಪ ವಿಚಿತ್ರವಾಗಿಯೇ ಕಾಣುತ್ತದೆ. ಆದ್ದರಿಂದ ಬಹುಮಟ್ಟಿಗೆ ಜನರು ಆ ಹೆಸರು ಹೇಳದೆಯೇ ಸಂಭಾಷಣೆ ನಡೆಸುವ ಅಭ್ಯಾಸಮಾಡಿಕೊಂಡಿರುತ್ತಾರೆ.

ಹಿಂದಿನ ಕಾಲದವರಿಗೆ ತಮ್ಮ ಸಹಧರ್ಮಿಣಿಯನ್ನು ಹೆಸರಿಟ್ಟು ಕರೆಯುವುದು ಅವಮಾನಕರ, ನಾಚಿಕೆಗೇಡು, ಇಲ್ಲವೆ ಶೀಲಕ್ಕೆ ತಕ್ಕುದಲ್ಲ,

ಎಂಬ ಭಾವನೆ ಹೇಗೋ ಬಂದುಹೋಗಿರಬೇಕು. ಇಲ್ಲದಿದ್ದರೆ ಆ ನಿಯಮ ವನ್ನು ಅಷ್ಟು ನಿಷ್ಠುರವಾಗಿ ಪಾಲಿಸಿಕೊಂಡು ಬರುತ್ತಿರಲಿಲ್ಲ. ಒಂದೊಂದು ವೇಳೆ ಅವರ ಹಿಂಜರಿಕೆಯನ್ನು ನೋಡಿದರೆ ನಿಜವಾಗಿಯೂ ಕನಿಕರ ಹುಟ್ಟುತ್ತದೆ. ನನ್ನ ಬಂಧುಗಳೊಬ್ಬರು, ವಯಸ್ಸಾದವರು, ಐದಾರು ಮಕ್ಕಳ ತಂದೆ, ಹೆಂಡತಿಯೊಡನೆ ಮೂವತ್ತು ವರ್ಷಕಾಲ ಸಂಸಾರಮಾಡಿ ಜೀವನದ ಸುಖದುಃಖಗಳನ್ನೆಲ್ಲಾ ಜೊತೆಯಾಗಿ ಅನುಭವಿಸಿದ್ದರು— ಇಷ್ಟಾದರೂ ಅವರು ಆಕೆಯ ಹೆಸರು ಹಿಡಿದು ಕೂಗುವುದು ಹಾಗಿರಲಿ ನೇರ ವಾಗಿ ಅವರನ್ನುದ್ದೇಶಿಸಿ ಮಾತು ಸಹ ಆಡುವುದಿಲ್ಲ. ಆಕೆಯ ಭಾಗಕ್ಕೆ ತಂದೆ ತಾಯಿಯರಿಟ್ಟ ಹೆಸರಿಲ್ಲದೆ ಹೋದರೂ ಪತಿಯ ಬಾಯಿಂದ 'ನೀನು' ಎಂಬ ಸರ್ವನಾಮ ಪದವನ್ನು ಕೇಳುವ ಭಾಗ್ಯ ಸಹ ಇಲ್ಲ. ಹೆಂಡತಿಗೆ ಏನಾದರೂ ತಿಳಿಸಬೇಕಾದರೆ ಅವರು ಎದುರಿಗಿಲ್ಲದ ಮತ್ತೆ ಯಾರನ್ನಾದರೂ ಉದ್ದೇಶಿಸಿ ಮಾತಾಡುತ್ತಾರೆ. ಅವರ ಮಕ್ಕಳೆಲ್ಲರೂ ಬೇರೆ ಬೇರೆ ಊರುಗಳಲ್ಲಿ ಕೆಲಸಮಾಡಿಕೊಂಡಿದ್ದಾರೆ. ಆದರೆ ಅವರಿಗೆ ಕುಡಿಯಲು ನೀರು ಬೇಕಾ ದಾಗ, "ಲೋ ರಾಮು, ಒಂದು ಪಂಚಪಾತ್ರೆ ಗಂಗಾಮೃತ ತಗೊಂಡು ಬಾ ಅನ್ನೋ" ಎಂದು ಕೂಗುತ್ತಾರೆ. ರಾಮು ಮನೆಯಲ್ಲಿಲ್ಲವೆಂದು ಅವರಿಗೂ ಗೊತ್ತು, ಹೆಂಡತಿಗೂ ಗೊತ್ತು. ಆದರೆ ಅವನು ಇದ್ದರೆ ಹೇಗೋ ಹಾಗೆಯೇ ಭಾವಿಸಿ ಇಬ್ಬರೂ ಈ ಬಗೆಯ ನಾಟಕವನ್ನಾಡುತ್ತಾರೆ. ಪತಿಯ ಮಾತು ನೇರವಾಗಿ ಹೆಂಡತಿಗೆ ತಲಪಿದ ದಿನವೇ ಇಲ್ಲ; ಯಾವುದೋ ಊರಿನಲ್ಲಿರುವ ಮಗನನ್ನು ಸುತ್ತುಹಾಕಿಕೊಂಡು ಆಕೆಯ ಕಿವಿಗೆ ಬಂದು ಬೀಳಬೇಕು. ಯಾರಾದರೂ ಹೊರಗಿನವರೆದುರಿಗೆ ಹೆಂಡತಿಯ ವಿಷಯ ಮಾತಾಡ ಬೇಕಾಗಿ ಬಂದಾಗ ಆಕೆಯನ್ನು "ನಮ್ಮ ಮನೆಯಲ್ಲಿ" ಎಂದೋ, ಇಲ್ಲವೆ "ಯಜಮಾನಿತಿ" ಎಂದೋ ಕರೆಯುತ್ತಾರೆ. ಕೆಲವು ದಿನಗಳ ಹಿಂದೆ ಅವರು ನನ್ನನ್ನು ಕರೆದು "ನಿನ್ನ ಯಜಮಾನಿತಿಯನ್ನು ಯಾವಾಗಲಾದರೂ ನಮ್ಮ ಮನೆಗೆ ಕರೆದುಕೊಂಡು ಬಾ" ಎಂದಾಗ ನನಗೆ ಸ್ವಲ್ಪ ಅಸಮಾಧಾನ ವಾಯಿತು. ಲಲಿತೆಗೆ ನನ್ನ ಮೇಲೆ ಯಜಮಾನಿಕೆ ಕೊಟ್ಟವರು ಯಾರು! ಅವಳನ್ನು ನನಗೆ ಕೊಟ್ಟು ಮದುವೆ ಮಾಡಿದರೇ ಹೊರತು ನನ್ನನ್ನು ಅವಳಿಗೆ ಕೊಡಲಿಲ್ಲ. ಈ ವಿಷಯದಲ್ಲಿ ಯಾರಿಗಾದರೂ ಸಂದೇಹವಿದ್ದರೆ ಅದರ ಪರಿ ಹಾರಕ್ಕೆ ಲಗ್ನಪತ್ರಿಕೆಯ ಸಾಕ್ಷ್ಯವೇ ಇದೆ. ಯಾವ ಹೆಂಗಸಿನ ಯಜ ಮಾನಿಕೆಗೂ ತಲೆಬಾಗಿ ನಡೆಯುವ ಸ್ವಭಾವವಲ್ಲ, ನನ್ನದು. ಇದುವರೆಗೂ ನಾನು ಲಲಿತೆಯ ಮಾತಿಗೆ ಪ್ರತಿಯಾಗಿ ನಡೆದಿಲ್ಲ, ನಿಜ. "ಇದಂ ಕೃಷ್ಣಂ

ಕೃಷ್ಣಂ ನನು ಶ್ವೇತಮಥ ಕಿಂ" ಎನ್ನುವ ಹುಚ್ಚಿಗೆ ಹೋಗದಿದ್ದರೂ ಒಬ್ಬರು ಶ್ವೇತ ಎಂದದ್ದನ್ನು ಇನ್ನೊಬ್ಬರು ಬೇಕುಬೇಕಾಗಿ, ಕೇವಲ ಯಜಮಾನಿ ಕೆಯ ಪ್ರದರ್ಶನಕ್ಕಾಗಿ ಕೃಷ್ಣ ಎನ್ನುವುದಿಲ್ಲ. ಅಲ್ಲದೆ ಲಲಿತೆ ಏನೇ ಆಗಲಿ ನನ್ನವಳು; ಮೃದುವಾದ ಅವಳ ಮನಸ್ಸು ನೋಯದಿರಲೆಂಬ ಕರುಣೆಯ ದೃಷ್ಟಿಯಿಂದ, ಪ್ರೇಮದ ದೃಷ್ಟಿಯಿಂದ, ಅವಳ ಮಾತಿಗೆ ಮನ್ನಣೆ ಕೊಡುತ್ತೇನೆಯೇ ಹೊರತು, ಅವಳಿಗೆ ಯಜಮಾನಿತಿಯ ಪಟ್ಟವನ್ನು ಕಟ್ಟಿದರೆ ಆತ್ಮ ಗೌರವಕ್ಕೆ ಚ್ಯುತಿ ಬಂದೀತು. ಒಂದುವೇಳೆ ಯಜಮಾನಿಕೆ.... ಹೆಂಡತಿಯದೇ ಆದರೂ ಅದನ್ನು ಪ್ರಪಂಚಕ್ಕೆಲ್ಲಾ ಡಂಗೂರ ಹೊಡೆಯಲಾಗುತ್ತದೆಯೆ!

ಹಿಂದಿನ ಸಮಾಜದ ಕಟ್ಟು ಸಡಿಲವಾಗಿರುವ ಈ ಕಾಲದಲ್ಲಿ ಕೂಡ ಹೊಸ ಪ್ರಾಯದ ರಸಿಕರು ತಮ್ಮ ನಲ್ಲೆಯ ನಾಮಾಕ್ಷರಗಳನ್ನು ಏಕಾಂತ ದಲ್ಲಿ ಎಷ್ಟು ಪಾರಾಯಣ ಮಾಡಿದರೂ ಎಲ್ಲರೆದುರಿಗೆ ಧೈರ್ಯವಾಗಿ ಹೇಳಲು ನಾಚುವುದುಂಟು. ಆದರೆ ಇದಕ್ಕೆ ಕಾರಣ ಬೇರೆ; ನಮಗೆ ಹೆಂಗ ಸರ ವಿಷಯದಲ್ಲಿ ಲಘುಭಾವನೆಯೇನೂ ಇಲ್ಲ. ಬಲ್ಲವರು ತಮಗೆ ಪ್ರಿಯ ವಾದ ವಸ್ತುವನ್ನು ಅಪರೂಪಕ್ಕೆ ಒಂದೊಂದು ಬಾರಿ ಉಪಯೋಗಿಸಿ ಅದರ ಸವಿ ಇಳಿಯದಂತೆ ನೋಡಿಕೊಳ್ಳುತ್ತಾರೆ. ನಮ್ಮ ನಲ್ಲೆಯ ಹೆಸರು ದಿನ ಚರಿಯ ಸಾವಿರ ಮಾತುಗಳಲ್ಲಿ ಒಂದಾಗಿ ಬೆರೆದುಹೋಗಬಾರದು. ಅದು ನಾಲಗೆಗೆ ಅಷ್ಟು ಸವಿ, ಕಿವಿಗೆ ಅಷ್ಟು ಇಂಪು. ಹೊಸದಾಗಿ ಮದುವೆಯಾದ ಹೆಂಡತಿಯನ್ನು ತಾತ್ಕಾಲಿಕವಾಗಿ ಅಗಲಿದವರಿಗಂತೂ ಅದರ ಬೆಲೆ ನೂರು ಮಡಿ ಹೆಚ್ಚುತ್ತದೆ. ಒಬ್ಬರೇ ಇರುವಾಗ ಆ ಹೆಸರನ್ನು ನಮಗೆ ನಾವೇ ಮೆಲುದನಿಯಿಂದ ಹೇಳಿಕೊಂಡು ಸಾವಧಾನವಾಗಿ ಆಸ್ವಾದಿಸಿ ಮೆಲುಕು ಹಾಕುತ್ತೇವೆ. ಅನ್ಯಮನಸ್ಕರಾಗಿ ಮೇಜಿನ ಬಳಿ ಕುಳಿತು ಸಿಕ್ಕಿದ ಕಾಗದದ ಮೇಲೆ ಅದನ್ನು ನೂರು ಬಾರಿ ಬರೆದು, ಆ ನಾಮಾವಳಿ ಪ್ರಪಂಚದ ಕೀಳು ದೃಷ್ಟಿಗೇನಾದರೂ ಬಿದ್ದೀತೆಂಬ ಶಂಕೆಯಿಂದ ಕೂಡಲೆ ಅದನ್ನು ನಾಶ ಮಾಡುತ್ತೇವೆ. ಒಂದೊಂದು ವೇಳೆ ರಸ್ತೆಯಲ್ಲಿ ಯಾರೊಡನೆಯೋ ಮಾತಾಡುತ್ತಿರುವಾಗ ನಮಗೇ ತಿಳಿಯದಂತೆ ಉಂಗುಷ್ಠವು ನೆಲದ ಮೇಲೆ ಪ್ರಿಯಳ ಹೆಸರನ್ನು ಚಿತ್ರಿಸುತ್ತಿರುತ್ತದೆ. ಪೂರ್ವಕಾಲದ ಪ್ರೇಮ ಕಥೆಗಳಲ್ಲಿ ಬರುವ ನಾಯಕರು ಮರದ ತೊಗಟೆಯ ಮೇಲೆಲ್ಲಾ ತಮ್ಮ ಪ್ರೇಯಸಿಯರ ಹೆಸರು ಕೆತ್ತುತ್ತಿದ್ದರಂತೆ. ಕೆಲವರು ಇದನ್ನೆಲ್ಲಾ ಅತಿಶಯೋಕ್ತಿಯೆನ್ನ ಬಹುದು—ಪ್ರೇಮರಹಿತರುಲಕು ನಾಮರುಚಿ ದೆಲುಸುನಾ! ನಾಮಾಮೃತದ ರುಚಿ ಪ್ರಣಯಿಗಳಿಗೆ ಗೊತ್ತು, ಭಕ್ತರಿಗೆ ಗೊತ್ತು. ಇವರಿಬ್ಬರ ಹೃದಯ

ದಲ್ಲೂ ಅದರ ಪಾಕ ಒಂದೇ ಬಗೆಯದು. ಕೆಲವು 'ಅನಾಗರಿಕ' ಜನಾಂಗಗಳಲ್ಲಿ ತಮಗೆ ಅತ್ಯಂತ ಪ್ರಿಯವಾದ ಹೆಸರನ್ನು ಉಚ್ಚರಿಸಬಾರದೆಂಬ ವಿಧಿ ಯುಂಟಂತೆ. ನಮ್ಮ ಹೆಂಡತಿಯ ಹೆಸರು ಪವಿತ್ರವೂ ಹೌದು, ಪ್ರಿಯವೂ ಹೌದು. ಅದನ್ನು ಮಳೆಯಲ್ಲಿ ನೆನೆಸಿ ಬಿಸಿಲಲ್ಲಿ ಒಣಗಿಸುವುದು ಅಷ್ಟೇನೂ ನಾಗರಿಕತೆಯ ಚಿಹ್ನೆಯಲ್ಲ. ನಾಲಗೆ ಮೊದಲು ಆ ಹೆಸರನ್ನು ನುಡಿದಾಗ ನಮ್ಮ ಹೃದಯದಲ್ಲಾದ ಅಲ್ಲೋಲಕಲ್ಲೋಲ, ಮೈಯ ರೋಮಾಂಚ, ಬಹುಶಃ ನಮ್ಮೆಲ್ಲರ ನೆನಪಿನಲ್ಲಿದೆ. ಅದನ್ನು ದಿನಸಾಮಾನ್ಯದ ಬಳಕೆಗಿಟ್ಟು ಕೊಂಡರೆ ಆ ಮೋಹಕ ಶಕ್ತಿ ನಾಶವಾಗುತ್ತದೆ. ಅದಕ್ಕಾಗಿಯೇ ಸುವರ್ಣ ಪಾತ್ರೆಗಳನ್ನೂ ಮುತ್ತು ರತ್ನಗಳನ್ನೂ ಜೋಪಾನವಾಗಿಡುವಂತೆ ನಾವು ಅದನ್ನು ಹೃದಯದ ಸಂದಕದಲ್ಲಿಟ್ಟು ಉತ್ಸವಕಾಲದಲ್ಲಿ ಮಾತ್ರ ಬಳಸಿ ಕೊಳ್ಳುತ್ತೇವೆ.

ಅಂತೂ ಕಾರಣವೇನಾದರೂ ಇರಲಿ, ಕನ್ನಡಿಗರಿಗೆ ಹೆಂಡತಿಯ ಹೆಸರು ಇದ್ದೂ ಇಲ್ಲವಾಗಿದೆ. ಅನೇಕ ವೇಳೆ ತಂದೆತಾಯಿಯರು ಇಡುವ ಹೆಸರುಗಳು ಉಪಯೋಗಕ್ಕೆ ಅರ್ಹವೂ ಅಲ್ಲ. ಕಮಲ, ಶಾರದ, ಲಲಿತ, ಮೊದಲಾದ ಹೆಸರುಗಳು ಎಷ್ಟು ಮನೋಹರವಾಗಿದ್ದರೂ ಔಚಿತ್ಯವರಿಯದ ಜನರ ಕೈಗೆ ಸಾವಿರ ಬಾರಿ ಸಿಕ್ಕಿ, ತಮ್ಮ ಸತ್ವವನ್ನೆಲ್ಲಾ ಕಳೆದುಕೊಂಡಿವೆ. ಮತ್ತೆ ಕೆಲವು ಹಳೆಯಕಾಲದ ಹೆಸರುಗಳಂತೂ ಕೇಳಿದರೆ ಕಿವಿ ನೋಯು ವಂಥವು; ಅವುಗಳ ಒಡತಿಯರಿಗೆ ಅಪ್ಸರೆಯರ ಸೌಂದರ್ಯವಿದ್ದರೂ ಅವ ರನ್ನು ಹೆಸರಿಟ್ಟು ಕರೆಯುವುದಕ್ಕೆ ಬೇಸರವಾಗುತ್ತದೆ. ಹೆಂಡತಿ ಎಂಬ ಪದದಲ್ಲಿಯೇ ಸ್ತ್ರೀಸಹಜವಾದ ಸರಳತೆಯಿಲ್ಲ, ಮಾರ್ದವವಿಲ್ಲ. ಈ ವಿಷಯ ದಲ್ಲಿ ಬಂಗಾಳಿಗಳು ನಮಗಿಂತ ಎಷ್ಟೋ ಮುಂದುವರಿದಿದ್ದಾರೆ. ನಮ್ಮವರಿಗೆ ಧಾರ್ಮಿಕ ಶ್ರದ್ಧೆ ಹೆಚ್ಚಾದ್ದರಿಂದಲೋ ಏನೋ, ನಾಮಕರಣ ಸಮಯದಲ್ಲಿ ಅವರ ಗಮನ ಶಬ್ದಮಾಧುರ್ಯದ ಕಡೆಗೆ ಹರಿಯುವುದೇ ಇಲ್ಲ. ಬಂಗಾಳಿ ಕಥೆಗಳನ್ನೋದುವಾಗ ಕಥೆಯ ಸ್ವಾರಸ್ಯ ಹೇಗಾದರೂ ಇರಲಿ, ಅಲ್ಲಿಯ ಸ್ತ್ರೀಯರ ಹೆಸರುಗಳೇನೋ ನಮ್ಮನ್ನು ಸೆಳೆಯುತ್ತವೆ. ಲಾವಣ್ಯ, ಹೇಮಾಂಗಿನಿ, ಹೇಮಲತಾ, ಕಿರಣಮಾಲಾ, ರೂಪಲೇಖಾ–ನಮ್ಮಲ್ಲಿಯೂ ಇಂಥ ಹೆಸರುಗಳನ್ನೇಕೆ ಉಪಯೋಗಕ್ಕೆ ತರಬಾರದು!

ತಂದೆತಾಯಿಯರು ನಾಮಕರಣಕಾಲದಲ್ಲಿ ಮಾಡಿದ ತಪ್ಪನ್ನು ಸರಿ ಪಡಿಸುವ ಭಾರ ಪ್ರಿಯನ ಮೇಲೆ ಬೀಳುತ್ತದೆ. ಅವನು ಅದನ್ನು ಉತ್ಸಾಹ ದಿಂದ ವಹಿಸುತ್ತಾನೆಂದೂ ಹೇಳಬಹುದು. ಏಕೆಂದರೆ ಹೆಂಡತಿಯ ಹುಟ್ಟು

ಹೆಸರು ಎಷ್ಟೇ ಸುಂದರವಾಗಿರಲಿ, ಲಲಿತವಾಗಿರಲಿ, ಅದು ಪ್ರಿಯನ ಮನಸ್ಸೊಪ್ಪುವಷ್ಟು ಭಾವಪೂರಿತವಾಗಿರಲಾರದು. ಹೆಸರು ಕೇವಲ ಗುರುತಿಸುವುದಕ್ಕೆ ಸಾಧನ ಮಾತ್ರವಾದರೆ ಯಾವ ಹೆಸರಿಟ್ಟರೂ ಸಾಕು. ಆದರೆ ನಮಗೆ ಬೇಕಾದದ್ದು ಅಷ್ಟುಮಾತ್ರವಲ್ಲ. ಅವಳನ್ನು ಕಂಡಾಗ, ಅವಳ ಯೋಚನೆ ಬಂದಾಗ, ಕೊನೆಗೆ ಅವಳು ಧರಿಸಿದ ವಸ್ತ್ರದ ನೆನಪಾದಾಗ, ನಮ್ಮ ಆದ್ಯಂತ ದೇಹವನ್ನು ಕಂಪಿಸಿ ಹೃದಯವನ್ನು ದಹಿಸುವಂತೆ ಬರುವ ಒಲುಮೆಯ ಉದ್ವೇಗಕ್ಕೆ ನಾವು ಶಬ್ದ ರೂಪವನ್ನು ಕೊಡಬೇಕು. ಆದ್ದರಿಂದ ನಾವು ಪ್ರಿಯೆಗೆ ಬೇರೆ ಮುದ್ದಿನ ಹೆಸರೊಂದನ್ನು ಇಟ್ಟುಕೊಳ್ಳುವುದು ಅನಿವಾರ್ಯ. ಅದು ಹುಟ್ಟು ಹೆಸರಿನ ರೂಪಾಂತರವಿರಬಹುದು ; ಅದಕ್ಕಿಂತ ಕರ್ಕಶವಾಗಿ ಕಂಡರೂ ಕಾಣಬಹುದು ; ನಮ್ಮ ಮೆಚ್ಚುಗೆ ಪಡೆದ ಯಾವುದೋ ವಸ್ತುವಿನ, ಪ್ರಾಣಿಯ, ಹಕ್ಕಿಯ ಹೆಸರಿರಬಹುದು. ಯಾವುದೇ ಆಗಲಿ ಅದರ ರೂಪವನ್ನು ಬೇರೊಬ್ಬರು ಯಾರೂ ನಿರ್ಣಯಿಸಲಾರರು. ಆ ಹೆಸರು ಪ್ರೇಮದ ಕುಲುಮೆಯಿಂದ ತಾನಾಗಿ ಹಾರಿದ ಕಿಡಿ ; ಮೇಘಮಿಲನದಿಂದ ಮಿಂಚು ಹೊಳೆದಂತೆ ಪ್ರಿಯಪ್ರೇಯಸಿಯರ ಹೃದಯ ಮಿಲನದಿಂದ ಮೂಡಿಬರುತ್ತದೆ. ಇತರರಿಗೆ ಅದರಲ್ಲಿ ಯಾವ ವಿಧವಾದ ವೈಶಿಷ್ಟ್ಯವೂ ಕಾಣದಿರಬಹುದು. ಆದರೆ ನಮ್ಮಲ್ಲಿರುವ ಭಾವೋದ್ರೇಕದಿಂದ ಅದಕ್ಕೆ ಶಕ್ತಿ ಸೌಂದರ್ಯಗಳು ಕೂಡಿಬರುತ್ತವೆ. ಚಿನ್ನ ಎಂಬ ಪದದಲ್ಲಿ ಏನಿದೆ! ಸುಸಂಸ್ಕೃತರಿಗೆ ಚಿನ್ನ ನಿಕೃಷ್ಟವಾದ ಪದಾರ್ಥವೆಂದರೂ ಎನ್ನಬಹುದು. ಆದರೆ ನಾನು ನನ್ನ ಜೀವದ ಗೆಳತಿಯನ್ನು ಚಿನ್ನಾ ಎಂದು ಕರೆಯುವಾಗ ನನಗೆ ಆ ಲೋಹದ ನೆನಪಿಲ್ಲ. ನನ್ನೆದುರಿಗೆ ಆಗ ರೂಪುಗೊಳ್ಳುವುದು ಕೇವಲ ಒಂದು ಸ್ತ್ರೀ ರೂಪವೂ ಅಲ್ಲ, ಚಿನ್ನದಂತಿರುವ ಅವಳ ಮುಖರಾಗ ಮಾತ್ರವಲ್ಲ, ಅವಳ ನಿಲುವಿನ ಬೆಡಗು, ನಡಗೆಯ ವಿಲಾಸ, ವಸ್ತ್ರಭೂಷಣಗಳು, ಸುಗಂಧದ್ರವ್ಯ, ಕೊರಳದನಿ– ಇಷ್ಟು ಮಾತ್ರವೂ ಅಲ್ಲ. ಆ ಮುದ್ದಿನ ಹೆಸರು ಇಂದ್ರಿಯಗಳಿಗೆ ಗೋಚರವಾದ ವಸ್ತುಗಳ ಸಂಕೇತ ಮಾತ್ರವಲ್ಲ. ಇವೆಲ್ಲವನ್ನೂ ಒಳಗೊಂಡು, ಜಗತ್ತೆಲ್ಲವನ್ನೂ ಆವರಿಸಿ, ವೇದಾಂತಿಗಳು ಪರವಸ್ತುವಿನಲ್ಲಿ ಕಾಣುವ ಆನಂದವನ್ನು ನಮ್ಮ ಹೃದಯದಲ್ಲಿ ತುಂಬಿ, ತನ್ನದೇ ಒಂದು ಲಯಕ್ಕೆ ನಮ್ಮನ್ನು ಕುಣಿಸುತ್ತಿರುವ ಅದ್ಭುತ ಶಕ್ತಿಯೊಂದರ ಸಂಕೇತ.

ಮುದ್ದಿನ ಹೆಸರುಗಳೂ ಕನ್ನಡದಲ್ಲಿ ನಮಗೆ ಸಿಕ್ಕುವುದು ಅಪರೂಪ. ಸಂಸ್ಕೃತದಲ್ಲಿ ದಿವ್ಯವಾದ ಪದಗಳೇನೊ ಇವೆ. ರಾಮನು ಸೀತೆಯನ್ನು

ಪ್ರಿಯದರ್ಶಿನಿ, ವರವರ್ಣಿನಿ, ಎಂದು ಮುಂತಾಗಿ ಕರೆದಿದ್ದಾನೆ. ಆ ಕಾಲದಲ್ಲಿ ಇಂಥ ಪದಗಳು ಮನೆಮಾತಾಗಿದ್ದು ಅವುಗಳಲ್ಲಿ ಭಾವ ತುಂಬಿ ತುಳುಕುತ್ತಿದ್ದಿತೋ ಏನೋ. ಆದರೆ ಈಗ ಅವನ್ನು ಕಾವ್ಯದ ಕಳಂಕ ಮುಸುಕಿದೆ. ಸಂಸ್ಕೃತದಲ್ಲಿ ಓದಲು ಸೊಗಸೇ ಹೊರತು ಕನ್ನಡದಲ್ಲಿ ಉಪಯೋಗಿಸಲು ಸಾಧ್ಯವಿಲ್ಲ. ಪ್ರಿಯೆ, ಕಾಂತೆ, ನಲ್ಲೆ, ಮುಂತಾದ ಪದಗಳು ಬಳಕೆಯಲ್ಲಿದ್ದರೂ ಅವು ಸಹ ಭಾವಗೀತೆಗಳ, ನಾಟಕಗಳ ಪಾಲಾಗಿ ಹೋದವು. ಯಾರನ್ನಾದರೂ ಪ್ರಿಯೆ ಎಂದು ಕರೆಯಬೇಕಾದರೆ ನಾವು ಚಮಕಿ ಅಂಗಿಯನ್ನು ತೊಟ್ಟು "ಹೊಸ ಡ್ರೆಸ್ಸು ಹೊಸ ಸೀನರಿ"ಗಳಿಂದ ಮೆರೆಯುವ ರಂಗಸ್ಥಳದ ಆವರಣದಲ್ಲಿ ಹೋಗಿ ನಿಲ್ಲಬೇಕು. ಇಂಗ್ಲಿಷಿನವರೇನೋ ಡಾರ್ಲಿಂಗ್, ಡಿಯರ್, ಸ್ವೀಟ್, ಲವ್, ಮುಂತಾದ ಪದಗಳನ್ನು ಸ್ವಾಭಾವಿಕವಾಗಿ ಉಪಯೋಗಿಸುತ್ತಾರೆ. ಆದರೆ ನಾವು ಅಂಥ ಪದಗಳನ್ನು ಬಹಳ ಕಷ್ಟಪಟ್ಟರೆ ಪ್ರಣಯ ಪತ್ರಗಳಲ್ಲಿ ಉಪಯೋಗಿಸಬಹುದಾದರೂ ಅವುಗಳ ಬಳಕೆ ಸ್ವಾಭಾವಿಕ ಜೀವನಕ್ಕೆ ಹೊರತು. ಇಲ್ಲ, ನಮ್ಮ ನಲ್ಲೆಯರು ಒಳ್ಳೆಯ ಸವಿನುಡಿಗಳಿಂದ ಕರೆಸಿಕೊಳ್ಳುವ ಭಾಗ್ಯವನ್ನು ಪಡೆದು ಬರಲಿಲ್ಲ. ಕೊನೆಗೆ ಇಂಥ ಪದಗಳು ನಮಗೂ ಇಲ್ಲದೆ ನಾಟಕದವರಿಗೂ ಇಲ್ಲದೆ ನಿಘಂಟಿನಲ್ಲಿ ಗೋರಿಯಾಗುವ ಕಾಲ ಸಮೀಪಿಸುತ್ತಾ ಇದೆ.

ಕನ್ನಡಿಗರೆಲ್ಲರಿಗೂ ಇರುವಂತೆ ನನಗೂ ಮಾತೃಭಾಷೆಯಲ್ಲಿ ಅಮಿತವಾದ ಭಕ್ತಿ. ಆದರೂ ಇದೊಂದು ವಿಷಯದಲ್ಲಿ ಮಾತ್ರ ಕನ್ನಡಮಾತೆಯನ್ನು ದೂರವೆ ಇರಲಾರೆ. ಆಕೆಯನ್ನು ವರ್ಷಗಟ್ಟಲೆ ಅರ್ಚಿಸಿಯಾಯಿತು; ಹುಟ್ಟಿದಾರಭ್ಯ ಆಕೆ ಕಲಿಸಿದ ಮಾತುಗಳನ್ನು ತೊದಲಿಯಾಯಿತು. ಆದರೂ ಹೆಂಡತಿಯನ್ನು ಕರೆಯುವುದಕ್ಕೆ ಒಂದು ಪದ ಬೇಕಾದರೆ ನಾವು ಇಂಗ್ಲಿಷಿನ ಶರಣು ಹೋಗಬೇಕು. ತನ್ನ ಮೇಲಿರುವ ಪ್ರೇಮ ಸೊಸೆಯ ಕಡೆ ತಿರುಗುತ್ತಿರುವುದನ್ನು ನೋಡಿದರೆ ತಾಯಿಗೆ ಅಸಹನೆ ಬರುತ್ತದೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಕನ್ನಡಮ್ಮನಿಗೂ ನಮ್ಮ ಹೆಂಡತಿಯರನ್ನು ಕಂಡರೆ ಈ ಬಗೆಯ ಮಾತ್ಸರ್ಯವಿರಬಹುದು. ಅಂತೂ ತಾಯ್ನುಡಿಯಲ್ಲಿ ಅವರನ್ನು ಸಂಬೋಧಿಸುವುದು ಕಷ್ಟವಾಗಿದೆ.

## ದಿವಾನಖಾನೆಯ ಅಂದಚೆಂದ

ಇತ್ತೀಚಿಗೆ ನನ್ನ ಸ್ವಂತ ದಿವಾನಖಾನೆಯನ್ನು ಪ್ರವೇಶಿಸುವ ಧೈರ್ಯ ನನಗೇ ಇಲ್ಲ. ಸ್ವಲ್ಪ ಮಟ್ಟಿಗೆ ನಾನೇ ಸಂಪಾದಿಸಿದ, ಬಹುಮಟ್ಟಿಗೆ ಇತರರ ಸಂಪಾದನೆಯಿಂದ ಸಾಲ ತಂದ—ಅಂತೂ ಶ್ರಮದಿಂದ ಒಟ್ಟು ಗೂಡಿಸಿದ ಹಣವನ್ನು ಹುರುಳಿಯ ಕಾಳಿನಂತೆ ಚೆಲ್ಲಿ, ಮಳೆಯೆನ್ನದೆ ಬಿಸಿಲೆನ್ನದೆ ನಿಂತು ಒಂದೊಂದು ಇಟ್ಟಿಗೆಯನ್ನು ಜೋಡಿಸುವಾಗಲೂ ಎಲ್ಲಿ ಕೆಟ್ಟುಹೋಗುವುದೋ ಎಂದು ಆತಂಕಪಟ್ಟು, ಆ ಮನೆಯಲ್ಲಿ ನನಗೆ ಸುಖ ವುಂಟೆಂಬ ಭ್ರಾಂತಿಯಿಂದ ಅದನ್ನು ಕಟ್ಟಿದ್ದಾಯಿತು. ಆ ದಿವಾನಖಾನೆ ಯಂತೂ ನನಗಾಗಿ ನನ್ನೊಬ್ಬನಿಗಾಗಿ ಮಾತ್ರ ಕಟ್ಟಿದ್ದು. ಬೀದಿಯ ಮತ್ತು ಮನೆಯ ಗಲಭೆಯಿಂದ ದೂರವಾಗಿರಲೆಂದು ಮಹಡಿಯ ಮೇಲೆ ಕಟ್ಟಿದ ಕೊಠಡಿ—ಅದಕ್ಕಾಗಿ ನಾನು ವಹಿಸಿದ ಶ್ರಮವೆಷ್ಟು, ಸುರಿದ ಹಣ ವೆಷ್ಟು ! ಅಂತರಿಕ್ಷದಲ್ಲಿ ಯಾವ ದಿಕ್ಕಿನಿಂದ ಗಾಳಿ ಬೀಸಿದರೂ ಅದು ನನ್ನ ಕೊಠಡಿಯನ್ನು ತಂಪು ಮಾಡದಿರುವುದಿಲ್ಲ. ಮಳೆ ಬಿಸಿಲುಗಳ ಹೊಡೆತ ವನ್ನು ತಡೆಯುವಂತೆ ಸುತ್ತಲೂ ಪಡಸಾಲೆಗಳು. ಕೊಠಡಿಯಲ್ಲಿ ಕುಳಿತು ಪೂರ್ವಕ್ಕೂ ಉತ್ತರಕ್ಕೂ ತಿರುಗಿ ನೋಡಿದರೆ ಒಂದು ಕಡೆ ಚಾಮುಂಡಿಯ ಬೆಟ್ಟ ; ನಡುವೆ ದೂರದಲ್ಲಿ ಕರೀಘಟ್ಟದ ಶ್ರೇಣಿ ; ಇನ್ನೊಂದು ಕಡೆ ಬೆಚ್ಚ ನೆಯ ಬಿಸಿಲಿನಲ್ಲಿ ಮೆಲುಕುಹಾಕುವ ಬಸವನಂತೆ, ತನಗೆ ಸಹಜವಾದ ಕ್ರೌರ್ಯವನ್ನು ಮರೆತು ಶಾಂತ ಮುದ್ರೆಯಿಂದ ನಿದ್ರಿಸುವ ಸಿಂಹದಂತೆ ಹಿರೋಡೆಯ ಬೆಟ್ಟಗಳು. ಅಲ್ಲಿಂದ ಎಡಕ್ಕೆ ತಿರುಗಿದರೆ ನಸುನೀಲಿಯ ಬಣ್ಣದಿಂದ ಕಂಗೊಳಿಸುತ್ತ ನನ್ನ ಕುಲದೈವದ ವಾಸದಿಂದ ಪವಿತ್ರವಾದ ಯದುಗಿರಿ. ನನಗೂ ಈ ಬೆಟ್ಟಗಳಿಗೂ ನಡುವೆ ಹಸುರು ಹೊಲಗಳ, ತೆಂಗಿನ ತೋಟಗಳ, ನಾನಾ ವಿಧವಾದ ಗಿಡಮರಗಳ, ವಿಶಾಲವಾದ ಕಣಿವೆ. ಇದೆಲ್ಲವನ್ನೂ ಕೊಠಡಿಯೊಳಗಿನಿಂದಲೇ ನೋಡುವಂತೆ ಬಿಸಿಲು ಮಚ್ಚು ಮಾಡಿಸಿ ಆ ಕಡೆಗೆ ದೊಡ್ಡ ಬಾಗಿಲನ್ನಿಟ್ಟಿದ್ದೇನೆ. ನನ್ನ ಭಾಗಕ್ಕೆ ಮನೆಯೆಂದರೆ ಇದೊಂದು ಕೊಠಡಿ ಮಾತ್ರ. ಅಡಿಗೆಮನೆ, ಊಟದ ಮನೆ, ಮೊದಲಾದುವು—ಇರಬೇಕೇನೊ, ಇದ್ದುಕೊಳ್ಳಲಿ. ನನ್ನ ಜೀವನ ಬಹುಮಟ್ಟಿಗೆ ಇದೊಂದು ಕೊಠಡಿಯಲ್ಲೇ ಸಾಗುತ್ತದೆ.

ಹೀಗೆ ನನ್ನ ಮನಸ್ಸನ್ನು ತುಂಬಿ ಹೃದಯವನ್ನಾಕ್ರಮಿಸಿರುವ

ಕೊಠಡಿಗೇ ಈಗ ಪ್ರವೇಶವಿಲ್ಲ. ಬಾಗಿಲಿನಲ್ಲಿ ದವಾಲಿ ಧರಿಸಿದ ಚಪ್ರಾಸಿಯೊಬ್ಬ ನಿಂತು ನನ್ನನ್ನು ತಡೆಯುತ್ತಾನೆಂದಲ್ಲ; ಆ ಅನುಭವ ಬೇರೆ ಕಡೆ ಆಗಿದೆ; ನನ್ನ ಮನೆಯಲ್ಲೂ ಇತರರಿಗೆ ಆಗಲೆಂಬ ತುಚ್ಛ ಬಯಕೆ ಆಗಾಗ ಮನಸ್ಸಿನಲ್ಲಿ ಸುಳಿದಿರಬಹುದು. ಗೃಹಾಧಿದೇವತೆ ಲಲಿತಾದೇವಿ ಬಾಗಿಲಿಗೆ ಬೀಗಮುದ್ರೆ ಮಾಡಿದ್ದಾಳೆಂದೂ ಅಲ್ಲ. ಅವಳು ಅಧಿಕಾರ ಚಲಾಯಿಸುವ ರೀತಿ ಪರಿಣಾಮಕಾರಿಯಾದರೂ ಅಷ್ಟು ಅನಾಗರಿಕವಲ್ಲ. ಅಥವಾ ಕೊಠಡಿ ಅವ್ಯವಸ್ಥಿತವಾಗಿದ್ದು ಅದರೊಳಕ್ಕೆ ಹೋಗುವುದು ಬೇಸರವಾಗುತ್ತದೆಂದೂ ಅಲ್ಲ—ಅದರ ಅಂದಚೆಂದ ಹೇಳತೀರದು. ವಾಸ್ತವವಾಗಿ ನೋಡಿದರೆ ಅದರ ಸೌಂದರ್ಯವೇ ಒಂದು ದುಷ್ಟ ಶಕ್ತಿಯಾಗಿ ಪರಿಣಮಿಸಿ ನನ್ನನ್ನು ಹೊರದೂಡಿದೆ.

ಈ ಪರಿಸ್ಥಿತಿ ಏಕಾಏಕಿ ಒದಗಲಿಲ್ಲ. ಮನೆ ಕಟ್ಟಿದ ಮೇಲೆ ಕೈಬರಿದಾಗಿ ನಾನು ಫರ್ನಿಚರ್ ಕೊಳ್ಳುವ ಗೊಡವೆಗೆ ಹೋಗಲಿಲ್ಲ. ಮನೆಯಲ್ಲಿದ್ದ ಮೂರು ಸುಂದರ್ ಕುರ್ಚಿಗಳ ಮೇಲೆ ಸಣ್ಣ ಮೆತ್ತೆಗಳನ್ನು ಹಾಕಿಸಿದರೆ ಅವೇ ಸೋಫಾದ ಕರ್ತವ್ಯವನ್ನು ನಿರ್ವಹಿಸಬಹುದೆನ್ನಿಸಿತು. ನಮ್ಮ ತಂದೆಯ ಕಾಲದಿಂದಲೂ ಬಂದ ದೊಡ್ಡ ಮೇಜೊಂದಿದೆ. ಅದರ ಮೇಲೆ ಖಾದಿ ವಸ್ತ್ರವನ್ನು ಹರಡಿದರೆ ಇತ್ತ ಯಥಾಶಕ್ತಿ ದೇಶಸೇವೆಯಾಯಿತು, ಗಾಂಧಿ ತತ್ವಕ್ಕೆ ಮನ್ನಣೆ ಕೊಟ್ಟಂತಾಯಿತು. ಅತ್ತ ಸುಲಭದ ಖರ್ಚಿನಲ್ಲಿ ಮೆರುಗಿಲ್ಲದ ಮರವನ್ನು ಮುಚ್ಚಿ ಗೌರವ ಉಳಿಸಿಕೊಂಡಂತಾಯಿತು. ನಯವಾಗಿ ಸಿಮೆಂಟು ಮಾಡಿಸಿ ಬಣ್ಣದ ಹೆಂಚುಗಳಿಂದ ಅಂಚುಕಟ್ಟಿರುವ ನೆಲವಿರುವಾಗ ಅದಕ್ಕೆ ಜಮಖಾನೆಯ ಅವಶ್ಯಕತೆಯೇನೂ ಇಲ್ಲ. ಜಮಖಾನೆಯಿದ್ದರೆ ಅದರಲ್ಲಿ ಬಂಡಿಗಟ್ಟಲೆ ಧೂಳು ಸೇರಿಕೊಳ್ಳುತ್ತದೆ. ಅದನ್ನು ಪದೇ ಪದೇ ಬಡಿದು ಹಾಕುವುದು ಕಷ್ಟ. ಹಾಗೆ ಬಡಿಯುವಾಗ ಧೂಳು ಕುಡಿದು ಎಷ್ಟೋ ಜನರಿಗೆ ಕ್ಷಯರೋಗ ಬಂದಿದೆಯಂತೆ—ನಮ್ಮ ಮನೆಯವರ ಶ್ವಾಸಕೋಶ ಅಷ್ಟೇನೂ ಗಟ್ಟಿಮುಟ್ಟಾದದ್ದಲ್ಲ!.... ಕೈಯಲ್ಲಿ ಹಣವಿಲ್ಲದಿರುವಾಗ ಸರಳಜೀವನದ ಪರವಾಗಿ ಈ ಬಗೆಯ ವಾದ ಹೂಡುವುದೇನೂ ಕಷ್ಟವಲ್ಲ.

ಹಲವಾರು ವರ್ಷ ಹೀಗೆಯೇ ಕಳೆದ ಮೇಲೆ ಒಂದು ದಿನ ಲಲಿತೆ ನನಗೆ ಪರಿಚಿತರಾದವರೊಬ್ಬರ ಮನೆಗೆ ಅರಿಸಿನ ಕುಂಕುಮಕ್ಕೆ ಹೋಗಬೇಕಾಗಿಬಂತು. ಅವರು ಯುದ್ಧಕಾಲದಲ್ಲಿ ತಮ್ಮ ಹುದ್ದೆಗೆ ರಾಜಿನಾಮೆಯನ್ನು ಕೊಟ್ಟು ದೇಶವನ್ನು ಹಿಟ್ಲರ್, ಟೋಜೋ, ಮೊದಲಾದ ನರರಾಕ್ಷಸರಿಂದ ಪಾರುಮಾಡಬೇಕೆಂಬ ಘನೋದ್ದೇಶದಿಂದ ಯುದ್ಧಕಾರ್ಯಗಳಿಗೆ

ನೇರವಾಗಿ ನಿಂತರು. ಮಿಲಿಟೆರಿ ಕಂಟ್ರಾಕ್ಟು ಹಿಡಿಯುವುದೇ ಅವರ ಸೇವಾ ಕ್ಷೇತ್ರ. ದೇಶವು ಯುದ್ಧಪಾತಕಿಗಳ ಪಿಶಾಚಮುಷ್ಟಿಯಿಂದ ಪಾರಾಗುತ್ತ ಬಂದ ಹಾಗೆಲ್ಲಾ ರಾಯರೂ ಬಡತನದಿಂದ ಪಾರಾಗುತ್ತ ಬಂದರು—ಅವರು ಯಾವಾಗಲೂ ಸ್ವಾಮಿಕಾರ್ಯಕ್ಕೂ ಸ್ವಕಾರ್ಯಕ್ಕೂ ಭೇದ ಕಲ್ಪಿಸಿದವರಲ್ಲ. ನಮ್ಮಲ್ಲಿ ಹುದುಗಿರುವ ಸದ್ಗುಣಗಳೂ ತೇಜಸ್ಸೂ ಯುದ್ಧಕಾಲದಲ್ಲಿ ಹೊರಹೊಮ್ಮಿ ದುಸ್ಸಾಧ್ಯವಾದ ಕೆಲಸಗಳನ್ನು ಸುಲಲಿತವಾಗಿ ಸಾಗಿಸುತ್ತವೆಯಷ್ಟೆ. ಅಂತೆಯೇ ರಾತ್ರಿ ಕೇವಲ ಗುಮಾಸ್ತೆಯಾಗಿದ್ದ ರಾಯರು ಬೆಳಗ್ಗೆ 'ಕೈಗಾರಿಕೆಯ ಕ್ಯಾಪ್ಟನ್' ಆದರು; ತಮ್ಮ ಹೊಸ ಅಂತಸ್ತಿಗೆ ತಕ್ಕಂತೆ ದೊಡ್ಡ ಮನೆಯನ್ನು ಕಟ್ಟಿ ಅದನ್ನು ತಮಗೆ ಮೆಚ್ಚಿದ ರೀತಿಯಲ್ಲಿ ಅಳವಡಿಸಿದರು. ಲಲಿತೆ ಅವರ ಮನೆಗೆ ಹೋದ ದಿನ ರಾಯರ ಪತ್ನಿ ತಮ್ಮ ದಿವಾನಖಾನೆಯನ್ನು ಬಹಳ ಹೆಮ್ಮೆಯಿಂದ ತೋರಿಸಿದರಂತೆ. ಆ ವಿಷಘಳಿಗೆಯಿಂದ ನನ್ನ ಸಂಕಟ ಪ್ರಾರಂಭವಾಯಿತು.

ಮನೆಗೆ ಬರುವ ಹೊತ್ತಿಗೆ ಲಲಿತೆಗೆ ಹಲವು ವಿಷಯಗಳಲ್ಲಿ ಜ್ಞಾನೋದಯವಾಗಿತ್ತು. ನನಗೆ ಮುನ್ನೂರು ರೂಪಾಯಿನ ಸಂಬಳವಿದೆ, ಅದಕ್ಕನುಗುಣವಾದ ಸ್ಥಾನಮಾನಗಳಿವೆ, ಎನ್ನುವುದು ಅವಳ ಗಮನಕ್ಕೆ ಅಷ್ಟಾಗಿ ಬಂದಿರಲಿಲ್ಲ. ಈಗ ಅವಳ ಕಣ್ಣು ತೆರೆಯಿತು. ಯೋಗ್ಯತೆಗೆ ಸರಿಯಾಗಿ ನಮ್ಮ ಜೀವನದ ಮಟ್ಟ ಏರಬೇಡವೇ ? ಮೂರುವರೆ ರೂಪಾಯಿನ ಸುಂದರ್ ಕುರ್ಚಿಗಳು, ಜನಮೇಜಯರಾಯ ಹಸುಗೂಸಾಗಿದ್ದ ಕಾಲದಲ್ಲಿ ಮಾಡಿಸಿದ ಮೇಜವೊಂದು—ಇಷ್ಟೇ ನಮ್ಮ ಮನೆಯಲ್ಲಿದ್ದ ಚರಸ್ವತ್ತು ! ಯಾರಾದರೂ ಮನೆಗೆ ಬಂದಾಗ ಕೂರಿಸುವುದಕ್ಕೆ ಸರ್ವದಾ ಅಚ್ಚುಕಟ್ಟಾಗಿ ಅಲಂಕರಿಸಿದ ಕೊಠಡಿಯೊಂದಿರಬೇಡವೆ ? ಸ್ನೇಹಿತರು ಬಂದರೆ ಯಾವ ಮುಖದಿಂದ ಅವರನ್ನು ಒಳಕ್ಕೆ ಕರೆಯುತ್ತೇನೋ ? ರಾಯರ ಮನೆಯ ದಿವಾನಖಾನೆಯನ್ನು ನೋಡಬಾರದೆ ! ಅವರು ನನ್ನಷ್ಟು ಓದಿದವರಲ್ಲವಾದರೂ ಮನೆಯನ್ನು ಅದೆಷ್ಟು ಲಕ್ಷಣವಾಗಿಟ್ಟುಕೊಂಡಿದ್ದಾರೆ ! ಈ ಅವಸ್ಥೆಯಲ್ಲಿಟ್ಟುಕೊಳ್ಳುವ ಭಾಗ್ಯಕ್ಕೆ ನಾವು ಅಷ್ಟು ದೊಡ್ಡ ಮನೆಯನ್ನು ಕಟ್ಟಿದ್ದಾದರೂ ಏಕೆ ? ಇದನ್ನೆಲ್ಲಾ ನಾನು ಮೌನವಾಗಿ ಕೇಳಿದೆ. ಅವಳ ಮಾತು ನ್ಯಾಯವಾಗಿಯೇ ತೋರಿತು. ನನ್ನ ಸ್ನೇಹಿತರೆಲ್ಲಾ ನಾನು ಕಾಸುಗಳ್ಳನೆಂದೇ ತಿಳಿದಿರಬೇಕು. ಏನೋ ಮರ್ಯಾದಸ್ಥರಾದ್ದರಿಂದ ಬಾಯಲ್ಲಿ ಆಡದೆ ಸುಮ್ಮನಿದ್ದಾರೆ. ಇನ್ನು ಮುಂದಾದರೂ ಮನೆಯ ಶೃಂಗಾರದ ಕಡೆಗೆ ಸ್ವಲ್ಪ ಗಮನಕೊಡಬೇಕೆಂದು ನಿಶ್ಚಯಿಸಿದೆ.

ಅದುವರೆಗೆ ನನ್ನ ದಿವಾನಖಾನೆಯ ಗೋಡೆಗಳು ಸುಣ್ಣ ತೊಡೆದ ದ್ದೊಂದು ಹೊರತು ಬೇರೆ ಯಾವ ಉಪಚಾರವನ್ನೂ ಕಂಡಿರಲಿಲ್ಲ. ಆದ ಸುಣ್ಣ ತೊಡೆದ ಗೋಡೆಗಳು ಮುನ್ನೂರು ರೂಪಾಯಿ ಸಂಬಳ ತರುವವನ ಅಂತಸ್ತಿಗೆ ತೀರ ಕಡಮೆಯೆಂದು ಈಗ ಸ್ಪಷ್ಟವಾಯಿತು. ಗುಮಾಸ್ತ ಮನೆಗಳಲ್ಲೂ ಸುಣ್ಣ ತೊಡೆದಿರುತ್ತಾರೆಂದಮೇಲೆ ನನ್ನ ಹೆಚ್ಚುಗಾರಿಕೆ ಯೇನಾಯಿತು ? ಆದ್ದರಿಂದ ಆ ಸುಣ್ಣವನ್ನೆಲ್ಲಾ ಉಜ್ಜಿಸಿ ಅದಕ್ಕೆ ಬದಲು ಕಾಲ್ಸೋರಿಯಂ ಹಾಕಿಸುವ ಯೋಚನೆ ಮಾಡಿದೆವು. 'ಸಿಂಧು' ಪತ್ರಿಕೆಯ 'ಗೃಹಶೃಂಗಾರ' ಭಾಗದಲ್ಲಿ ಯಾರೋ ಮಹಿಳೆ, ಅಥವಾ ಮಹಿಳೆಯ ಹೆಸ ರಿಟ್ಟುಕೊಂಡ ಮಹನೀಯ ಬರೆದಿದ್ದನಂತೆ—ಸಮುದ್ರದ ಹಸುರಿನ ಬಣ್ಣ ಕಣ್ಣಿಗೆ ಬಹಳ ಒಳ್ಳೆಯದೆಂದು. ಆತನ ಅಭಿಪ್ರಾಯಕ್ಕೆ ತಲೆಬಾಗಿ ನಾವು ಅದೇ ಬಣ್ಣದ ಕಾಲ್ಸೋರಿಯಂ ತರಿಸಿದೆವು. ಸುಣ್ಣದ ಖರ್ಚಿಗಿಂತ ಎಂಟ ರಷ್ಟು ಹೆಚ್ಚು ಖರ್ಚಾಯಿತು. ಆದರೆ ಒಂದು ಸಾರಿ ತೊಡೆದಮೇಲೆ ಹತ್ತು ವರ್ಷ ಅದರ ಗೊಡವೆಗೆ ಹೋಗಬೇಕಾಗಿಲ್ಲವೆಂದು 'ಸಿಂಧು' ಪತ್ರಿಕೆ ಭ ವಸೆಕೊಟ್ಟಿತ್ತು. ಕಾಲ್ಸೋರಿಯಂ ಕೆಲಸ ಮುಗಿಯುವುದರೊಳಗೆ ಕೊಠಡಿಯ ಅಳತೆಗೆ ಸರಿಯಾದ ಜಮಖಾನೆಯೂ ಬಂತು. ಇದಾದ ಮೇಲೆ ಫರ್ನಿಚರ್ ಅಂಗಡಿಗೆ ಹೋಗಿ ಇಬ್ಬರು ಕೂಡಬಹುದಾದ ಸೋಫಾ, ಅದೇ ಮಾದರಿಯ ಕುರ್ಚಿಗಳೆರಡು, ಅದಕ್ಕೆ ಹೊಂದುವಂತಿದ್ದ ಟೀಪಾಯಿ, ಕಂಚಿನಲ್ಲಿ ಕುಸು ರಿಯ ಕೆಲಸ ಮಾಡಿದ್ದ ಪುಷ್ಪಪಾತ್ರೆ—ನಾನೂರು ರೂಪಾಯಿ ತೆತ್ತು ಇದ ನ್ನೆಲ್ಲಾ ತಂದೆವು. ಕೊಠಡಿಯ ದಕ್ಷಿಣದ ಗೋಡೆಯನ್ನನುಸರಿಸಿ ಸೋಫಾ ವನ್ನೂ ಅಕ್ಕಪಕ್ಕದ ಗೋಡೆಗಳಿಗೆ ಸರಿಯಾಗಿ ಎರಡು ಕುರ್ಚಿಗಳನ್ನೂ ಅಣಿಯಾಗಿ ಇಟ್ಟದ್ದಾಯಿತು. ಟೀಪಾಯಿ ಕೊಠಡಿಯ ಮಧ್ಯ ಭಾಗವನ್ನ ಅಲಂಕರಿಸಿತು. ಉತ್ತರ ಭಾಗ ಮಾತ್ರ ಸ್ವಲ್ಪ ಬೆತ್ತಲೆಯಾಗಿಯೇ ಕಾಣು ತ್ತಿತ್ತು. ಅದರ ಮಾನರಕ್ಷಣೆಗಾಗಿ ಒಂದು ಮೂಲೆಯಲ್ಲಿ ಬೀಟಿಯ ಮರದ ಕಾಲುಮಣೆಯನ್ನಿಟ್ಟು ಅದರ ಮೇಲೆ ನಮ್ಮ ರೇಡಿಯೋ ಯಂತ್ರವನ್ನು ಸ್ಥಾಪನೆ ಮಾಡಿದೆವು. ಅದರ ಬಳಿಯಲ್ಲೇ ಬೀಟಿ ಮರದ ಕುರ್ಚಿಯೊಂದು ಬಂದು ಕೂತಿತು. ಈ ನವನಾಗರಿಕತೆಯ ದಾಳಿಯನ್ನು ಎದುರಿಸಲಾರದೆ ನಮ್ಮ ಸುಂದರ್ ಕುರ್ಚಿಗಳು ಒಳಕೊಠಡಿಗೆ ಹಿಮ್ಮೆಟ್ಟಿದವು. ಮೇಜಿಗಂತೂ ದಿವಾನಖಾನೆಯಲ್ಲಿ ಸ್ಥಾನವೇ ಇಲ್ಲವಷ್ಟೆ.

ಈ ಏರ್ಪಾಟೆಲ್ಲಾ ನಡೆದದ್ದು ಕೇವಲ ಆ ಘಳಿಗೆಯಲ್ಲಿ ಹುಚ್ಚು ತೋರಿದಂತಲ್ಲ. ಇದಕ್ಕೆಲ್ಲಾ ಆಧಾರಭೂತವಾದ ತತ್ವವೊಂದಿತ್ತು. 'ಸಿಂಧು'

ಪತ್ರಿಕೆಯಲ್ಲಿ ಲೇಖನ ಬರೆದಿದ್ದಾಕೆ ಹೇಳಿದ್ದಳಂತೆ: ಕೊಠಡಿಯಲ್ಲಿ ಪ್ರತಿಯೊಂದು ಅಂಶವೂ ಉಳಿದವುಗಳಿಗೆ ಹೊಂದಿಕೊಂಡಿರಬೇಕು, ಅದೇ ಸೌಂದರ್ಯದ ಮೂಲ ತತ್ವ ಎಂದು. ನಮ್ಮ ಸೋಫಾ ಮತ್ತು ಕುರ್ಚಿಗಳು ಬೀಟೆಯ ಮರದಲ್ಲಿ ಮಾಡಿದವು: ಆದ್ದರಿಂದ ರೇಡಿಯೋ ಯಂತ್ರವನ್ನಿಟ್ಟದ್ದ ಕಾಲುಮಣೆ, ಅದರ ಬಳಿ ಇದ್ದ ಕುರ್ಚಿ, ಟೀಪಾಯಿ, ಎಲ್ಲಾ ಬೀಟೆಯ ಮರದ್ದೇ ಆಗಬೇಕಾಯಿತು. ನನ್ನ ಪುಣ್ಯಕ್ಕೆ ಜಂತಿಗಳೂ ಕಿಟಕಿಯ ಬಾಗಿಲುಗಳೂ ಬೀಟೆಯ ಮರದ್ದೇ ಆಗಬೇಕೆಂದು ಲಲಿತೆ ಹಟ ಹಿಡಿಯಲಿಲ್ಲ. ಇಷ್ಟಾದರೂ ನಮ್ಮ ಹೊಂದುವಣೆಯ ತತ್ವಕ್ಕೆ ಭಂಗ ತರುವ ಅಂಶವೊಂದು ಉಳಿದೇ ಉಳಿಯಿತು—ಗೋಡೆಗಳಿಗೆ ಮೊದಲೇ ಸಮುದ್ರದ ಹಸುರಿನ ಬಣ್ಣ ಹಾಕಿಸಿಬಿಟ್ಟಿದ್ದೆವು. ಆದರೆ ಅದನ್ನು ಸರಿಪಡಿಸಲು ಲಲಿತೆ ಉಪಾಯವೊಂದನ್ನು ಇಟ್ಟಿದ್ದಳು.

ಒಂದು ದಿನ ಸಂಜೆ ನಾನು ಮನೆಗೆ ಬರುವ ಹೊತ್ತಿಗೆ ಕೊಠಡಿಯ ಅಲಂಕಾರ ಕೊನೆಯ ಘಟ್ಟವನ್ನು ದಾಟಿ ಪೂರ್ಣರೂಪವನ್ನು ತಳೆದಿತ್ತು. ಕಿಟಕಿಗಳ ಕೆಳಭಾಗವೆಲ್ಲಾ ಪರದೆಗಳಿಂದ ಮುಚ್ಚಿಹೋಗಿತ್ತು. ಬಾಗಿಲುಗಳಿಂದಲೂ ಪರದೆಗಳು ಇಳಿಯಬಿದ್ದಿದ್ದವು—ಸಮುದ್ರದ ಹಸುರು ಬಣ್ಣದವೆಂದು ಮತ್ತೆ ಹೇಳಬೇಕಾದ್ದಿಲ್ಲ. ಸೋಫಾ, ಕುರ್ಚಿಗಳು, ಟೀಪಾಯಿ ಎಲ್ಲವೂ ಉಡುಪು ಧರಿಸಿದ್ದವು—ಎಲ್ಲಕ್ಕೂ ಅದೇ ಸಮುದ್ರದ ಹಸುರು ಬಣ್ಣದ ಮೇಲಂಗಿ. ಕೊನೆಗೆ ರೇಡಿಯೋ ಯಂತ್ರವೂ ಅದೇ ಬಣ್ಣದ ಕುಲಾವಿ ಹಾಕಿಕೊಂಡು ಅದರ ಮಧ್ಯದಿಂದ ಇಣಿಕಿ ನೋಡಿತು. ಅದರ ದೃಷ್ಟಿಯಲ್ಲಿ ಒಂದು ಬಗೆಯ ದೈನ್ಯ, ಅವಮಾನ, ತನ್ನ ದುರವಸ್ಥೆಯಿಂದ ನಾನಾದರೂ ಬಿಡಿಸಬಹುದೇನೋ ಎಂಬ ಆಸೆ, ಎಲ್ಲಾ ವಿಳಿತವಾದಂತೆ ತೋರಿತು. ಆದರಿಂದ ಹೊರಡುತ್ತಿದ್ದ ಗಾನವೂ ಹೃದಯವಿದ್ರಾವಕವಾಗಿಯೇ ಇತ್ತು—ಆದರೆ ಅದು ನಮ್ಮ ಸಂಗೀತದ ವೈಖರಿಯೇ ಹೊರತು ಯಂತ್ರದ ಗೋಳುಕರೆಯಿರಲಾರದು. ಇದೆಲ್ಲಾ ಹೇಗಾದರೂ ಇರಲಿ, ಕೊಠಡಿಯ ಅಲಂಕಾರ ಒಟ್ಟಿನಲ್ಲಿ ನನ್ನ ಗಮನವನ್ನು ಸೆಳೆಯಿತು. ಸಮುದ್ರದ ಹಸುರು ಸ್ವಲ್ಪ ಹೆಚ್ಚಾಯಿತೆಂದರೂ ನಮ್ಮ ಕೈತೋಟದಿಂದ ಆರಿಸಿತಂದು ಪುಷ್ಪಪಾತ್ರೆಯಲ್ಲಿಟ್ಟಿದ್ದ ಗುಲಾಬಿ ಹೂವುಗಳು ಸ್ವಲ್ಪಮಟ್ಟಿಗೆ ವರ್ಣವೈವಿಧ್ಯವನ್ನು ಕೊಟ್ಟಿದ್ದವು. ಹೊರಗಿನಿಂದ ಅನ್ಯಮನಸ್ಕನಾಗಿ ಬಂದ ನನ್ನೆದುರಿಗೆ ಹಠಾತ್ತಾಗಿ ಮೆರೆದ ಈ ಸೊಬಗನ್ನು ನೋಡಿ ಆ ಘಳಿಗೆಯಲ್ಲಿ ಸಂತೋಷವಾಯಿತೆಂದೇ ಒಪ್ಪಬೇಕು. ಬೆಕ್ಕಿನ ಹಾಗೆ ಸದ್ದಿಲ್ಲದೆ

ನನ್ನ ಹಿಂದೆಯೇ ಬಂದು ನನ್ನ ಆನಂದದಲ್ಲಿ ಭಾಗಿಯಾಗಲು ನಿಂತಿದ್ದ ಲಲಿತೆಯ ಕಡೆ ನೋಡಿದೆ. ಅವಳ ಮುಖದಲ್ಲಿದ್ದ ಸಂತೃಪ್ತಿಗಂತೂ ಮಿತಿಯೇ ಇಲ್ಲ. ಕೊಠಡಿಯ ಪುನರ್ನಿರ್ಮಾಣಕಾರ್ಯದಲ್ಲಿ ಅವಳದ್ದೇ ಪ್ರಧಾನ ಪಾತ್ರವಷ್ಟೆ. ಅದುವರೆಗೆ ಅವಳ ಕಲ್ಪನೆಯ ರಾಜ್ಯದಲ್ಲಿದ್ದ ಸುಂದರವಾದ ಕನಸೊಂದು ಈಗ ವಾಸ್ತವತೆಯ ರೂಪುರೇಖೆಗಳನ್ನು ತಳೆದಿತ್ತು. "ನನ್ನ ವಶಕ್ಕೆ ಬಿಟ್ಟರೆ ಮನೆ ಹೇಗಿರುತ್ತೆ, ನೋಡಿ" ಎನ್ನುವಂತೆ ದೃಷ್ಟಿಯಿಂದಲೇ ನನ್ನ ಅಭಿನಂದನೆಯನ್ನು ಕೋರಿದಳು, ಪಡೆದಳು.

ಒಂದು ನಿಮಿಷ ಬಾಗಿಲಿನಲ್ಲೇ ನಿಂತು ಕೊಠಡಿಯ ಅಂದವನ್ನು ಸವಿದ ಮೇಲೆ ಅಂಗಿಯನ್ನು ಸೋಫಾದ ಮೇಲೆ ಬಿಚ್ಚಿ ಹಾಕಿ ಜೋಡನ್ನು ಕಳೆಯು ವುದರಲ್ಲಿದ್ದೆ. ಅಷ್ಟರಲ್ಲೇ ಲಲಿತೆ ಚೇಳುಕಡಿದವಳಂತೆ ಚೀರಿದಳು. ನನ್ನ ಹಳೆಯ ಶ್ವಪಚತನವನ್ನು ಇನ್ನಾದರೂ ಬಿಡಬೇಡವೆ? ಬೀದಿಯ ಮಣ್ಣ ನ್ನೆಲ್ಲಾ ಹೊತ್ತುತಂದು ಜಮಖಾನೆಯ ಮೇಲೆಯೇ ಇಳಿಸಬೇಕೆ? ಬಟ್ಟೆ ಗಳನ್ನು ಹೀಗೆ ನಿಂತ ಕಡೆ ಎಸೆಯುವುದಾದರೆ ದಿವಾನಖಾನೆಯನ್ನು ಓರಣ ವಾಗಿಡುವುದು ಹೇಗೆ? ಅಂಗಿ ಇಡುವುದಕ್ಕೆ ಬೇರೆ ಸ್ಥಳವಿದೆ, ಇಲ್ಲಿ ತನ್ನಿ, ಇತ್ಯಾದಿ ಬುದ್ಧಿಯ ಮಾತುಗಳು ಬಂದವು. ನನಗೆ ಕೋಪ ಬರಲಿಲ್ಲ. ಎಷ್ಟೇ ಆಗಲಿ ನ್ಯಾಯಕ್ಕೆ ತಲೆಬಾಗುವ ಸ್ವಭಾವ. ಮರುಮಾತಾಡದೆ ಒಳ ಕೊಠಡಿಗೆ ಹೋಗಿ ಬಟ್ಟೆಗಳನ್ನು ಬದಲಾಯಿಸಿ ಮತ್ತೆ ದಿವಾನಖಾನೆಗೆ ಬಂದು ಕುರ್ಚಿಯ ಮೇಲೆ ಕುಳಿತೆ. ಅದರ ಮೆತ್ತೆಗಳು ಎಲ್ಲ ಕಡೆಯಿಂದಲೂ ನನ್ನನ್ನು ಅಪ್ಪಿದವು. ಎದುರಿನ ಬಾಗಿಲಿನಿಂದ ನನಗೆ ಪ್ರಿಯವಾದ ಬೆಟ್ಟ ಗಳ ಮತ್ತು ಕಣಿವೆಯ ದೃಶ್ಯವು ಚೌಕಟ್ಟು ಹಾಕಿಸಿದ ಸುಂದರವಾದ ವರ್ಣ ಚಿತ್ರದಂತೆ ಕಾಣುತ್ತಿತ್ತು. ಪರದೆಗಳು ಅಲುಗಿದಾಗ ಕೊಠಡಿಯಲ್ಲೆಲ್ಲಾ ನೆರಳುಗಳು ಮೃದುವಾಗಿ ಓಲೆದಾಡಿದವು. ಗುಲಾಬಿಯ ಕಂಪು ವ್ಯಾಪಿ ಸಿತ್ತು. ಕಣ್ಣಿಗೆ ಕಂಡ ಸೊಬಗನ್ನು ಅಲ್ಲಿಯೇ ಸೆರೆಹಿಡಿದಿಟ್ಟುಕೊಳ್ಳುವವ ನಂತೆ ಕಣ್ಣುಮುಚ್ಚಿಕೊಂಡೆ.

ಲಲಿತೆ ಮಹಡಿಯಿಂದ ಕೆಳಗಿಳಿದು ಹೋಗಿದ್ದವಳು ಉಪಾಹಾರದ ತಟ್ಟೆಯನ್ನು ತೆಗೆದುಕೊಂಡು ಬಂದಳು. ಕುಳಿತ ಕಡೆಯಿಂದಲೇ ನಾನು ಕೈನೀಡಿದೆ. ಆದರೆ ನನ್ನ ಅನ್ನಪೂರ್ಣೆಯ ವರದ ಹಸ್ತ ಮುಂದೆ ಬರಲಿಲ್ಲ. ಉಪಾಹಾರ ತೆಗೆದುಕೊಳ್ಳುವುದು ದಿವಾನಖಾನೆಯಲ್ಲಲ್ಲ, ಒಳಕೊಠಡಿಗೆ ಹೋಗಬೇಕು. ಇಲ್ಲದಿದ್ದರೆ ಜಮಖಾನೆಯ ಮೇಲೆಲ್ಲಾ ತಿಂಡಿಯ ಚೂರು ಗಳು ಬೀಳಬಹುದು. ಟೀ ಚೆಲ್ಲಿದರಂತೂ ಅದರ ಗುರುತು ಹೋಗುವುದೇ

ಕಷ್ಟ....ಇಲ್ಲ, ಟೀಪಾಯಿಗೆ ಸಹ ಟೀ ಕುಡಿಸಬಾರದು, ಒಳಕೋಣೆಗೇ ಹೋಗಬೇಕು. ನನಗೆ ಕುರ್ಚಿಯನ್ನು ಬಿಟ್ಟು ಏಳಲು ಮನಸ್ಸಿಲ್ಲದಿದ್ದರೂ ಅವಳ ತರ್ಕವನ್ನು ಎದುರಿಸಲಾಗಲಿಲ್ಲ.

ಮೂರನೆಯ ದಿನ ಸಂಜೆ ಮನೆಗೆ ಬಂದೊಡನೆ ಹಿಂದಿನ ದಿನ ಕಲಿತ ಪಾಠವನ್ನೊಪ್ಪಿಸುವವನಂತೆ ಬಾಗಿಲಿನಲ್ಲೇ ಕಾಲೊರಸಿ ಬಟ್ಟೆಗಳನ್ನು ನಿರ್ದಿಷ್ಟಸ್ಥಾನಗಳಲ್ಲಿಟ್ಟು ಉಪಾಹಾರವನ್ನು ಮುಗಿಸಿದ ಮೇಲೆ ದಿವಾನಖಾನೆಗೆ ಬಂದೆ. ನಾವು ಮಾತಾಡುತ್ತಿದ್ದಾಗ ರಾಮು ಕೂಗು ಹಾಕುತ್ತಾ ಮೆಟ್ಟಲು ಹತ್ತಿ ಬಂದ. ಕೊಠಡಿಗೆ ಬಂದವನೇ ಕುರ್ಚಿಯ ಮೇಲೆ ಹತ್ತಿ ಅದರ ಕೈ ಹಿಡಿದುಕೊಂಡು ಕುಣಿಯಲಾರಂಭಿಸಿದ. ಹಸನ್ಮುಖಿಯಾಗಿ ಕುಳಿತಿದ್ದ ಲಲಿತೆಯ ಹುಬ್ಬು ಗಂಟಿಕ್ಕಿತು, ಕಣ್ಣು ಕೆಂಪಾಯಿತು. ಅವನನ್ನೆತ್ತಿ ಗದರಿಸಿಕೊಂಡು ಕೆನ್ನೆಯನ್ನು ಚಿವುಟಿದಳು. ರಾಮುವಿಗೆ ಪೆಟ್ಟಾಗದಿದ್ದರೂ ಅವಮಾನವಾಯಿತು; ಸಂದರ್ಭೋಚಿತವಾಗಿ ಗಂಟಲನ್ನು ದೊಡ್ಡದು ಮಾಡಿಕೊಂಡು ಬೊಬ್ಬೆಯಿಟ್ಟ. ಲಲಿತೆಯ ಗಮನವೆಲ್ಲಾ ಕುರ್ಚಿಯ ಮೇಲೆ. ಅದಕ್ಕೆ ಹೊದಿಸಿದ್ದ ಸಮುದ್ರದ ಹಸುರುಬಣ್ಣದ ಬಟ್ಟೆಯ ಮೇಲೆ ರಾಮುವಿನ ಪುಟ್ಟಪಾದಗಳ ಮುದ್ರೆ ಬಿದ್ದಿತ್ತು. ಬೀದಿಯ ಧೂಳಿನಿಂದ ರಚಿಸಿದ ಚಿತ್ರ. ನಾನು ರಾಮುವನ್ನು ಎತ್ತಿಕೊಂಡು ಲಲಿತೆ ಚಿವುಟಿದ್ದು ಅವನನ್ನಲ್ಲವೆಂದು ವಾದಿಸುತ್ತಿದ್ದಾಗ ಅವಳು ಕುರ್ಚಿಯ ಮೇಲಿನ ಧೂಳು ಹೊಡೆಯುತ್ತಿದ್ದಳು. ನನ್ನ ಮನಸ್ಸಿನಲ್ಲೊಂದು ಪ್ರಶ್ನೆ ತಲೆ ಹಾಕಿತು; ಕುರ್ಚಿಯೋ ಮಗುವೋ—ಯಾವುದು ಹೆಚ್ಚು ? ಲಲಿತೆ ಮಾಡಿದ್ದೇನೋ ತಪ್ಪಲ್ಲ; (ಅವಳು ಮಾಡುವುದು ಯಾವುದು ತಪ್ಪು !) ಮಕ್ಕಳಿಗೆ ಚೊಕ್ಕಟವಾಗಿರುವುದನ್ನು ಕಲಿಸಬೇಕು; ಮುದ್ದು ಮಾಡುವುದಕ್ಕೂ ಒಂದು ಮಿತಿಯಿದೆ. ಆದರೂ ಮಗುವಿನ ಪಾದದ ಚಿತ್ರವನ್ನು ನೆನೆದು ನನಗೇನೋ ಆನಂದವಾಯಿತು.

ಅಂದಿನಿಂದಾಚೆಗೆ ದಿವಾನಖಾನೆಯ ರಕ್ಷಣೆ ಇನ್ನೂ ಹೆಚ್ಚಿನ ಭರದಿಂದ ಸಾಗಿತು. ಬೀದಿಯಿಂದ ಬಂದಾಗ ದಿವಾನಖಾನೆಯ ಪವಿತ್ರವಾದ ನೆಲವನ್ನು ತುಳಿಯದಂತೆ ಬೇರೆ ಬಾಗಿಲಿನಿಂದ ಒಳಕೋಣೆಗೆ ಹೋಗುವ ಅಭ್ಯಾಸ ಮಾಡಿಕೊಂಡೆವು. ಮನೆಗೆ ಬಂದೊಡನೆ ಕುಳಿತ ಕಡೆ ಹೊರಗಿನ ಬಟ್ಟೆಗಳನ್ನು ಕಳೆದೆಸೆದು ಬೇರೆ ಬಟ್ಟೆಗಳನ್ನು ಹಾಕಿಕೊಳ್ಳುವುದು ನನಗೆ ಹಿಂದಿನಿಂದಲೂ ಬಂದ ಪದ್ಧತಿ. ಈಗ ಆ ಸುಖ ಪೂರ್ತಿ ಇಲ್ಲವಾಯಿತು. ಹಾಯಾಗಿ ಕೂರುವ ಬದಲು ಮೂರು ಕೊಠಡಿಗಳನ್ನು ಸುತ್ತಬೇಕು;

ಬಟ್ಟೆಗಳನ್ನೂ ಜೋಡುಗಳನ್ನೂ ಪುಸ್ತಕಗಳನ್ನೂ ಆಯಾ ಕೊಠಡಿಗಳಿಗೆ ಹಂಚಿಕೊಡಬೇಕು. ಅನಂತರ ದಿವಾನಖಾನೆಗೆ ಬಂದು ಕೂಡಬೇಕು. ಆಗಲೂ ನನಗೆ ಹಿತವಾಗುವಂತೆ ಕಾಲು ಮಡಿಸಿ ಕೂರುವಂತಿಲ್ಲ; ಅಜ್ಞಾನದಲ್ಲೇನಾದರೂ ಹಾಗೆ ಮಾಡಿದರೆ ಕುರ್ಚಿಯ ಹೊದಿಕೆ ಮಲಿನವಾಗಿ ಹೋಗುತ್ತದೆ. ಕಾಲು ನೀಡಿ ಒರಗಿಕೊಳ್ಳುವಂತೆಯೂ ಇಲ್ಲ; ಕುರ್ಚಿಯ ಬೆನ್ನಿಗೆ ತಲೆಸೋಕಿ ಅದರ ಬಣ್ಣ ಮಾಸಲಾಗುತ್ತದೆ. ಬಾಗಿಲಿನ ಎದುರಿಗಿರುವ ಕುರ್ಚಿ ನನಗೆ ಪ್ರಿಯವಾದದ್ದು; ಆದರೆ ಸದಾ ಒಂದೇ ಕುರ್ಚಿಯ ಮೇಲೆ ಕುಳಿತರೆ ಅದರ ಸ್ಪ್ರಿಂಗ್ ಕೆಟ್ಟುಹೋಗುತ್ತದೆ. ಆದ್ದರಿಂದ ನನ್ನ ವಿಶ್ವಾಸವನ್ನು ಎಲ್ಲಾ ಕುರ್ಚಿಗಳಿಗೂ ನಿಷ್ಪಕ್ಷಪಾತವಾಗಿ ಹಂಚಬೇಕು. ಸೋಫಾದ ಮೇಲೆ ಕುಣಿದಾಡಬಾರದೆಂಬ ಪರಿಜ್ಞಾನವೇ ಇಲ್ಲದಿರುವ ಆ ಕಿರಾತ ರಾಮುವನ್ನಂತೂ ದಿವಾನಖಾನೆಯಿಂದ ಗಡೀಪಾರು ಮಾಡಬೇಕಾಯಿತು. ಯಾವುದಾದರೂ ಪದಾರ್ಥಗಳು ಬೇಕಾದರೆ ಒಂದೊಂದಕ್ಕೂ ಒಂದೊಂದು ಕೊಠಡಿಗೆ ಪ್ರಯಾಣ ಬೆಳೆಸಬೇಕು. ಈ ಬಗೆಯ ವ್ಯಾಯಾಮ ದೇಹಾರೋಗ್ಯಕ್ಕೆ ಒಳ್ಳೆಯದೆಂದರೂ ಮನಶ್ಶಾಂತಿಗೆ ಭಂಗ ತರುತ್ತದೆ. ನನ್ನಂಥವನಿಗೆ ಕುಳಿತ ಕಡೆಯಿಂದ ಕೈಚಾಚಿದರೆ ಬೇಕಾದ ಪದಾರ್ಥ ಸಿಕ್ಕುವಂತಿರಬೇಕು. ಮಹಡಿಯ ಮೇಲೆ ನನಗಾಗಿಯೇ ಮೂರು ಕೊಠಡಿಗಳು ಮೀಸಲಾಗಿದ್ದರೂ ನಾನು ಬರೆಯುವ ಮೇಜು, ಪುಸ್ತಕದ ಬೀರುಗಳು, ಬಟ್ಟೆಯ ನಿಲುವು, ರೇಡಿಯೋ, ಎಲ್ಲವನ್ನೂ ಒಂದೇ ಕೊಠಡಿಯಲ್ಲಿ ತುಂಬಿಕೊಂಡಿರುತ್ತೇನೆ. ನನ್ನ ಜೀವನವೆಲ್ಲಾ ಅಲ್ಲಿಯೇ.

ನನ್ನ ಸ್ನೇಹಿತರು ಬಂದರೆ ಅಲ್ಲಿಗೇ ಬರುತ್ತಾರೆ. ಹಾಗೆ ನಮ್ಮ ಮನೆಗೆ ಬಂದು ಇಳಿಯುವವರು ನನಗೆ ಅತ್ಯಂತ ಪ್ರಿಯರಾದವರು ಮಾತ್ರ. ಪಾಶ್ಚಾತ್ಯಪದ್ಧತಿಯಂತೆ ಅವರನ್ನು ಅಣಿಯಾದ ಬೇರೊಂದು ಕೊಠಡಿಯಲ್ಲಿ ಪ್ರತಿಷ್ಠಿಸಿ ಅವರ ಸನ್ನಿಧಿಗೆ ಹೋಗುವ ಮುನ್ನ ಬಾಗಿಲು ತಟ್ಟಿ ಭೇಟಿಯ ಚೀಟಿಯನ್ನು ಕೊಟ್ಟುಕಳುಹಿಸುವುದೇನೂ ಕಷ್ಟವಲ್ಲ. ಆದರೆ ಆ ರೀತಿಯ ಸತ್ಕಾರ ಮಾಡಿದರೆ ಬಂದೀಖಾನೆಯಲ್ಲಿಟ್ಟಂತೆ ಎಂದೇ ನನ್ನ ಮತ್ತು ಅವರ ಭಾವನೆ. ಅತಿಥಿಸತ್ಕಾರಕ್ಕೆ ಈ ನಾಗರಿಕತೆಯ ಮೆರುಗು ಬಂದರೆ ಸರಳತೆ ನಾಶವಾಗುತ್ತದೆ. ಸಮಾಜದಲ್ಲಿ ಈ ಬಗೆಯ ಮೆರುಗು ಅವಶ್ಯಕವಿರಬಹುದು. ಆದರೆ ಮನೆಯಲ್ಲಾದರೂ ಸ್ವತಂತ್ರ ವಾತಾವರಣವನ್ನು ಕಲ್ಪಿಸಿಕೊಳ್ಳಬೇಡವೆ? ಈ ಸ್ವಾತಂತ್ರ್ಯವೂ ಸರಳತೆಯೂ ಬೇಡದವರು, ಇಪ್ಪತ್ತನಾಲ್ಕು ಘಂಟೆಯೂ ಕಾಲರ್ ಟೈ ಸಮೇತ ಗರಿಮುರಿಯದ

ಸೂಟು ಧರಿಸಿ ಅಚ್ಚುಕಟ್ಟಾದ ಕೊಠಡಿಯಲ್ಲಿ ತಮ್ಮ ಪಾಡಿಗೆ ತಾವು ಇರುವ ಅಭ್ಯಾಸವುಳ್ಳವರು, ನಮ್ಮ ಮನೆಗೆ ಬರಲು ಅಸಹ್ಯಪಟ್ಟರೆ—ಅವರಿಗೆ ದೂರದಿಂದಲೇ ನನ್ನ ನಮಸ್ಕಾರವಿರಲಿ. ನನ್ನ ಅತಿಥಿಗಳೇನೋ ನನ್ನ ಕೊಠಡಿಯಲ್ಲಿಯೇ ನನ್ನೆದುರಿಗೆ ಕುಳಿತಿರುತ್ತಾರೆ. ತಾವೊಬ್ಬರೇ ಇರಬೇಕೆಂಬ ಅಪೇಕ್ಷೆ ಬಿದ್ದರೆ "ಇನ್ನೆರಡು ಘಂಟೆ ನನ್ನ ಪಾಡಿಗೆ ನನ್ನನ್ನು ಬಿಡಿ, ನಿಮ್ಮ ಮುಖ ತೋರಿಸಬೇಡಿ" ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಇಬ್ಬರ ಮನಸ್ಸಿಗೂ ಯಾವ ಘಳಿಗೆಗೆ ಯಾವ ಯೋಚನೆ ಬಂದರೂ ಅದನ್ನು ಹೊರ ಹಾಕಿ ಚರ್ಚೆ ನಡೆಸುತ್ತೇವೆ. ಕ್ಷೌರಕ್ಕೆ ಕುಳಿತರೆ ಸಾಬೂನು ನೊರೆ ಮುಸುಕಿದ ಮುಖದ ಮೇಲೆ ವ್ಯಾಖ್ಯಾನ ಮಾಡುತ್ತೇವೆ. ಕೊಠಡಿಯ ಅವ್ಯವಸ್ಥೆಯನ್ನೇ ಆಧಾರವಾಗಿಟ್ಟುಕೊಂಡು ನಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತೇವೆ. ಘನವಾದ ಗಂಭೀರ ವಿಷಯಗಳು, ಅಲ್ಪವಾದ ತುಚ್ಛ ವಿಷಯಗಳು, ಕೊನೆಗೆ ಮೃದುವಾದ ಹಾಸ್ಯದ ತೆರೆಯಲ್ಲಿ ತನ್ನ ಭೀಭತ್ಸವನ್ನು ಅಡಗಿಸಿ ಸೂಕ್ಷ್ಮವಾಗಿ ಅಡಿಯಿಡುತ್ತಾ ಬಂದು ಸುಳಿದು ಕಂಡು ಕಾಣದಂತೆ ಅದೃಶ್ಯವಾಗುವ ವ್ಯಂಗ್ಯ ಅಶ್ಲೀಲ—ಒಂದಾದ ಮೇಲೊಂದು ಯಾವ ತಡೆಯೂ ಇಲ್ಲದೆ ಸಂಭಾಷಣೆಯ ಹೊನಲು ಹರಿಯ ಬೇಕಾದರೆ ಇಂಥ ಅವ್ಯವಸ್ಥಿತ ವಾತಾವರಣದಲ್ಲೇ. ಈಗಿನ ದಿವಾನ ಖಾನೆಯಲ್ಲಿ ಈ ಸೌಹಾರ್ದವೂ ಸಾಮೀಪ್ಯವೂ ದುರ್ಲಭವಾಗಿವೆ. ಈ ಕೊಠಡಿ ಒಂದು ಬಗೆಯ ದೇವಾಲಯ. ಆದರೆ ದೇವಾಲಯದಲ್ಲಿ ನಾವು ವಾಸ ಮಾಡಲಾಗುವುದಿಲ್ಲ. ದೈವಸನ್ನಿಧಿಯಲ್ಲಿ ಆಡಬಾರದ ಮಾತು ಗಳೂ ಯೋಚಿಸಬಾರದ ಯೋಚನೆಗಳೂ ನಮ್ಮ ಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿವೆ. ನಿತ್ಯಶುಚಿಯಾದ ನಿತ್ಯಪವಿತ್ರವಾದ ಆ ವಾತಾವರಣ ಸಾಮಾನ್ಯ ಮಾನವನ ದಿನದಿನದ ಜೀವನಕ್ಕೆ ಹೊಂದಿಕೊಳ್ಳು ವುದಿಲ್ಲ. ಅದಕ್ಕೆ ಅಭಿಷೇಕಮಾಡಿಸಿ, ಅಲಂಕರಿಸಿ, ಪುಷ್ಪಾಂಜಲಿಯನ್ನು ಅರ್ಪಿಸಿ ಅಷ್ಟರಲ್ಲೇ ತೃಪ್ತನಾಗುತ್ತೇನೆ.

ಮನೆಯವರೂ ಆಪ್ತಮಿತ್ರರೂ ಹಾಗಿರಲಿ, ಹೊರಗಿನವರು ಬಂದು ಸ್ವಲ್ಪ ಕಾಲ ಅಲ್ಲಿ ಕುಳಿತರೆ ಅವರ ಮನಸ್ಸಿನಲ್ಲಿ ಸಹ ಈ ಕೊಠಡಿ ಭಯ ವನ್ನು ಬಿತ್ತುತ್ತದೆ. ಅವರಲ್ಲಿ ಕೆಲವರು ಸಿಗರೇಟ್ ಸೇದುವವರು. ಅಷ್ಟು ಚೊಕ್ಕಟವಾಗಿಟ್ಟಿರುವ ಕೊಠಡಿಯಲ್ಲಿ ಜಮಖಾನೆಯ ಮೇಲೇನಾದರೂ ಸಿಗರೇಟಿನ ಬೂದಿ ಉದುರಿದರೆ! ಈ ಯೋಚನೆಯೇ ಅವರನ್ನು ಬಾಧಿಸು ತ್ತಿರುತ್ತದೆ. ನೆಸ್ಯ ಹಾಕುವವರ ಪಾಪಕೃತ್ಯಗಳಿಗಂತೂ ಮಿತಿಯೇ ಇಲ್ಲ.

ಅವರ ಮನಸ್ಸಿನ ಶಂಕೆಯನ್ನು ನೆನೆದು ನಾನು ಎಷ್ಟೋ ವೇಳೆ ಮರುಗಿದ್ದೇನೆ. ಇತ್ತ ಕಡೆ ನಮಗೂ ಶಾಂತಿಯಿಲ್ಲ; ಅತಿಥಿಗಳು ಕೊಠಡಿಯ ಅಂದವನ್ನೆಲ್ಲಿ ಕೆಡಿಸುವರೋ ಎಂಬ ಭಯ ಕೊರೆಯುತ್ತಿರುತ್ತದೆ. ಇಂಥ ವಾತಾವರಣ ದಲ್ಲಿ ಸೌಹಾರ್ದ ಬೆಳೆಯಲಾದೀತೆ! ಹಿಂದಿನಂತೆ ಅವ್ಯವಸ್ಥಿತವಾದ ಕೊಠ ಯಾದರೆ ಅದರ ಮಾತೇ ಬೇರೆ. ಯಾರಾದರೂ ಬೀದಿಯಿಂದ ಕೂಗಿದ್ದು ಕೇಳಿದರೆ ನಾನು ಅವಸರದಿಂದ ಕುರ್ಚಿಯಮೇಲಿನ ಟವಲನ್ನು ಮಡಿಸಿಟ್ಟು ಕಾಫಿ ಬಟ್ಟಲನ್ನು ಒಳಕೊಠಡಿಗೆ ಸಾಗಿಸಿ, ಎಲೆ ಅಡಕೆಯನ್ನು ಕಸದ ಬುಟ್ಟಿಗೂ, ಕಸದ ಬುಟ್ಟಿಯನ್ನು ಮೇಜಿನ ಕೆಳಕ್ಕೂ ತಳ್ಳಿ, ಪತ್ತೇದಾರಿ ಕಾದಂಬರಿಯನ್ನು ಮರೆಮಾಡಿ ಭಗವದ್ಗೀತೆಯನ್ನು ಮುಂದಿಟ್ಟು ಅವರು ಮೆಟ್ಟಿಲು ಹತ್ತಿ ಬರುವುದರೊಳಗೆ ಕೊಠಡಿಯನ್ನು ಅಣಿ ಮಾಡುತ್ತೇನೆ. ತಾವು ಬರುವ ಮುನ್ನ ಇಷ್ಟೆಲ್ಲಾ ಸಂಭ್ರಮ ನಡೆದಿದೆಯೆಂದು ಅವರೂ ಬಲ್ಲರು. ಅವರ ಆಗಮನದ ಸುಳಿವು ತಿಳಿದೊಡನೆ ಅನಾಸಕ್ತಿಯಿಂದಿರದೆ ಸಂಭ್ರಮದಿಂದ ಅವರನ್ನು ಬರಮಾಡಿಕೊಂಡರೆ ಅವರಿಗೂ ಸಂತೋಷವಾಗ ಬೇಕು. ಕೊಠಡಿ ನಿತ್ಯಾಲಂಕಾರಭೂಷಿತವಾಗಿರದೆ ಸಮಯಕ್ಕೆ ತಕ್ಕಂತೆ ಬದಲಾವಣೆ ಹೊಂದುವುದೇ ಹಿತ. ಮಾಸಲಾಗದ ರಂಗೋಲೆಯನ್ನೂ ಕಾರಣೆಯನ್ನೂ ಎಳೆದಿರುವ ಮನೆಯಲ್ಲಿ ಹಬ್ಬದ ದಿನ ಬಂದರೆ ಯಾವ ಸಡಗರವೂ ಸಾಧ್ಯವಿಲ್ಲ.

ನನ್ನ ಮನೆಯ ಈ ಹೊಸ ದಿವಾನಖಾನೆ ನನಗೆ ಪರಿಚಿತವಾದದ್ದಲ್ಲ. ನನ್ನ ಮತ್ತು ನನ್ನವರ ವ್ಯಕ್ತಿತ್ವವೇನಿದ್ದರೂ ಅದರ ಪ್ರಭಾವ ಇಲ್ಲಿ ಗೋಚ ರಿಸುವುದಿಲ್ಲ. ಈ ಕೊಠಡಿಗೆ ಮನುಷ್ಯನ ಸಂಪರ್ಕವೇ ಇಲ್ಲ—ಅಥವಾ ತಾತ್ಕಾಲಿಕವಾಗಿ ಅಂಥ ಸಂಪರ್ಕ ಬಂದರೂ ಅದು ಕೂಡಲೇ ಆ 'ಮಾಲಿನ್ಯ' ವನ್ನು ಕಳೆದುಕೊಂಡು ತನ್ನ ನಿತ್ಯಶುದ್ಧತೆಯನ್ನು ಮತ್ತೆ ಪಡೆಯುತ್ತದೆ. ಅದು ನನ್ನ ಕೊಠಡಿಯೆನ್ನುವುದಕ್ಕೆ ಗುರುತೇನು? ಅದನ್ನು ಅಳವಡಿಸಿರುವ ರೀತಿ ನನ್ನ ಸ್ವಭಾವಕ್ಕನುಗುಣವಾಗಿಲ್ಲ. ಆ ಸಮುದ್ರದ ಹಸುರು ಬಣ್ಣ— ಎತ್ತನೋಡಿದರೂ ತಾನೇ ತಾನಾಗಿ ಹೂಂಕಾರಮಾಡುತ್ತಿರುವ ಆ ಅಸಹ್ಯ ವರ್ಣದ ಹೆಸರು ಕೇಳಿದರೆ ನನಗೆ ಮೈಉರಿಯುತ್ತದೆ. ಅದಕ್ಕೆ ಔತಣ ಕೊಟ್ಟವರು ಯಾರು? ನಮ್ಮ ಮೇಲೆ ಒತ್ತಾಯದಿಂದ ಆ ಬಣ್ಣವನ್ನು ಬಳಿದ ಆ ಸಿಂಧು ಪತ್ರಿಕೆಯ ಬರಹಗಾತಿಗೆ ನನ್ನ ಶಾಪವಿರಲಿ!

ಕೊಠಡಿಯನ್ನು ಸಜ್ಜುಗೊಳಿಸಿರುವ ಕ್ರಮವನ್ನಾಗಲಿ, ಅಲ್ಲಿ ಸರ್ವಾಧಿ ಕಾರ ನಡಸುತ್ತಿರುವ ಆ ಬಣ್ಣವನ್ನಾಗಲಿ, ನಾವು ಬದಲಾಯಿಸುವಂತಿಲ್ಲ.

ಆ ಕುರ್ಚಿಗಳಿಗೋ ನಮ್ಮ ಆದರ ಬೇಕಿಲ್ಲ, ನಮ್ಮ ಕೋಪತಾಪಗಳನ್ನೂ ಅವು ಸಹಿಸವು. ಅಲ್ಲಿಯ ವ್ಯವಸ್ಥೆಯನ್ನು ನಾವು ಅನುಸರಿಸಿ ನಡೆಯಬೇಕೇ ಹೊರತು ನಮ್ಮ ಮನಸ್ಸಿನಲ್ಲಾಗುವ ಸಾವಿರ ಮಾರ್ಪಾಟುಗಳಿಗೆ ಅದು ಹೊಂದಿಕೊಳ್ಳುವುದಿಲ್ಲ. ಬೆಳಕಿನಲ್ಲಿ ಹೊಳೆದು, ನೆರಳಿನಲ್ಲಿ ನೀಲವಾಗಿ, ಇಲ್ಲಿ ಶಾಂತವಾಗಿ ಹರಿದು, ಅಲ್ಲಿ ಉತ್ಸಾಹದಿಂದ ಮುಂದೆ ನುಗ್ಗಿ, ಒಮ್ಮೆ ಸಾಹಸದಿಂದ ಧುಮುಕಿ ಮತ್ತೊಮ್ಮೆ ಒಲುಮೆಯಿಂದ ಸರಸವಾಡಿ, ಒಮ್ಮೆ ಕೋಪದಿಂದ ಗರ್ಜಿಸಿ ಮತ್ತೊಮ್ಮೆ ಮಂಜುಳವಾಗಿ ಹಾಡಿಕೊಂಡು ಹರಿಯಬೇಕಾದ ಜೀವನವಾಹಿನಿ ಇಲ್ಲಿ ಮಾತ್ರ ನಿಶ್ಚಲವಾಗಿ ನಿಂತು ಹೋಗಿದೆ. ಒಂದು ವಿಧವಾದ ಪರಿಪೂರ್ಣತೆಯನ್ನು ಪಡೆದ ಈ ಸೌಂದರ್ಯ ನನ್ನ ಕಣ್ಣಿಗೆ ಸಿಂಗರಿಸಿದ ಶವದಂತೆ ಕಾಣುತ್ತದೆ. ಪ್ರಕೃತಿಯ ಜೀವನದಲ್ಲಾಗಲಿ ಮಾನವನ ಜೀವನದಲ್ಲಾಗಲಿ ಈ ಬಗೆಯ ಪರಿಪೂರ್ಣತೆಯೂ ನಿಶ್ಚಲತೆಯೂ ಕಾಣುವುದಿಲ್ಲ. ಆ ಟೀಪಾಯಿಯ ಮೇಲಿರುವ ಹೂವುಗಳು ಹತ್ತಾರು ಸಲ ತಮ್ಮ ಬಣ್ಣವನ್ನು ಬದಲಾಯಿಸಿವೆ; ಆದರೆ ಚಲನೆ ವೈವಿಧ್ಯಗಳೆಷ್ಟೇ ಇರಲಿ, ಜೀವನದ ಯಾವುದೊಂದು ಘಟ್ಟದಲ್ಲೂ ಅವುಗಳ ಆಕರ್ಷಣಶಕ್ತಿಗೆ ಚ್ಯುತಿ ಬಂದಿಲ್ಲ. ನನ್ನ ರಾಮು ಕ್ಷಣಕಾಲ ನಿಂತಲ್ಲಿ ನಿಲ್ಲುವುದಿಲ್ಲ; ಅವನ ಮುಖದ ಕಳೆ ನಿಮಿಷಕ್ಕೆ ಹತ್ತು ಸಲ ಬದಲಾವಣೆ ಹೊಂದುತ್ತದೆ. ಬೀದಿಯ ಧೂಳಿನಿಂದ ಮುಸುಕಾಗಿದ್ದರೂ ಪ್ರಫುಲ್ಲವಾದ ಮುಖದಿಂದ ಒಳಗೆ ನುಗ್ಗುತ್ತಾನೆ; ಎಡವಿ ಮುಗ್ಗರಿಸುವುದನ್ನೂ ಲೆಕ್ಕಿಸದೆ ಓಡಿಬಂದು ಮೈಮೇಲೆ ಬೀಳುತ್ತಾನೆ. ನನ್ನ ಬಟ್ಟೆಗಳು ಕೊಳೆಯಾಗಬಹುದೆಂಬ ಎಣಿಕೆ ಅವನಿಗೂ ಇಲ್ಲ, ನನಗೂ ಇಲ್ಲ...."ಧನ್ಯಾಸ್ತದಂಗರಜಸಾ ಮಲಿನೀ ಭವಂತಿ!" ಅವನ ಕೆನ್ನೆಗಳು ಕ್ಷಣಕ್ಷಣಕ್ಕೂ ವಿಚಿತ್ರ ಸೌಂದರ್ಯದಿಂದ ಗುಳಿಬಿದ್ದು ಮತ್ತೆ ತುಂಬಿಕೊಳ್ಳುತ್ತವೆ. ಗದರಿಸಿದರೆ ಅವನ ನಗು ಮಾಯವಾಗಿ ಕಣ್ಣಿನಲ್ಲಿ ಕಂಬನಿ ಹೊಳೆಯುತ್ತದೆ, ಮತ್ತೆ ಆದರ ಮೂಲಕವೇ ನಗು ಮಿಂಚುತ್ತದೆ. ಒಂದು ಮನೋಭಾವಕ್ಕೂ ಮತ್ತೊಂದಕ್ಕೂ ಸಾದೃಶ್ಯವಿಲ್ಲ; ಆದರೆ ಅವೆಲ್ಲವೂ ಮೇಳೈಸಿದುದರ ಫಲವಾಗಿ ದಿವ್ಯಸೌಂದರ್ಯವೊಂದು ಉತ್ಪನ್ನವಾಗುತ್ತದೆ.

ನನಗೆ ಪ್ರಿಯವಾದ ವಾಸಗೃಹದಲ್ಲಿ ಈ ಚಂಚಲತೆ ಬೇಕು, ವೈವಿಧ್ಯದ ಮೇಳವಿರಬೇಕು, ಜೀವನದ ಏರುಪೇರುಗಳೂ ಓರೆಕೋರೆಗಳೂ ತುಂಬಿರಬೇಕು. ಅದು ನಿಜವಾಗಿಯೂ ನನ್ನದಾದರೆ ಕೊಠಡಿಯಲ್ಲೊಂದು ಕಡೆ ಲಲಿತೆಯ ಮುಡಿಯಿಂದ ಕಳಚಿಬಿದ್ದ ಹೂವು ಕಣ್ಣಿಗೆ ಬೀಳುತ್ತದೆ—

ಅದನ್ನು ನೋಡಿ ಬೇಸರಗೊಳ್ಳಬಹುದೆ? ಏನನ್ನೋ ನೆನೆಯುತ್ತಿದ್ದ ಅವಳ ಕಣ್ಣಿನಿಂದ ಕಂಬನಿಯೊಂದು ಉರುಳಿಬಿದ್ದು ನಾನು ಬರೆದಿಟ್ಟಿರುವ ಹಾಳೆಯ ಮೇಲೆ ಅಕ್ಷರಗಳು ಅಳಿಸಿಹೋಗಿವೆ—ಅದನ್ನು ನೋಡಿ ಕೋಪಗೊಳ್ಳಲಾರೆ. ಅಲ್ಲೇ ಒಂದು ಕಡೆ ಅವಳ ಹಣೆಯಿಂದ ಸ್ವಲ್ಪ ಕುಂಕುಮ ಉದುರಿದೆ; ಕೈ ವಸ್ತ್ರದಿಂದ ಅದನ್ನು ಗುಡಿಸಿಹಾಕಲಾರೆ—ಮುತ್ತು ಕೊಟ್ಟರೆ ಮುಖ ಒಪ್ಪಿ ಕೊಂಡವರುಂಟೆ! ನೆಲದ ಮೇಲೆ ರಾಮುವಿನ ಗೋಲಿ ಉರುಳುತ್ತಿದೆ; ಅವನು ಕೋಪದಿಂದ ಎಸೆದ ಆಟದ ಮೋಟಾರು ತಳಮೇಲಾಗಿ ಬಿದ್ದು ಕಾಲಿಗೆ ಸಿಕ್ಕುತ್ತದೆ. ಅಲ್ಲಿಯ ಪದಾರ್ಥಗಳೊಂದೂ ಇಟ್ಟ ಕಡೆ ಇರುವುದಿಲ್ಲ: ಎಲ್ಲಾ ನನ್ನೊಡನೆ ಕಣ್ಣುಮುಚ್ಚಾಲೆ ಆಡುತ್ತವೆ. ನನ್ನ ಲೇಖನಿ ಎಲ್ಲಿ ಮಾಯ ವಾಯಿತು ಎಂದು ಹುಡುಕುತ್ತಿದ್ದರೆ ಅದು ಒಂದು ಕಡೆ ಅವಿತುಕೊಂಡು ನನ್ನ ಪರದಾಟವನ್ನು ನೋಡಿ ನಗುತ್ತಿರುತ್ತದೆ. ಹುಡುಕಿ ಬೇಸರವಾಗಿ ನಾನು ಸೋತೆನೆಂದು ಒಪ್ಪುವ ವೇಳೆಗೆ "ಇಗೋ ಇಲ್ಲಿದ್ದೇನೆ!" ಎನ್ನುವಂತೆ ಕಾಗದಗಳ ನಡುವೆ ತುಂಟದೃಷ್ಟಿಯಿಂದ ಇಣಿಕಿ ನೋಡುತ್ತದೆ. ಅದು ಸಿಕ್ಕದೆಯೇ ಇದ್ದರೆ ಲಲಿತೆಗೆ ಒಂದು ಕೂಗು ಹಾಕುತ್ತೇನೆ. "ನಿಮ್ಮ ಪದಾರ್ಥ ನೀವು ನೋಡಿಕೊಳ್ಳಬಾರದೆ?" ಎಂದು ಅವಳು ರೇಗಿದರೆ ನಾನು ಕುಚೋದ್ಯ ಮಾಡುತ್ತೇನೆ, ಅಥವಾ ನಾನು ರೇಗಿದರೆ ಅವಳು ಕುಚೋದ್ಯ ಮಾಡುತ್ತಾಳೆ. ನಾವು ಕೊಠಡಿಯನ್ನು ಬಿಟ್ಟು ಹೋದೊಡನೆ ಅಲ್ಲಿಯ ವಸ್ತುಗಳೆಲ್ಲಾ ನಮ್ಮ ಹುಚ್ಚಾಟವನ್ನು ನೆನೆದು ಹಾಸ್ಯಮಾಡಿ ನಗುತ್ತವೆ ಯೆಂದೇ ನನ್ನ ನಂಬಿಕೆ. ಅಂತೂ ಅಲ್ಲಿ ಯಾರಿರಲಿ, ಇಲ್ಲದಿರಲಿ, ಜೀವನದ ನೃತ್ಯ ಬಿಡುವಿಲ್ಲದೆ ಸಂತತವಾಗಿ ಸಾಗುತ್ತದೆ. ಕ್ಷಣಕಾಲ ಎಲ್ಲವೂ ನಿಶ್ಚಲ ವಾಗಿ ಕಂಡರೂ ಆ ನಿಶ್ಚಲತೆ ಲಾಸ್ಯದ ಒಂದು ಭಂಗಿ ಮಾತ್ರ.

ನನ್ನ ಮತ್ತು ನನಗೆ ಪ್ರಿಯರಾದವರ ವ್ಯಕ್ತಿತ್ವವೆಲ್ಲಾ, ನಮ್ಮ ಮನಸ್ಸಿನಲ್ಲಿ ಸುಳಿದು ಮಾಯವಾಗುವ ಸಾವಿರ ಭಾವನೆಗಳೆಲ್ಲಾ, ಆ ಕೊಠಡಿಯಲ್ಲಿ ಬೆರೆದು ಅದಕ್ಕೂ ಮಾನವತೆ ಬಂದಂತಿದೆ. ಲಲಿತೆ ನನ್ನನ್ನು ಕಂಡೊಡನೆ ನಗುಮುಖದಿಂದ ಏಳುವ ಹಾಗೆ ಕೊಠಡಿಯೂ ಮತ್ತೊಬ್ಬ ಪ್ರೇಯಸಿಯಂತೆ ಎದ್ದು ಸ್ವಾಗತಿಸಿ ಅಪ್ಪುತ್ತದೆ. ಅದು ಸಿಂಗರಿಸಿಕೊಂಡಿದ್ದರೆ ಆ ಶೃಂಗಾರವೆಲ್ಲಾ ನನಗಾಗಿಯೇ ಅಲ್ಲವೆ! ಸಲಿಗೆಯಿಂದ ಆ ಅಲಂಕಾರ ವನ್ನು ಕದಲಿಸದಿದ್ದರೆ, ನೆಟ್ಟಗೆ ಬಾಚಿರುವ ಕುರುಳಿನ ಮೇಲೆ ಒಲವಿನಿಂದ ಕೈಯಿಟ್ಟು ಅದನ್ನು ಚದರಿಸದಿದ್ದರೆ, ನನಗೆ ತೃಪ್ತಿಯಿಲ್ಲ. ಆದರೆ ಈಗಿನ ದಿವಾನಖಾನೆಗೆ ನನ್ನ ಒಲವು ನಲಿವುಗಳು ಬೇಕಾಗಿಲ್ಲ. ಅದರ ಕುರುಳನ್ನು

ಚದರಿಸುವ ಧೈರ್ಯ ನನಗಿಲ್ಲ.

ಆದ್ದರಿಂದ ನಾನು ಅಲ್ಲಿಗೆ ಕಾಲಿಡುವುದನ್ನೇ ಬಿಟ್ಟಿದ್ದೇನೆ. ಒಳ ಕೊಠಡಿಯಲ್ಲಿ ನನ್ನ ಪೂರ್ವ ಸ್ನೇಹಿತರಾದ ಸುಂದರ್ ಕುರ್ಚಿಗಳಿವೆ; ಹಸಿವಾದಾಗ ನನ್ನೊಡನೆ ತಿಂದು ಬಾಯಾರಿಕೆಯಾದಾಗ ನನ್ನೊಡನೆ ಕುಡಿದಿರುವ ಹಳೆಯ ಮೇಜಿದೆ. ಅವುಗಳೊಡನೆ ನಾನು ಯಾವ ಸ್ವಾತಂತ್ರ್ಯ ವಹಿಸಿದರೂ ಎಷ್ಟು ಸಲಿಗೆಯಿಂದಿದ್ದರೂ ತಡೆಯುತ್ತದೆ. ಈಗಿನ ದಿವಾನ ಖಾನೆಯಲ್ಲಿ ಕಾಣುವ ಪಾಷಾಣಹೃದಯದ ನಿಶ್ಚಲ ಸೌಂದರ್ಯ ನನಗೂ ಬೇಡ, ನನ್ನ ಆತ್ಮೀಯರಿಗೂ ಬೇಡ.

## ಹರಕೆಗಳು

"ನಮ್ಮ ಮನೆಯ ಎಮ್ಮೆ ಸರಿಯಾಗಿ ಹಾಲು ಕೊಡುತ್ತಿಲ್ಲ ಆದ್ದರಿಂದ ಎಂಟಾಣೆ ಕಾಣಿಕೆ ಸಲ್ಲಿಸಿದ್ದೇನೆ. ಮಹಾಮಹಿಮ ಸಂತ ಅಂತೋಣಿಗೆ ಬೇಡಿಕೊಳ್ಳಿ." ಬಹು ದಿನಗಳ ಹಿಂದೆ ಮಾಸಪತ್ರಿಕೆ ಯೊಂದರಲ್ಲಿ ಕಂಡ ಈ ಭಕ್ತನ ಮೊರೆಯನ್ನು ಓದಿ ಇದೆಂಥ ಮೂಢ ಭಕ್ತಿ ಎಂದು ನಕ್ಕದ್ದು ನೆನಪಿದೆ. ಭಕ್ತನಿಗೆ ಸಂತರ ನೆನಪು ವರ್ಷಕ್ಕೊಂದು ಸಾ ಬರುತ್ತದೆಯೋ ಇಲ್ಲವೋ—ಸಂಕಟ ಬಂದಾಗ ಸಂತ ಅಂತೋಣಿ. ಹಾ ನೆನಪು ಬಂದಾಗಲೂ ತನ್ನನ್ನು ಸಂಕಟದಿಂದ ಪಾರುಮಾಡುವ ಹೊ ಯನ್ನು ಸಂಪೂರ್ಣವಾಗಿ ಸಂತರ ಮೇಲೆಯೇ ಒರಗಿಸುವ ಧೈರ್ಯ ಮಾಡುವುದಿಲ್ಲ. ಅವರ ಪ್ರಯತ್ನಕ್ಕೆ ನೆರವಾಗಿ ನಿಲ್ಲುವ ಸದುದ್ದೇಶದಿಂ ಆ ಎಮ್ಮೆಗೆ ಹೆಚ್ಚುಹೆಚ್ಚಾಗಿ ಹಿಂಡಿಯನ್ನೂ ಹತ್ತಿಯ ಬೀಜವನ್ನೂ ಹಾಕಿಯೇ ಹಾಕುತ್ತಾನೆ. ಬಹುಶಃ ಒಂದು ತಿಂಗಳಾದ ಮೇಲೆ ಎಮ್ಮ ಸರಿಯಾಗಿ ಹಾಲು ಕೊಡಬಹುದು. ಅದು ಹತ್ತಿಯ ಬೀಜದ ಕೃಪೆಯೋ ಸಂತರ ಕೃಪೆಯೋ ಹೇಗಾದರೂ ಇರಲಿ, ಕೀರ್ತಿಯೇನೋ ಸಂತ ಬಗಲಿಗೇ ಬೀಳುತ್ತದೆ.

ಈ ಕಥೆಯನ್ನು ಹೇಳಿ ಹಾಸ್ಯಮಾಡಿದ ಸ್ವಲ್ಪ ದಿನಕ್ಕೇ ನಮ್ಮ ಮನೆ ಯಲ್ಲಿ ಲಲಿತೆ ಬಚ್ಚಿಟ್ಟಿದ್ದ ಒಂದು ಗುಟ್ಟು ಬಯಲಾಗಬೇಕಾಗಿ ಬಂತು. ನಾನು ಆಗ ತಾನೆ ನೌಕರಿಗೆ ಸೇರಿ ಮೊದಲನೆಯ ತಿಂಗಳ ಸಂಬಳವನ್ನು ಸ್ವಲ್ಪ ಹೆಮ್ಮೆಯಿಂದ ಹೊತ್ತು ತಂದೆ; ಅಂಥ ಹೊರಲಾರದ ಭಾರವೇನೂ ಅಲ್ಲ, ಕೇವಲ ಎಪ್ಪತ್ತೈದು ರೂಪಾಯಿ. ಆದರೇನು, ಹೆಚ್ಚಾಗಲಿ ಕಡಿಮೆ ಯಾಗಲಿ ನನ್ನ ಸ್ವಂತ ಸಂಪಾದನೆ. ಸಂಪಾದನೆ ಮಾಡಿದ ಹೆಮ್ಮೆಯ ಜೊತೆಗೆ ಅದನ್ನು ಖರ್ಚುಮಾಡುವ ಆತುರವೂ ಹೆಚ್ಚಾಗಿತ್ತು. ರಾಮಕೃಷ್ಣ ಪರಮಹಂಸರಂಥವರಿಗೆ ಹತ್ತಿರದಲ್ಲಿ ಹಣವಿದ್ದರೆ ಮನಶ್ಶಾಂತಿಯಿರುವುದಿಲ್ಲ ವಂತೆ. ನನ್ನ ಸ್ವಭಾವವೂ ಸ್ವಲ್ಪ ಹಾಗೆಯೇ; ಇರುವ ಹಣ ಮುಗಿದು ಬರಿಗೈಯಾಗುವವರೆಗೂ ಮನಸ್ಸು ಸ್ತಿಮಿತಕ್ಕೆ ಬರುವುದಿಲ್ಲ. ಆದ್ದರಿಂದ ದಾರಿಯಲ್ಲೇ ಆ ಎಪ್ಪತ್ತೈದು ರೂಪಾಯಿಗಳ ವೆಚ್ಚದ ವ್ಯವಸ್ಥೆ ಮಾಡಿ, ನೌಕರಿಗೆ ಸೇರಿದ್ದಕ್ಕೆ ಗುರುತಾಗಿ ಮೊದಲನೆಯ ತಿಂಗಳ ಸಂಬಳದಿಂದ ಒಂದು ಬೈಸಿಕಲ್ ಕೊಳ್ಳಬೇಕೆಂದು ನಿಶ್ಚಯಿಸಿಕೊಂಡು ಬಂದೆ. ಆದರೆ

ಮನೆಗೆ ತಲಪಿದೊಡನೆಯೇ ಲಲಿತೆ ನನ್ನ ಬಯಕೆಯ ಮೇಲೆ ಹಾಸುಗಲ್ಲೆಳೆಯಲು ಅಸುವಾದಳು. ಅವಳು ತಿರುಪತಿ ವೆಂಕಟರಮಣಸ್ವಾಮಿಗೆ ಹರಕೆ ಹೊತ್ತಿದ್ದಳಂತೆ: 'ಅವರಿಗೆ' ಕೆಲಸವಾದರೆ ಮೊದಲ ತಿಂಗಳ ಸಂಬಳವನ್ನ ಅರ್ಪಿಸುತ್ತೇನೆಂದು. ನಾನು ಸಂಪಾದನೆ ಮಾಡುವ ಮೊದಲೇ ಅವಳು ನನ್ನ ಹಣಕಾಸಿನ ಯಜಮಾನಿಕೆಯನ್ನು ವಹಿಸಿಕೊಂಡುಬಿಟ್ಟಿದ್ದಳು.

ಅವಳ ಹರಕೆಗೂ ನನಗೆ ಕೆಲಸ ದೊರೆತದ್ದಕ್ಕೂ ಐದಾರು ತಿಂಗಳ ಅಂತರ. ನಾನೇನೋ ಸರ್ಕಾರದವರು ನನ್ನ ಚಾತುರ್ಯಕ್ಕೂ ಕಾರ್ಯ ದಕ್ಷತೆಗೂ ಮೆಚ್ಚಿ ನನ್ನನ್ನು ನಿಯಮಿಸಿಕೊಂಡರೆಂದು ಭಾವಿಸಿದ್ದೆ. ಲಲಿತೆ ಆ ಭ್ರಮೆಯನ್ನು ಹೋಗಲಾಡಿಸಿದಳು. ಬುದ್ಧಿವಂತಿಕೆ, ಮುಂದಾಲೋಚನೆ ಇವೆಲ್ಲಾ ತನ್ನದೆಂದೂ ಅದರಲ್ಲಿ ನನ್ನ ಕೈವಾಡವೇನೂ ಇಲ್ಲವೆಂದೂ ಅವಳ ಮಾತಿನಿಂದ ವ್ಯಕ್ತವಾಯಿತು. ಅವಳು ವೆಂಕಟರಮಣಸ್ವಾಮಿಯ ಸಹಾಯ ವನ್ನು ಕೋರದಿದ್ದರೆ ನನ್ನ ಮುದ್ದು ಮುಖವನ್ನು ನೋಡಿ ಯಾರೂ ನೌಕರಿ ಕೊಡುತ್ತಿರಲಿಲ್ಲವಂತೆ. ಈ ಅವಹೇಳನವನ್ನು ಕೇಳಿ ನನ್ನ ಸ್ವಾಭಿಮಾನ ಕೆರಳಿತು; ಅಲ್ಲದೆ ಕೈಗೆ ಬಂದಂತಿದ್ದ ಬೈಸಿಕಲ್ಲಿನ ತುತ್ತು ಕಣ್ಮರೆಯಾಗುವಂತೆ ತೋರಿತು. ಗೃಹಕೃತ್ಯದಲ್ಲಿ ಅಲ್ಪ ವಿಷಯಗಳಿಗೆಲ್ಲಾ ಅಡ್ಡಿ ಬರಬಾರದೆಂದು ನಾನು ಖುದ್ದು ರಾಜಿಯಿಂದ ಮನೆಯ ಪಾರುಪತ್ಯವನ್ನು ಬಹುಮಟ್ಟಿಗೆ ಲಲಿತೆಗೇ ವಹಿಸಿರುವುದು ನಿಜ. ಆದರೆ ಅವಳು ತನ್ನ ಸ್ವಾತಂತ್ರ್ಯವನ್ನು ಹೀಗೆ ದುರುಪಯೋಗ ಮಾಡಿದರೆ ಸುಮ್ಮನಿರುವುದು ಹೇಗೆ? ಹೀಗೆಯೇ ಬಿಟ್ಟರೆ ನನ್ನನ್ನು ಕೈಗೊಂಬೆಯಂತೆ ಕುಣಿಸಿಬಿಡುತ್ತಾಳೆ. ಸಂಬಳವನ್ನು ತಿರುಪತಿ ದೇವರಿಗೆ ಒಪ್ಪಿಸಿ ಕೈಮುಗಿಯಲು ನಾನು ಒಪ್ಪಲಿಲ್ಲ. ಅವಳು ಹರಸಿಕೊಂಡದ್ದು ನಿಜವಿರಬಹುದು; ನನಗೆ ಕೆಲಸವಾದದ್ದೂ ನಿಜ. ಇವೆರ ಡಕ್ಕೂ ಸಂಬಂಧವಿದೆಯೆನ್ನುವುದನ್ನು ಮಾತ್ರ ನಂಬಲಾರದೆ ಹೋದೆ. ಅಥವಾ ಇದ್ದರೂ....ಮನೆಯ ಬಾಗಿಲಿನಲ್ಲಿ ನಕ್ಷತ್ರಿಕನಂತೆ ಬಂದು ನಿಲ್ಲುವ ಸಾಲಗಾರನಿಗೇ ಕೊಟ್ಟ ಸಾಲವನ್ನು ವಾಪಸು ಮಾಡಲು ಮನಸ್ಸು ಬರುವು ದಿಲ್ಲ—ಹೀಗಿರುವಾಗ ಬೇರೆ ಯಾವುದೋ ಲೋಕದಲ್ಲಿ ವಾಸಿಸುವ, ಕಣ್ಣಿಗೆ ಕಾಣದ, ದೇವರಿಗೆ ಹಣ ಸಲ್ಲಿಸಲು ಮನಸ್ಸು ಒಪ್ಪೀತೆ? ಅವನು ಇದ್ದಾ ನೆಯೋ ಇಲ್ಲವೋ ಅದು ಸಹ ತಿಳಿಯದು!

ಒಂದು ವೇಳೆ ನನಗೆ ಕೆಲಸವಾದದ್ದು ವೆಂಕಟರಮಣನ ಕೃಪೆ ಯಿಂದಲೇ ಎಂದು ಒಪ್ಪಿದರೂ ಆತನ ಕೃಪೆಯನ್ನು ಅಳೆದು ಅದಕ್ಕೆ ಹಣದ ಬೆಲೆ ಕಟ್ಟಿ ಪ್ರತಿಫಲವನ್ನು ಕೊಡಹೋಗುವ ದಾಷ್ಟ್ಯರ್ಕ್ಕೆ ಕ್ಷಮೆಯುಂಟೆ?

ಪ್ರತಿಫಲಾಪೇಕ್ಷೆಯೆಂಬ ದೋಷವನ್ನು ದೇವರಲ್ಲಿ ಆರೋಪಿಸಬಹುದೆ! ಅಥವಾ ಪ್ರತಿಫಲಾಪೇಕ್ಷೆಯಿದ್ದರೂ, ಆತನು ಕರುಣಾಮಯ; ನಾವು ಕೊಟ್ಟ ಭಾಷೆಗೆ ಒಂದು ವೇಳೆ ತಪ್ಪಿದರೂ ಕ್ಷಮಿಸಲಾರನೆ? ಹೀಗೆಲ್ಲಾ ವಾದ ಮಾಡಿ ಲಲಿತೆಯ ಬಾಯಿ ಮುಚ್ಚಿಸಿದೆ. ಇನ್ನೂ ಆ ತಿಂಗಳ ಸಂಬಳವನ್ನು ಸಲ್ಲಿಸಿಲ್ಲ. ನನಗೆ ಯಾವಾಗಲಾದರೂ ನೆಗಡಿ ತಲೆನೋವು ಬಂದಾಗ ಮಾತ್ರ ಲಲಿತೆ ತನ್ನ ಹರಕೆಯನ್ನು ನೆನಸಿಗೆ ತಂದುಕೊಂಡು ಮೂರು ಕಾಸಿನ ಬಿಲ್ಲೆಯೊಂದನ್ನು ಅರಿಸಿನದ ಬಟ್ಟೆಯಲ್ಲಿ ಕಟ್ಟಿ ಮುಡುಪಾಗಿ ಇಡುತ್ತಾಳೆ. ಹೀಗೆ ಎರಡು ಮೂರು ವರ್ಷಕ್ಕೊಂದು ಬಾರಿ ಹೊಸ ಪ್ರಾಮಿಸರಿ ನೋಟು ಬರೆದಿಟ್ಟ ಹಾಗೆ ಮಾಡಿ ಕಾಲ ತಳ್ಳುತ್ತ ಬಂದಿದೇವೆ. ಹರಕೆಯೇನೋ ನನ್ನ ಕೈ ಕಚ್ಚಲಿಲ್ಲ. ಆದರೆ ಹೀಗೆ ಮಾಡುವುದು ನ್ಯಾಯವೆ, ಹಣ ಸಲ್ಲಿಸದೆ ಇರುವುದರಿಂದ ಕೆಟ್ಟ ಪರಿಣಾಮವೇನೂ ಇಲ್ಲವೆ, ಎಂಬ ಸಂದೇಹ ಆಗಿಂದಾಗ ನನ್ನನ್ನೂ ಬಾಧಿಸುವುದುಂಟು. ಇನ್ನು ಮುಂದಾದರೂ ಇಂಥ ಧರ್ಮಸಂಕಟ ಒದಗದೆ ಇರಲೆಂದು ಲಲಿತೆಗೆ ಕಟ್ಟಾಜ್ಞೆ ವಿಧಿಸಿದ್ದೇನೆ—ನನಗೆ ತಿಳಿಸದೆ ಯಾವ ಹರಕೆಯನ್ನೂ ಮಾಡಕೂಡದೆಂದು. ಅದರ ಫಲವಾಗಿ ಅವಳಿಂದ ಸ್ತ್ರೀಸ್ವಾತಂತ್ರ್ಯದ ವಿಷಯ ಒಂದು ಉಪನ್ಯಾಸ ಕೇಳಬೇಕಾಯಿತು. ತಿರುಪತಿಯ ಯಾತ್ರಿಕರು ಕೆಲವು ವೇಳೆ ಮಾತಾಡುವುದಕ್ಕೆ ಅವಕಾಶವಿಲ್ಲದಂತೆ ಬಾಯಿಬೀಗ ಹಾಕಿಕೊಳ್ಳುವ ಸೇವೆ ನಡೆಸುವುದುಂಟು. ಒಂದು ಮಾತಿಗೆ ಮೂರು ಪ್ರತಿಮಾತಾಡಿ ನಮ್ಮ ಪ್ರಾಣಹಿಂಡುವ ಈ 'ಮಧುರಭಾಷಿಣಿ'ಯರು ಇಂಥ ಹರಕೆಯನ್ನಾದರೂ ಹೊತ್ತರೆ ದಾಂಪತ್ಯಜೀವನ ಎಷ್ಟೋ ಹಗುರವಾದೀತು!

ವೈಜ್ಞಾನಿಕ ಮನೋವೃತ್ತಿಯುಳ್ಳವರೂ ಸಂದೇಹವಾದಿಗಳೂ ಹರಕೆಗಾರರ ಅಂಧಶ್ರದ್ಧೆಯನ್ನು ನೋಡಿ ತಿರಸ್ಕಾರದಿಂದ ನಗಬಹುದು. ನಾನೂ ಈ ಗುಂಪಿಗೆ ಸೇರಿದವನೇ. ಆದರೂ ನನಗಾಗಿ ಬೇರೊಬ್ಬರು ಮಾಡಿದ ಹರಕೆ ತೀರದಿದ್ದಾಗ ನನ್ನ ಮನಸ್ಸು ಸ್ವಲ್ಪ ಡೋಯ್ದಾಟಕ್ಕೆ ಒಳಗಾಯಿತು. ಇನ್ನು ನಂಬಿಕೆಯುಳ್ಳವರ ಗತಿಯೇನು? ಶ್ರೀಕಂಠೇಶ್ವರನ ಸನ್ನಿಧಿಯಲ್ಲಿ ತುಲಾಭಾರ ತೂಗುವವರನ್ನೂ ನದಿಯಿಂದ ಗುಡಿಯವರೆಗೆ ಒದ್ದೆ ಬಟ್ಟೆಯಲ್ಲಿ ಹೆಜ್ಜೆ ನಮಸ್ಕಾರ ಹಾಕಿ ಆ ಬೀದಿಯ ಪವಿತ್ರಧೂಳಿಯಿಂದ ಅಲಂಕೃತರಾದವರನ್ನೂ, ಭಕ್ತರ ಎಂಜಲೆಲೆಯ ಮೇಲೆ ಹೊರಳಿ ಭವರೋಗವೈದ್ಯನ ಕರುಣೆ ಬೇಡುವವರನ್ನೂ ನೋಡಿದಾಗ ನನಗೆ ತಿರಸ್ಕಾರವಿಲ್ಲವೆಂದು ಹೇಳಲಾರೆ. ಆದರೆ ಅವರ ದೈನ್ಯವು ತಿರಸ್ಕಾರಕ್ಕಿಂತಲೂ ಹೆಚ್ಚಾಗಿ ಮರುಕವನ್ನುಂಟು

ಮಾಡುತ್ತದೆ. ನೈಸರ್ಗಿಕವಾದ ಕಾರ್ಯಕಾರಣ ನಿಯಮಕ್ಕೆ ಕಟ್ಟುಬಿದ್ದ ಈ ಪ್ರಪಂಚದ ವ್ಯವಹಾರದಲ್ಲಿ ದೈವವು ನಡುವೆ ತಲೆಹಾಕಿ ಯಾವನೋ ಒಬ್ಬನ ಬಯಕೆಯನ್ನು ಪೂರೈಸುವುದೆಂದು ನಂಬುವುದು ಕಷ್ಟ. ಹಾಗೆ ಭಗವಂತನು ಪರಸ್ಪರ ವಿರುದ್ಧವಾದ ನಮ್ಮೆಲ್ಲರ ಇಷ್ಟಾರ್ಥಗಳನ್ನೂ ಸಲ್ಲಿಸುವ ಕೆಲಸಕ್ಕೆ ನಿಂತರೆ ಲೋಕದಲ್ಲಿ ಅರಾಜಕತೆಯೆದ್ದು ತಾಂಡವವಾಡಬಹುದು. ನಾನು ಯಾವುದಕ್ಕೆ ಕೈಚಾಚುವೆನೋ ಅದೇ ಇನ್ನು ಸಾವಿರ ಜನಕ್ಕೆ ಬೇಕಾಗಿ, ನನ್ನ ಇಷ್ಟಸಿದ್ಧಿಯಾಗುವುದು ಅವರಿಗೆ ಬೇಡವಾಗಿ, ನಾವೆಲ್ಲರೂ ಏಕಕಾಲದಲ್ಲಿ ಹರಕೆ ಕಟ್ಟಿ ನಿಂತರೆ ದೇವರು ಯಾರ ಪಕ್ಷವನ್ನು ವಹಿಸಬೇಕು ?

ಇದೆಲ್ಲಾ ನಿಜವಾದರೂ ನಮಗೆ ಹರಕೆಯಲ್ಲಿ ನಂಬಿಕೆ ಕಡಿಮೆಯಾಗಿಲ್ಲ, ಬಹುಶಃ ಕಡಿಮೆಯಾಗುವುದೂ ಇಲ್ಲ. ತೇನ ವಿನಾ ತೃಣಮಪಿ ನ ಚಲತಿ—ಅವನ ಸಹಾಯವಿಲ್ಲದೆ ನಮ್ಮ ಕಾರ್ಯಸಿದ್ಧಿ ಹೇಗಾದೀತು? ಅಷ್ಟೈಶ್ವರ್ಯಕ್ಕೂ ಒಡೆಯನಾದವನು ನಮ್ಮೆಲ್ಲರನ್ನೂ ಏಕಕಾಲದಲ್ಲಿ ತೃಪ್ತಿಪಡಿಸಬಾರದೇಕೆ? ಬೇಕಾದರೆ ನಮ್ಮ ಸಂದೇಹವಾದಿಗಳು ತಮ್ಮ ಅಂತರಂಗವನ್ನು ಸಾಕ್ಷಿಯಾಗಿಟ್ಟುಕೊಂಡು ಆತ್ಮಪರೀಕ್ಷೆಮಾಡಿಕೊಳ್ಳಲಿ— ಈ ಮೂಢಭಕ್ತಿ ಮಾನವನಾದವನು ಯಾರನ್ನೂ ಪೂರ್ಣವಾಗಿ ಬಿಟ್ಟದ್ದಲ್ಲ. ದೈವಭಕ್ತಿ ಕಡಿಮೆಯಾಗಿರುವುದಲ್ಲದೆ ದೇವರೇ ಇಲ್ಲವೆಂಬ ವಾದ ಹೆಚ್ಚುತ್ತಿರುವ ಈ ಕಲಿಗಾಲದಲ್ಲಿಯೂ ಸ್ವರ್ಗಕ್ಕೆ ಹರಕೆಗಳ ಬಾಬಿನಿಂದ ಬರುವ ಆದಾಯ ಕುಗ್ಗಿದೆಯೆಂದು ಯಾರೂ ಭಾವಿಸಲಾಗದು. ಪ್ರತಿದಿನವೂ ದೇವಾಲಯಗಳ ಬಳಿ ನಡೆಯುವ ವ್ಯಾಪಾರವನ್ನು ನೋಡಿದರೆ ನಮ್ಮಲ್ಲಿ ನಿರೀಶ್ವರವಾದಿಗಳು ಅಷ್ಟೇನೂ ಹೆಚ್ಚಿಲ್ಲವೆಂದೇ ತೋರುತ್ತದೆ. ನಾವೆಲ್ಲರೂ ಹಳೆಯ ಹುಚ್ಚುನಂಬಿಕೆಗಳನ್ನು ಬಿಟ್ಟವರೇ. ಆದರೂ ನನ್ನ ತಾಯಿಗೋಸ್ಕರ, ಹೆಂಡತಿಯ ಮನಸ್ಸು ನೋಯದಿರಲೆಂದು, ಏನೋ ಇದರಿಂದ ಅವಳಿಗೆ ಮನಶ್ಶಾಂತಿ ಬರುವುದಾದರೆ ನಾನೇಕೆ ಅಡ್ಡ ಬರಲಿ ಎಂದು–ಅಂತೂ ಯಾವ ಕಾರಣದಿಂದಲಾದರೂ ಹರಕೆ ಕಟ್ಟುವುದಕ್ಕೆ ನಾವೆಲ್ಲರೂ ಶರೀಕಾಗಿರುತ್ತೇವೆ. ಈಗಿನವರಲ್ಲಿ ಕುರುಡು ನಂಬಿಕೆ ಕಡಿಮೆಯಾಗಿಲ್ಲ, ಕಾಪಟ್ಯ ಹೆಚ್ಚಿದೆ. ಹಿಂದಿನವರಿಗೂ ನಮಗೂ ಇರುವ ವ್ಯತ್ಯಾಸವೆಂದರೆ, ಅವರು ತಮ್ಮ ಬಲಹೀನತೆಯನ್ನೊಪ್ಪಲು ಹಿಂಜರಿಯದೆ ದೇವರ ಮರೆಹೋಗುತ್ತಿದ್ದರು. ನಾವು ಹೊರಗೆ ವಿಜ್ಞಾನ ಪಾರಾಯಣ ಮಾಡುತ್ತಾ ಗುಟ್ಟಾಗಿ ದೇವರ ಕಾಲು ಹಿಡಿಯುತ್ತೇವೆ. ಶುದ್ಧ ಸಂದೇಹವಾದಿಗಳಾದ ನನ್ನ

ಮಿತ್ರರೊಬ್ಬರು ಹೊಸ ಬಟ್ಟೆಗಳಿಗೆ ಅರಿಸಿನ ಹಚ್ಚದೆ ಧರಿಸುವುದಿಲ್ಲ. ಆದ್ದ ಅರಿಸಿನ ಬೇಕೆಂದು ಕೇಳಿದರೆ ಹೆಂಡತಿ ಹಾಸ್ಯಮಾಡಿಯಾಳೆಂಬ ಭಯದಿಂದ ಸರಸದ ನೆವಮಾಡಿಕೊಂಡು ಬಟ್ಟೆಗಳನ್ನು ಆಕೆಯ ಕೆನ್ನೆಗೆ ಸೋಕಿಸಿ ಧರಿಸುತ್ತಾರೆ. ಅವರು ಇಂಗ್ಲೆಂಡಿಗೆ ಹೋಗಲು ಸರ್ಕಾರಿ ವೇತನಕ್ಕೆ ಅರ್ಜಿ ಹಾಕಿದ್ದರು. ಆ ಸಂಬಂಧದಲ್ಲಿ ಮೈಸೂರಿನಲ್ಲಿ ದೇವರ ಸೇವೆ ಮಾಡಿಸಿದರೆ ನಾವೆಲ್ಲಾ ಚುಚ್ಚುಮಾತಾಡಬಹುದೆಂದು ಹೆದರಿ ಕಳ್ಳತನದಲ್ಲಿ ಉಡುಪಿಗೆ ಹೋಗಿ ದೇವರ ಸೇವೆಗಾಗಿ ಐವತ್ತು ರೂಪಾಯಿ ಕಾಣಿಕೆ ಸಲ್ಲಿಸಿ ತೀರ್ಥಪ್ರಸಾದ ತೆಗೆದುಕೊಂಡು ಬಂದರು. ಅವರು ಐವತ್ತು ರೂಪಾಯಿನ ಮುಖ ನೋಡುವವರಲ್ಲ—ಏಳೆಂಟು ಸಾವಿರ ರೂಪಾಯಿಗಳ ನಿರೀಕ್ಷೆ ಯಿರುವಾಗ. ವೇತನವೇನೋ ದೊರೆಯಿತು. ಆದರೆ, ಅವರು ಇಂಗ್ಲೆಂಡಿಗೆ ಹೋಗದಿರಲೆಂದು ಮತ್ತಾರಾದರೂ ಕೃಷ್ಣಸ್ವಾಮಿಗೆ ನೂರು ರೂಪಾಯಿ ಸಲ್ಲಿಸಿದರೋ ಏನೋ, ಆ ಸಮಯಕ್ಕೆ ಸರಿಯಾಗಿ ಯುದ್ಧ ಪ್ರಾಪ್ತವಾಗಿ ಪ್ರಯಾಣ ನಿಂತುಹೋಯಿತು. ದೇವರಿಗಂತೂ ಎರಡು ಪಕ್ಷದವರನ್ನೂ ಸಮಾಧಾನಪಡಿಸಿದ ತೃಪ್ತಿ. ಇಷ್ಟಾದರೂ ನನ್ನ ಮಿತ್ರರ ನಂಬಿಕೆಯೇನೂ ಅಳಿಯಲಿಲ್ಲ. ತಮ್ಮ ಭಕ್ತಿಯನ್ನು ಉಡುಪಿಯಿಂದ ತಿರುಪತಿಗೆ ವರ್ಗಾ ಯಿಸಿದರು, ಅಷ್ಟೆ. ಉಡುಪಿಯ ಕೃಷ್ಣ ನಂಬಿಸಿ ದ್ರೋಹಮಾಡಿದರೆ ಮತ್ತೇನು ಮಾಡಿಯಾರು!

ದೇವರನ್ನು ಒಲಿಸಿಕೊಂಡು ನಮ್ಮ ಇಷ್ಟಾರ್ಥಗಳನ್ನು ಸಾಧಿಸಬೇಕಾದರೆ ನಾವು ಅವನ ಮಟ್ಟಕ್ಕೆ ಏರಬೇಕು, ಇಲ್ಲವೆ ಅವನನ್ನು ನಮ್ಮ ಮಟ್ಟಕ್ಕೆ ಇಳಿಸಿಕೊಳ್ಳಬೇಕು. ನಾವು ಅವನ ಮಟ್ಟಕ್ಕೇರಿದರೆ ಆತನ ಸಹಾಯವೇ ಅನಾವಶ್ಯಕ; ಅಲ್ಲದೆ ಆಗ ನಮ್ಮ ಇಷ್ಟಾರ್ಥಗಳು ನಮಗೇ ಬೇಡವೆನ್ನಿಸ ಬಹುದು. ಆದ್ದರಿಂದ ದೇವರನ್ನೇ ನಮ್ಮ ಮಟ್ಟಕ್ಕೆ ಇಳಿಸಿಕೊಂಡು ಅವನೂ ನಮ್ಮಂತೆ ಸ್ತೋತ್ರಪ್ರಿಯನೆಂದು ಭಾವಿಸಿ ದೇವರನ್ನು ನಮ್ಮ ಪ್ರತಿಬಿಂಬ ವಾಗಿ ಸೃಷ್ಟಿಸುತ್ತೇವೆ. ದೊಡ್ಡ ಮನುಷ್ಯರ ಸಹಾಯವನ್ನು ಕೋರಿ ಅವರನ್ನು ನೋಡುವುದಕ್ಕೆ ಹೋದಾಗ ಕೈಯಲ್ಲಿ ಎರಡು ನಿಂಬೆಯ ಹಣ್ಣು ಗಳನ್ನಾದರೂ ಹಿಡಿದುಕೊಂಡು ಹೋಗುತ್ತೇವೆ; ಏನಾದರೂ ನೆಪದಿಂದ ಅವರನ್ನು ಉಪಾಹಾರಕ್ಕೆ ಕರೆತರುತ್ತೇವೆ; ದೇವರನ್ನು ಟೀ ಪಾರ್ಟಿಗೆ ಕರೆಯಲಾಗುವುದಿಲ್ಲವಲ್ಲ; ಆದ್ದರಿಂದ ಭಜನೆಮಾಡಿ ಹಣ್ಣುಕಾಯಿ ಮಾಡಿಸುತ್ತೇವೆ. ವಿಘ್ನೇಶ್ವರನಿಗೆ ಇಡಿಗಾಯಿ ಒಡೆದು ಶ್ರೀಕಂಠೇಶ್ವರನಿಗೆ ಶಾಲ್ಯಾನ್ನದ ಅಭಿಷೇಕ ಮಾಡಿಸಿ ನರಸಿಂಹನಿಗೆ ಚಿನ್ನದ ಕಿರೀಟ ಹಾಕಿಸಿ—

ಮುಚ್ಚುಮರೆಯೇನೂ ಇಲ್ಲದೆ ದೇವರಿಗೆ ಲಂಚ ಕೊಟ್ಟು ನಮ್ಮ ಕೆಲಸ ಮಾಡಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ನಮ್ಮಂತೆಯೇ ನಮ್ಮ ದೇವರಿಗೂ ನಾಲಗೆಯ ಚಪಲ ಹೆಚ್ಚು; ವಸ್ತ್ರಭೂಷಣಗಳ ಗೀಳೂ ಉಂಟು. ಪ್ರತಿ ಫಲಾಪೇಕ್ಷೆಯಿಲ್ಲದೆ ನಮ್ಮ ಪ್ರಾರ್ಥನೆಯನ್ನು ಸಲ್ಲಿಸುವುದು ಆತನಿಗೇನೂ ಕಷ್ಟವಲ್ಲವೆಂದರೂ ಪ್ರತಿಫಲ ದೊರಕಿದರೆ ಯಾರನ್ನು ಕೆಡಿಸಿತು! ಹರಕೆ ಮಾಡಿಕೊಂಡ ಮೇಲೆ ಅದನ್ನು ತೀರಿಸದಿದ್ದರೆ ದೈವಕ್ಕೆ ಸಿಟ್ಟುಬಂದು ನಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ರೋಗರುಜಿನಗಳನ್ನು ತಂದುಹಾಕಿ ಹರಕೆ ತೀರುವವರೆಗೂ ನಮ್ಮನ್ನು ಕಾಡುತ್ತಿರುತ್ತದೆ. ಅದರಲ್ಲಿಯೂ ತಿರುಪತಿ ವೆಂಕಟರಮಣನಂಥ ಸಾಲಗಾರ ದೈವವಾದರಂತೂ ಒಂದು ಕಿಲುಬು ಕಾಸೂ ಉಳಿಯದಂತೆ ವಸೂಲಾಗುವವರೆಗೂ ನಿಮ್ಮನ್ನು ಬಿಡುವುದಿಲ್ಲ. ಪದ್ಮಾವತಿಯನ್ನು ಮದುವೆಯಾದಾಗ ನಡೆದ ವೈಭವಕ್ಕೆ ತಂದ ಸಾಲವೆಲ್ಲಾ ಮಾನವಕೋಟಿಯ ಲಂಚದಿಂದ ತಾನೇ ತೀರಬೇಕು! ಒಂದು "ಮೋರಟೋರಿಯಂ" ಆಜ್ಞೆ ಹೊರಡಿಸಿ ವೆಂಕಟರಮಣ ತನ್ನ ಕಷ್ಟದಿಂದ ಪಾರಾಗಬಹುದು. ಆದರೆ ವೈಕುಂಠದಲ್ಲಿ ಮೋರಟೋರಿಯಂ ಪದ್ಧತಿ ಜಾರಿಯಲ್ಲಿಲ್ಲವೇನೊ.

ನಾವು ಹರಕೆ ಕಟ್ಟುವುದು ನಮ್ಮ ಜಾತಿಯ ದೇವರಿಗೆ ಮಾತ್ರವಲ್ಲ. ಮಹಮ್ಮದೀಯರು ಊರ ಮುಂದಿನ ಹನುಮಂತರಾಯನಿಗೆ ದಧ್ಯೋದನದ ಸೇವೆ ಮಾಡಿಸಿದ್ದುಂಟು. ಬ್ರಾಹ್ಮಣರು ಫಿಲೋಮಿನಾ ದೇವಾಲಯಕ್ಕೆ ಮುಡುಪು ಕಟ್ಟಿಡುತ್ತಾರೆ. ಹದಿನಾರಾಣೆ ಅಚ್ಚ ಹಿಂದುಗಳು ಹರಕೆ ತೀರಿಸಲು ಮೊಹರಂ ಹಬ್ಬದಲ್ಲಿ ವೇಷ ಹಾಕಿ ಕುಣಿಯುತ್ತಾರೆ. ಸ್ವಪ್ರಯೋಜನದ ಮುಂದೆ ಮತಧರ್ಮಗಳ ಎಲ್ಲೆಕಟ್ಟುಗಳು ಹೇಗೆ ನಿಂತಾವು? ನಮಗೆ ಸೌಖ್ಯ ಬೇಕು. ಅದು ಹಿಂದೂ ಅಂಗಡಿಯಲ್ಲಿ ಸಿಕ್ಕಲಿ, ಕ್ರೈಸ್ತರ ಅಂಗಡಿಯಲ್ಲಿ ಸಿಕ್ಕಲಿ, ಯಾವ ದೈವವು ಮಾರಿದರೂ ಕೊಳ್ಳಲು ಸಿದ್ಧರಿದ್ದೇವೆ. ಇದು ಸ್ವಾರ್ಥದ ಪರಮಾವಧಿಯೆಂದು ಬೇಕಾದವರು ಅಲ್ಲಗಳೆಯಬಹುದು. ನಿಜವಾಗಿ ನೋಡಿದರೆ ಸರ್ವಮತಸಮನ್ವಯಕ್ಕೆ ಸ್ವಪ್ರಯೋಜನವೂ ಒಂದು ಹೆದ್ದಾರಿ. ಹೀಗಾದರೆ ನಮ್ಮ ವಿಚಾರಶಕ್ತಿಯ ಗತಿಯೇನು ಎನ್ನಬಹುದು. ಈ ವಿಷಯಗಳು ವಿಚಾರಶಕ್ತಿಗೆ ಮೀರಿದವು. ಜಗತ್ತಿನಲ್ಲಿ ವಿಪತ್ತನ್ನು ನಿವಾರಣೆ ಮಾಡುವ, ಮಂಗಳವುಂಟುಮಾಡುವ, ಶಕ್ತಿ ಎಲ್ಲಿದೆಯೋ ಯಾರು ಬಲ್ಲರು? ಅದಕ್ಕೆ ನಾವು ನಾಮಕರಣ ಮಾಡಲಾರೆವು. ಇಂದ್ರಿಯಕ್ಕೆ ಗೋಚರವಲ್ಲದ ಆ ನಸುಗತ್ತಲಿನ ಅಸ್ಪಷ್ಟ ಪ್ರಪಂಚದ

ನಕ್ಷೆಯನ್ನು ಯಾರೂ ಬರೆದಿಲ್ಲ. ಯಾವ ದಾರಿಯಲ್ಲಿ ಹೋದರೆ ಭಗವಂತನ ಪಾದಸ್ಪರ್ಶಮಾಡಬಹುದೋ ಆ ವಿಷಯದಲ್ಲಿ ನಿಶ್ಚಿತವಾದ ಅಭಿಪ್ರಾಯ ವನ್ನು ಕೊಡಲಾಗುವುದಿಲ್ಲ. ಅಲ್ಲದೆ ಸೌಖ್ಯದ ಆಕಾಂಕ್ಷೆ ಹೆಚ್ಚಿದಹಾಗೆಲ್ಲಾ ವಿಚಾರಶಕ್ತಿ ಅಳಿಯುತ್ತ ಬರುತ್ತದೆ.

ಈ ಪ್ರಾಪಂಚಿಕ ಸೌಖ್ಯದಿಂದ ಏನಾಗುತ್ತದೆ ಎನ್ನುವುದು ಬೇರೆ ಮಾತು. ವಿರಾಗಿಗಳಿಗೆ ಬಯಕೆಯೆನ್ನುವುದೇ ಹುಚ್ಚುತನ. ಆದರೆ ಅದನ್ನು ತೊರೆಯುವುದೇ ಸೌಖ್ಯ ಎಂಬ ಶುಷ್ಕವೇದಾಂತ ನಮಗೆ ಒಪ್ಪದು. ನಾವು ಐಹಿಕಸುಖದ ಹಂಬಲವನ್ನು ಬಿಡಲಾರೆವು.

ಅಂದಣವ ಕೊಡು ಎಂದು ಅನುನಯದಿ ಬೇಡುವೆನೆ,
ಅಂದಣವನೇರಿದಾ ನಹುಷನೇನಾದ!

ಇರಬಹುದು. ಆದರೆ ಅಂದಣ ಬೇಡವೆನ್ನುವ ದಾಸರೊಬ್ಬರಿದ್ದರೆ ಅದನ್ನು ಬೇಡುವವರು ಲಕ್ಷ ಮಂದಿ. ಅಲ್ಲದೆ ನಮ್ಮೆಲ್ಲರ ಮನಸ್ಸಿನಲ್ಲೂ, "ನಾನೇನು ನಹುಷನಂತೆ ಹುಚ್ಚನಲ್ಲ, ಇಂದ್ರಪದವಿಗೆ ಏರಿದ್ದರೆ ಅದನ್ನು ಉಳಿಸಿಕೊಳ್ಳದೆ ಬಿಡುತ್ತಿರಲಿಲ್ಲ." ಎಂಬ ಭ್ರಾಂತಿ ನೆಲೆಗೊಂಡಿದೆ. ಜೀವ ನವು ಮಾಯೆಯೆಂದು ಹೇಳುವವರು ಯಾರು ತಾನೆ ಪ್ರಾಣವನ್ನೊಪ್ಪಿಸಲು ಸಿದ್ಧರಾಗಿದ್ದಾರೆ? ಬ್ರಹ್ಮಸಾಕ್ಷಾತ್ಕಾರವೇ ಮುಖ್ಯ. ಅದಾದ ಮೇಲೆ ನಾವು ಮತ್ತೇನನ್ನೂ ಬೇಡಿ ಹರಕೆ ಹೊರಬೇಕಾಗುವುದಿಲ್ಲ, ನಿಜ. ಆದರೆ ಸತ್ಯವಾಗಿ ಪರೀಕ್ಷಿಸಿ ನೋಡಿದರೆ ಬಾಯಲ್ಲಿ ನಾವು ಏನೇ ಹೇಳಲಿ, ಅಂಥ ಸಾಕ್ಷಾತ್ಕಾರ ನಮ್ಮಲ್ಲಿ ಬಹು ಜನರಿಗೆ ಬೇಡ. ವಿರಾಗಿಗಳಾಗಿ ಸ್ವಾರ್ಥ ವನ್ನು ಜಯಿಸಿ ಹಂಬಲವೆಲ್ಲವನ್ನೂ ತೊರೆಯುವುದೇ ಅದಕ್ಕೆ ಮಾರ್ಗ. ಆದರೆ ಮಧುಪಾನದ ಚಟವಿರುವವನಿಗೆ ಮಧುವಿಲ್ಲದ ಬ್ರಹ್ಮಸಾಕ್ಷಾತ್ಕಾರ ವೆಂದರೆ ಅಷ್ಟೇನೂ ಆನಂದವಾಗುವುದಿಲ್ಲ. ಮದುವೆಯಾಗುವುದೂ ಮದುವೆ ಮಾಡಿಕೊಡುವುದೂ ಸ್ವರ್ಗದಲ್ಲಿಲ್ಲವೆಂದು ಕ್ರೈಸ್ತರ ವೇದ ಸಾರುತ್ತದೆ. ನನ್ನ ಪ್ರೇಯಸಿಯ ಮೇಲೆ ನನಗಿರುವ ವ್ಯಾಮೋಹ ಅಳಿದುಹೋಗುವುದಾ ದರೆ, ನಮ್ಮಿಬ್ಬರ ಹೃದಯಬಂಧನವನ್ನು ಸ್ವರ್ಗ ಕಡಿಯುವುದಾದರೆ, ಆ ಸ್ವರ್ಗ ಇನ್ನೂ ದೂರವಿರಲಿ ಎನ್ನಿಸುತ್ತದೆ. ನಮ್ಮ ಹಸಿವು ಬಾಯಾರಿಕೆ ಗಳಡಗಿ ಚಪಲಗಳೆಲ್ಲಾ ತೃಪ್ತಿ ಪಡೆದು ಕರಣಗಳ ಆಸೆ ಹಿಂಗಿದ ಮೇಲೆ ಚರ್ಚಿಗೆ ಕುಳಿತರೆ ಈ ವೇದಾಂತವನ್ನು ನಾವು ವಾಚಾ ಮಾತ್ರವಲ್ಲದೆ ಮನಸಾ ಸಹ ಒಪ್ಪುತ್ತೇವೆಯೋ ಏನೊ. ಆದರೆ ರಕ್ತವಿನ್ನೂ ಬಿಸಿಯಾಗಿ ರುವಾಗ, ಯೌವನದ ಕಾಂತಿಯೂ ಅವಯವದ ಚೈತನ್ಯವೂ ಕುಗ್ಗದಿರು

ವಾಗ, ಲವಲವಿಕೆ ಉಕ್ಕಿ ಹೊರಹೊಮ್ಮಿ ನಾವು ಜೀವನವನ್ನು ನೂಕುವು ದಕ್ಕೆ ಬದಲು ನರ್ತಿಸುತ್ತಿರುವಾಗ, ನಮಗೆ ಪ್ರಪಂಚದ ತೃಷ್ಣೆಯಡಗ ಬೇಕೆಂಬ ಬಯಕೆಯಾದರೂ ಇದ್ದೀತೆ! ದೇವರು ನಮ್ಮನ್ನು ಇಲ್ಲಿ ತಂದಿ ಟ್ಟಿರುವುದು ಇಲ್ಲಿಂದ ಹೊರಡಲು ಸಿದ್ಧರಾಗಲೆಂದು ಮಾತ್ರವೆ? ವೈರಾಗ್ಯ ವೆಂದರೆ ಯೌವನದ ಉತ್ಸಾಹ ಮಾಗಿದ ಗುರುತೋ ಅಥವಾ ಮುಗ್ಗಿದ ಗುರುತೋ ಎಂಬ ಸಂದೇಹ ಬರುತ್ತದೆ. ಅದು ಅನೇಕ ವೇಳೆ ಜೀವನವನ್ನು ಎದುರಿಸುವ ಕೆಚ್ಚಿಲ್ಲದೆ ಬೆನ್ನು ತಿರುಗಿಸುವ ಹೇಡಿಯ ಮನೋಭಾವ. ನಾವು ಪ್ರಪಂಚದ ಹಂಬಲವನ್ನು ಬಿಡಲಾರೆವು. ಈಸ ಬೇಕು, ಇದ್ದು ಜೈಸಬೇಕು. ಈಜುವುದಕ್ಕೆ ಹೊರಟಾಗ ನಮ್ಮ ಸಹಾಯಕ್ಕೆ ಈ ಹರಕೆಗಳೇ ಈಜು ಬುರುಡೆಗಳು.

ಆದರಿಂದಲೇ ನಾವು ಸಹನೆಗೆ ಮೀರಿದ ಕಷ್ಟಕ್ಕೆ ಸಿಕ್ಕಿದಾಗ ನಮ್ಮ ವಿಚಾರಶಕ್ತಿಯನ್ನು ಹೊರದೂಡಿ ಎಂತಹ ಕುರುಡು ನಂಬಿಕೆಯಾದರೂ ಅದರ ಶರಣುಹೋಗುತ್ತೇವೆ. ನಮ್ಮ ಕಂದನಿಗೆ ಖಾಯಿಲೆಯಾದಾಗ ಸತ್ತರೆ ಸ್ವರ್ಗವೆಂದು ಸುಮ್ಮನಿರಲಾಗುವುದಿಲ್ಲ. ಇನ್ನೂ ತಿಳಿಮನಸ್ಸಿನ ಶುದ್ಧ ಹೃದಯದ ಕೂಸಾಗಿರುವಾಗಲೇ ಪರಮಾತ್ಮನಲ್ಲಿ ಐಕ್ಯವಾಗಲೆಂದು ಅದಕ್ಕೆ ವಿಷ ಊಡಿಸುವುದಿಲ್ಲ. ಔಷಧಿಯಿಂದ ಗುಣ ಕಾಣದಿದ್ದರೆ ಕಂಡ ಕಲ್ಲಿಗೆಲ್ಲಾ ಹರಕೆಯಿಟ್ಟೇ ಇಡುತ್ತೇವೆ. ಜೀವಕ್ಕೆ ಹೋಣೆಬೇಡುವ ತನ್ನ ಮಗುವಿನ ಬಳಿ ಕಣ್ಣೀರಿಡುತ್ತ ಕುಳಿತಿರುವ ತಾಯಿಗೆ ವೇದಾಂತವನ್ನು ಬೋಧಿಸಿ ಅವಳ ಹಂಬಲವನ್ನು ಹಾಸ್ಯಮಾಡುವ ಧೈರ್ಯ ಯಾರಿಗಿದೆ! ಆ ಹಂಬಲು, ಯಾವ ಮಾರ್ಗದಿಂದಲಾದರೂ ಸರಿಯೆ, ಮಗುವನ್ನು ಉಳಿಸಿ ಕೊಳ್ಳಬೇಕೆಂಬ ಉತ್ಕಟವಾದ ಆಸೆ, ಕೇವಲ ಸ್ವಾರ್ಥವಲ್ಲ; [ಮಾನವ ವಂಶ ವನ್ನು ಉಳಿಸಲು ಪ್ರಕೃತಿ ನಮ್ಮ ಎದೆಯಲ್ಲಿ ನೆಟ್ಟಿರುವ ರಕ್ಷೆ. ದೈವವೆನ್ನು ವುದು ನಮ್ಮನ್ನು ಬೇಟೆಯಾಡಿ ಕೊಲ್ಲುತ್ತಿದೆಯೋ ಅಥವಾ ನಮ್ಮ ರಕ್ಷಣೆಯ ಭಾರವನ್ನು ಹೊತ್ತು ನಮಗಾಗಿ ಮರುಗುತ್ತಿದೆಯೋ ತಿಳಿಯದು.] ಜಿಂಕೆ ಸಾಯುವಾಗ ತನ್ನನ್ನು ಕೊಂದವನ ಕಡೆಗೇ ದೀನ ದೃಷ್ಟಿಯನ್ನು ಬೀರುವಂತೆ ನಾವೂ ಸಹ ನಮ್ಮ ಹೃದಯದೊಡನೆ ಚೆಂಡಾಟವಾಡುವ ಕ್ರೂರ ದೈವವನ್ನೇ ಶರಣು ಹೋಗುತ್ತಿರಬಹುದು. ಆದರೆ ಎಲ್ಲವನ್ನೂ ಪೊರೆ ಕಳೆದ ತೀಕ್ಷ್ಣ ದೃಷ್ಟಿಯಿಂದ ವಿಮರ್ಶಿಸತೊಡಗಿದರೆ ಮಾನವನ ಜೀವನ ದುಸ್ಸಹವಾದೀತು. ಅದಕ್ಕೇ ಜನರು ತಮ್ಮ ಆಸೆ ಹುಚ್ಚೆಂದು ತೋರಿದರೂ ಇಂಥ ನಂಬಿಕೆಗಳನ್ನು ಬಿಡಲಾರರು. ಮುಳುಗುತ್ತಿರುವಾಗ

ಹುಲ್ಲುಕಡ್ಡಿಯನ್ನಾದರೂ ಹಿಡಿಯಬೇಕು. ಆದ್ದರಿಂದಲೇ ಮಾನವನು ಕಂಡದೇವರಿಗೆಲ್ಲಾ ಹರಕೆಯಿಟ್ಟು ಕೈಮುಗಿಯುತ್ತಾನೆ. ಅಲ್ಲಾ ಆಗಲಿ, ಅಂತೋಣಿಯಾಗಲಿ, ಹವಿಸ್ಸನ್ನಿಡಲು ಸಿದ್ಧನಾಗಿದ್ದಾನೆ. "ಕಸ್ಮೈ ದೇವಾಯ" ಎಂಬ ಪ್ರಶ್ನೆಯೇ ಸಲ್ಲದು.

# ಕ್ಲೀಷಾಪ್ರವೀಣರ ಸಾಕ್ಷ್ಯ

(ಸಾಹಿತ್ಯ ಸಮಾರಂಭದ ವಿಷಯ)

[ಕ್ಲೀಷೆ ಎಂಬ ಪದ ಕನ್ನಡಕ್ಕೆ ಹೊಸದು. ಜನಗಳ ಬಾಯಲ್ಲಿ ಸಾವಿರಾರು ಬಾರಿ ಬಿದ್ದು, ಶಕ್ತಿ ಮೀರಿ ದುಡಿದು, ಸತ್ವವನ್ನೆಲ್ಲಾ ಕಳೆದು ಕೊಂಡು ಬೆಂಡಾಗಿರುವ ಪದಸಂಯೋಜನೆಗಳನ್ನು 'ಕ್ಲೀಷೆ' ಎನ್ನುತ್ತಾರೆ. ಕನ್ನಡದಲ್ಲಿ ಈ ಬಗೆಯ ಮಾಲು ಬೇಕಾದಷ್ಟಿದೆ; ನಾವು ಅದಕ್ಕೆ ನಾಮ ಕರಣಮಾಡಿಲ್ಲ, ಅಷ್ಟೆ. ಇಂಗ್ಲಿಷಿನವರು ಚಾಲತಿಯಲ್ಲಿಟ್ಟುಕೊಂಡಿರುವ ಈ ಹೆಸರನ್ನೇ ನಾವು ಕನ್ನಡಕ್ಕೆ ಬರಮಾಡಿಕೊಂಡು ಬಳಸಬಹುದು— ಮಡಿ ಕನ್ನಡಿಗರು ಆಕ್ಷೇಪಿಸಿ ರೊಚ್ಚಿಗೇಳದಿದ್ದರೆ!

ಮಾನವಸಮಾಜದಲ್ಲಿ ವೇಶ್ಯೆಯರಿದ್ದಂತೆ ಭಾಷಾಪ್ರಪಂಚದಲ್ಲಿ ಈ ಕ್ಲೀಷೆ. ಯಾರು ಬೇಕಾದರೂ ಅದರೊಡನೆ ಮೈತ್ರಿ ಬೆಳೆಸಬಹುದು; ಅದಕ್ಕೂ ನಮಗೂ ಅಂತಃಕರಣದ ಸಂಬಂಧವಿರಬೇಕೆಂಬ ನಿಯಮವೇನೂ ಇಲ್ಲ. ವೇಶ್ಯಾಲಂಪಟರು ಹಣವನ್ನು ಕಳೆದುಕೊಳ್ಳುವಂತೆ ಕ್ಲೀಷಾಲಂಪ ಟರು (ಈ ಸಮಾಸವನ್ನು ನೋಡಿ ವೀರವೈಯಾಕರಣಿಗಳು ಉರಿದುಬೀಳು ವರೇನೊ!) ತಮ್ಮಲ್ಲಿ ಇದ್ದರೂ ಇರಬಹುದಾದ ಬುದ್ಧಿಶಕ್ತಿಯನ್ನು ಕಳೆದು ಕೊಳ್ಳುತ್ತಾರೆ. ಒಂದು ವಿಧದಲ್ಲಿ ನೋಡಿದರೆ ವೇಶ್ಯೆಯರಿಗಿಂತ ಕ್ಲೀಷೆ ಮೇಲೆನ್ನಬಹುದು. ವಿಟನ ಕೈ ಬರಿದಾದ ಮೇಲೆ ವೇಶ್ಯೆ ಅವನನ್ನು ಹೊರ ದೂಡುತ್ತಾಳೆ. ಆದರೆ ಕ್ಲೀಷೆ ಆಪದ್ಬಂಧು. ನಮ್ಮ ತಲೆ ಬರಿದಾದಂತೆಲ್ಲಾ ಅದರ ಸ್ನೇಹ ಮತ್ತಷ್ಟು ಸ್ನಿಗ್ಧವಾಗುತ್ತದೆ.

ಆದರೇನು! ನಾವು ಕ್ಲೀಷೆಗೆ ಬಹಿಷ್ಕಾರ ಹಾಕಿ ಗೆಲ್ಲುವಂತಿಲ್ಲ. ಒಂದಲ್ಲ ಒಂದು ಸಮಯದಲ್ಲಿ ಎಲ್ಲರೂ—ಅದಕ್ಕೆ ಬಹಿಷ್ಕಾರ ಹಾಕಬೇಕೆ ನ್ನುವವರೂ ಕೂಡ—ಕ್ಲೀಷೆಯನ್ನು ಉಪಯೋಗಿಸದಿರಲಾಗುವುದಿಲ್ಲ. ಅದಿಲ್ಲದಿದ್ದರೆ ಅನೇಕ ವೃತ್ತ ಪತ್ರಿಕೆಗಳು ದಿವಾಳಿಯೆದ್ದು ಹೋಗಬಹುದು; ಭಾಷಣಕಾರರ ಸ್ವರ ಉಡುಗಿ ಹೋದೀತು; ವಿಮರ್ಶಕರ ಲೇಖನಿ ನಿಂತು ಹೋದೀತು. ಸ್ವತಃ ಯೋಚನೆ ಮಾಡುವ ಶಕ್ತಿಯಿಲ್ಲದವರಿಗೆ, ಶಕ್ತಿ ಯಿದ್ದರೂ ಅಲಸರಾದವರಿಗೆ, ಯೋಚನೆಗೆ ವ್ಯವಧಾನವಿಲ್ಲದಿದ್ದರೂ ಭಾಷಣ ಮಾಡುವ ಅಥವಾ ಬರೆಯುವ ಚಟವಿರುವವರಿಗೆ, ಇದು ನಿರಾಯಾಸವಾಗಿ ದೊರಕುವ ನಿಧಿ. ಎಂಥ ಉನ್ನತಮಟ್ಟದ ಕವಿಗಳ ಶಕ್ತಿಯುತವಾದ

ವಾಕ್ಯಗಳನ್ನಾದರೂ ನಾವು ಬಳಸಿ ಬಳಸಿ ಕ್ಲೀಷೆಗೆ ಪರಿವರ್ತನೆಮಾಡಿ ಕೊಳ್ಳಬಹುದಾದ್ದರಿಂದ ಈ ನಿಧಿ ಕರಗುವಂತಿಲ್ಲ.]

ಪ್ರಶ್ನೆ: ನೀವು ಕ್ಲೀಷೆಯಲ್ಲಿ ಪ್ರವೀಣರೆಂದು ಹೆಸರು ಪಡೆದಿದ್ದೀರಲ್ಲವೆ ?

ಉತ್ತರ: ಹೌದು. ಪ್ರವೀಣರ ಸ್ಥಾನಮಾನಗಳು ನನಗೆ ಸಲ್ಲುತ್ತವೆ.

ಪ್ರ: ಬಹಳ ಸಂತೋಷ. ನಿಮ್ಮಿಂದ ಸಾಹಿತ್ಯ ಸಮಾರಂಭದ ವರದಿ ಯೊಂದನ್ನು ಕೇಳಬೇಕು.

ಉ: ಅಗತ್ಯವಾಗಿ ಆಗಬಹುದು.

ಪ್ರ: ಮೊನ್ನೆ ತಾನೆ ನಾಡಹಬ್ಬಕ್ಕಾಗಿ ಬಂದಿದ್ದ ಲೇಖಕರ....

ಉ: ಕ್ಷಮಿಸಿ. ಆಗಮಿಸಿದ್ದವರು ಲೇಖಕರಲ್ಲ; ಸುಪ್ರಸಿದ್ಧ ಸಾಹಿತಿಗಳು.

ಪ್ರ: 'ಲೇಖಕರು' ಎಂದದ್ದು ತಪ್ಪಾಯಿತೆ ?

ಉ: ಕ್ಲೀಷಾ ಪ್ರಪಂಚದಲ್ಲಿ ಕೇವಲ ಲೇಖಕರಾದವರು ಇಲ್ಲವೇ ಇಲ್ಲ.

ಪ್ರ: ಒಪ್ಪಿದೆ. ಆ ಸಾಹಿತಿಗಳ ಗೌರವಾರ್ಥವಾಗಿ....

ಉ: ಒಂದು ಸತ್ಕಾರಕೂಟವನ್ನು ಏರ್ಪಡಿಸಿತ್ತು.

ಪ್ರ: ತಿಂಡಿತೀರ್ಥದ ವ್ಯವಸ್ಥೆಯಾಗಿದ್ದಿರಬೇಕು ಅಲ್ಲವೆ ?

ಉ: 'ಉಪಾಹಾರದ ವ್ಯವಸ್ಥೆ' ಎಂದು ಹೇಳಿ. 'ವರುಣ ಕೆಫೆ'ಯವರು ಉಪಾಹಾರದ ವ್ಯವಸ್ಥೆ ಮಾಡಿದ್ದರು.

ಪ್ರ: ಎಂಥ ಉಪಾಹಾರ ?

ಉ: ವೃತ್ತಪತ್ರಿಕೆ ಓದುವ ಅಭ್ಯಾಸವಿದ್ದಿದ್ದರೆ ನೀವು ಈ ಪ್ರಶ್ನೆ ಕೇಳುತ್ತಿರ ಲಿಲ್ಲ. ಶುಚಿ ರುಚಿಯಾದ, ಹಿತಮಿತವಾದ, ಉಪಾಹಾರ.

ಪ್ರ: ಹಿತವಂತೂ ಸರಿಯೆ; ಮಿತವೇಕಾಯಿತು ? ಅತಿಥಿಗಳ ಜೀರ್ಣ ಶಕ್ತಿಯ ವಿಷಯದಲ್ಲೇನಾದರೂ ಸಂದೇಹವೆ, ಅಥವಾ ರೇಷನ್ ಕಾಲವೆಂದೆ ?

ಉ: ಛೇ ಛೇ ! ಹಾಗೆಲ್ಲಾ ಕೇಳಹೊರಟರೆ 'ಶುಚಿ ರುಚಿ' ಎಂದದ್ದಕ್ಕೂ ಅರ್ಥ ಕಲ್ಪಿಸಬೇಕಾದೀತು. ಹಿತಮಿತವಾದದ್ದು ಪ್ರಾಸಕ್ಕಾಗಿ.

ಪ್ರ: ಉಪಾಹಾರವಾದ ನಂತರ ?

ಉ: ಬಹಿರಂಗ ಸಭೆ. ಕ. ಸಾ. ಪರಿಷತ್ತಿನ ಸಭಾಂಗಣದಲ್ಲಿ.

ಪ್ರ: ಸುಮ್ಮನೆ 'ಸಭಾಂಗಣ' ಎಂದರೆ ಸಾಕೆ ?

ಉ: ನಿಮ್ಮ ಆಕ್ಷೇಪಣೆ ಸಾಧುವಾದದ್ದೇ. ಸುಸಜ್ಜಿತವಾದ ಸಭಾಂಗಣ.

ಪ್ರ: ಬಹಳ ಜನ ಸೇರಿದ್ದರೋ ?

ಉ: ನಗರದ, ನಮ್ಮ ಕಲ್ಯಾಣ ನಗರದ ಸಾಹಿತಿಗಳೆಲ್ಲರೂ ನೆರೆದಿದ್ದರು.

ಸಭಾಂಗಣ ಕಿಕ್ಕಿರಿದಿತ್ತು ಎಂದರೂ ಎನ್ನಬಹುದು.

ಪ್ರ: ಮುಖ್ಯ ಅತಿಥಿಗಳು ಹೊತ್ತಿಗೆ ಸರಿಯಾಗಿ ಬಂದರು, ಅಲ್ಲವೇ ?

ಉ: ಮಾನ್ಯ ಅತಿಥಿಗಳು ಎನ್ನಬೇಕು. ಮಾನ್ಯ ಅತಿಥಿಗಳು ಸಕಾಲಕ್ಕೆ ಸರಿಯಾಗಿ ಆಗಮಿಸಿದರು.

ಪ್ರ: ಅಧ್ಯಕ್ಷರ ವಿಷಯ ಹೇಳುವುದೇನೂ ಇಲ್ಲವೆ ?

ಉ: ಅಧ್ಯಕ್ಷರು—ಒಂದು ಮಾತಿನಲ್ಲಿ ಹೇಳಬಹುದಾದರೆ—ಕರ್ಣಾಟಕ ಮಾತೆಯ ಕಿರೀಟದಲ್ಲಿ ನಾಯಕಮಣಿ ಎನ್ನಬಹುದಾದ ಸಂಡೂರು ಗೋವಿಂದ ಕೃಷ್ಣಪ್ಪ ರೈಯವರು. ಆ ದಿನದ ಮುಖ್ಯ ಮಾನ್ಯ ಅತಿಥಿಗಳಾದ ಸುಪ್ರಸಿದ್ಧ ಸಾಹಿತಿ ಎಲೆಗಾನಹಳ್ಳಿ ಕಶ್ಚಿತ್ತಾಯ ಕುಣಜಗಿಯವರೊಡನೆ....

ಪ್ರ: ಕಾರಿನಲ್ಲಿ ?

ಉ: ಅಷ್ಟು ಹೇಳಿದರೆ ಸಾಲದು. M Y Z 1878 ನಂಬರುಳ್ಳ ಮರೂನ್ ಬಣ್ಣದ ಪೋಂಟಿಯಾಕ್ ಕಾರಿನಲ್ಲಿ ಆಗಮಿಸಿದರು.

ಪ್ರ: ಸಭೆ ಆರಂಭವಾದ ಬಗೆಯನ್ನು ವರ್ಣಿಸುವಿರಾ ?

ಉ: ಅಧ್ಯಕ್ಷರು ಪೀಠದಲ್ಲಿ ಮಂಡಿಸಿದ ಮೇಲೆ....

ಪ್ರ: ಅಗ್ರಾಸನವನ್ನು ಅಲಂಕರಿಸಿದ ಮೇಲೆ ಎನ್ನಬಹುದಲ್ಲವೆ ?

ಉ: ಧಾರಾಳವಾಗಿ. ಅಧ್ಯಕ್ಷರು ಅಗ್ರಾಸನವನ್ನು ಅಲಂಕರಿಸಿದಮೇಲೆ....

ಪ್ರ: 'ಪ್ರೇಕ್ಷಕವೃಂದದ ಕರತಾಡನಗಳ ಮಧ್ಯೆ' ಎಂದು ಸೇರಿಸಬೇಕಲ್ಲವೆ ?

ಉ: ನ್ಯಾಯ ! ನೀವೇನೂ ಕ್ಲೀಷೆಗೆ ಹೊಸಬರಲ್ಲ ! ಸರಿಯೆ....ಆ ರೀತಿ ಅಗ್ರಾಸನವನ್ನು ಅಲಂಕರಿಸಿದ ಮೇಲೆ ಗಮಕಕಲಾನಿಧಿ, ಕನ್ನಡ ಕೃತಿಸಂಗೀತೆ....

ಪ್ರ: ಹಾಗೆಂದರೆ ?

ಉ: 'ಶ್ಲೋಕ ಸಂಗೀತ' ಇತಿವತ್.

ಪ್ರ: ಓಹೋ ಸರಿ, ಸರಿ ! ಅವರಿಂದ ಪ್ರಾರ್ಥನೆಯಾಯಿತಲ್ಲವೆ ?

ಉ: ಅಷ್ಟು ಸುಲಭವಲ್ಲ, ವರದಿಮಾಡುವುದು. ಮೇಲೆ ಹೇಳಿದಂತೆ ಕನ್ನಡ ಕೃತಿಸಂಗೀತೆ ಇತ್ಯಾದಿ ಬಿರುದಾಂಕಿತರಾದ ಕುಮಾರಿ ಪದ್ಮ ಅವರು....

ಪ್ರ: ತಮ್ಮ ಸುಶ್ರಾವ್ಯವಾದ ಕಂಠದಲ್ಲಿ ?

ಉ: ಭೇಷ್ ! ತಮ್ಮ ಸುಶ್ರಾವ್ಯವಾದ ಕಂಠದಲ್ಲಿ "ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು" ಮತ್ತು "ರಕ್ಷಿಸು ಕರ್ಣಾ-ಟಕ

ಮಾತೆ" ಎಂಬ ಕೃತಿಗಳನ್ನು ಗಾನಮಾಡಿದರು.

ಪ್ರ : ಆಗ ಸಭಿಕರ ಬಗೆ ಹೇಗಿತ್ತು ?

ಉ : ಸಭಿಕರು ? ಆ ಪದ ಅಷ್ಟೇನೂ ಉಪಯೋಗಾರ್ಹವಲ್ಲ. ಶ್ರೋತೃ ವೃಂದದ ವಿಷಯ ತಾನೆ, ನೀವು ಕೇಳುತ್ತಿರುವುದು ? ಶ್ರೋತೃ ವೃಂದವೆಲ್ಲಾ ಆನಂದಸಾಗರದಲ್ಲಿ ಅಥವಾ ಗಾನಸುಧಾಂಬುಧಿಯಲ್ಲಿ ಮುಳುಗಿತ್ತು.

ಪ್ರ : 'ತೇಲಿತ್ತು' ಎಂದರೂ ಎನ್ನಬಹುದಲ್ಲವೆ ?

ಉ : ಕ್ಲೀಷೆಯಲ್ಲಿ ತೇಲುವುದಕ್ಕೂ ಮುಳುಗುವುದಕ್ಕೂ ಅಷ್ಟೇನೂ ವ್ಯತ್ಯಾಸವಿಲ್ಲ. ಇಷ್ಟಕ್ಕೂ ಮುಳುಗಿದವರು ಸ್ವಲ್ಪ ಹೊತ್ತಾದಮೇಲೆ ತೇಲಲೇ ಬೇಕಷ್ಟೆ !

ಪ್ರ : ಅಲ್ಲವೆ ! ಅನಂತರ ?

ಉ : ಕನ್ನಡಮಾತೆಯ ಸ್ತುತಿಗಾನವಾದ ನಂತರ ಕರ್ಣಾಟಕದ ವಿವಿಧ ಭಾಗಗಳಿಂದ ನಾಯಕರೂ ಸಚಿವಶ್ರೇಷ್ಠರೂ ದಯಪಾಲಿಸಿದ್ದ ಶುಭ ಸಂದೇಶಗಳನ್ನು ಪಠಿಸಿದರು.

ಪ್ರ : ಅವರೆಲ್ಲಾ ಬರಲಿಲ್ಲವೇಕೆ ?

ಉ : ಕಾರ್ಯಗೌರವದಿಂದ. ಸಮಾರಂಭಕ್ಕೆ ಆಗಮಿಸಿ ಅದರಲ್ಲಿ ಭಾಗಿಗಳಾಗುವ ಸುಯೋಗ ತಮಗೆ ದೊರಕಲಿಲ್ಲವೆಂದೂ, ಸಮಾರಂಭ ಯಶಸ್ವಿಯಾಗಲೆಂದೂ ಸಂದೇಶವನ್ನು ದಯಪಾಲಿಸಿದ್ದರು. ಅನಂತರದಲ್ಲಿ ಪರಿಚಯ ಭಾಷಣ.

ಪ್ರ : ಟಿ. ವಿ. ನರಸಿಂಹಯ್ಯನವರಲ್ಲವೆ ಪರಿಚಯ ಮಾಡಿಕೊಟ್ಟವರು ?

ಉ : ಶಾಂತಂ ಪಾಪಂ ! ತೊ. ವೆ. ನರಸಿಂಹಯ್ಯನವರು ಎಂದು ಹೇಳಿ. ಅಥವಾ ಹಾಗೆ ಹೇಳಿದರೂ ಸಾಲದು. ಅವರ ಹೆಸರಿಗೆ ಕತ್ತರಿ ಪ್ರಯೋಗಮಾಡುವುದು ಉಚಿತವಲ್ಲ. ತೊಂಡೆಬಾವಿ ವೆಂಕಪ್ಪಯ್ಯ ನರಸಿಂಹಯ್ಯನವರು ಮಾನ್ಯ ಅತಿಥಿಗಳ ಪರಿಚಯ ಮಾಡಿಕೊಟ್ಟರು.

ಪ್ರ : ಹೇಗೆ ?

ಉ : ಸೂಕ್ತರೀತಿಯಲ್ಲಿ.

ಪ್ರ : ಸ್ವಲ್ಪ ವಿವರಗಳನ್ನು ಕೊಡಬಾರದೆ ?

ಉ : "ಶ್ರೀ ಎಲೆಗಾನಹಳ್ಳಿ ಕಕ್ಷಿತ್ತಾಯ ಕುಣಜಗಿಯವರ ಪರಿಚಯ ಮಾಡಿಕೊಡುವುದು ತೀರ ಅನವಶ್ಯಕ; ದಾರ್ಷ್ಟ್ಯವೆಂದರೂ ಎನ್ನ

ಬಹುದು. ಶ್ರೀಯುತರು...."

ಪ್ರ : "ಈಗಾಗಲೇ ಅನೇಕ ಪುಸ್ತಕಗಳನ್ನು....?"

ಉ : "ಈಗಾಗಲೇ" ಎನ್ನುವುದೇನೋ ಸರಿಯೆ. ಆದರೆ 'ಅನೇಕ' ಎಂಬ ಪದ ಹೊಂದುವುದಿಲ್ಲ. 'ಹಲವಾರು' ಎನ್ನಿ.

ಪ್ರ : ಸರಿಯೆ. ಈಗಾಗಲೇ ಹಲವಾರು ಪುಸ್ತಕಗಳನ್ನು....

ಉ : ಪುಸ್ತಕಗಳೆ ? ಕ್ಲೀಷೆಯಲ್ಲಿ ಪುಸ್ತಕಗಳಿಲ್ಲ. "ಈಗಾಗಲೇ ಹಲವಾರು ಅಮರವಾದ ಕಲಾಕೃತಿಗಳನ್ನು ಕನ್ನಡಮಾತೆಗೆ ಕಾಣಿಕೆಯಾಗಿ ಅರ್ಪಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂತತವಾಗಿ...."

ಪ್ರ : "ದುಡಿದು ಕನ್ನಡಮ್ಮನ ಸೇವೆ ಮಾಡಿದ್ದಾರೆ."

ಉ : ಭಲೆ ! ಭಲೆ ! ದುಡಿದು ! ಕನ್ನಡಮ್ಮನ ಸೇವೆ ! ನೀವು ಕ್ಲೀಷೆಯ ವಿಷಯ ಕಲಿಯಬೇಕಾದ್ದು ಹೆಚ್ಚೇನೂ ಉಳಿದಿಲ್ಲ. "ಹೀಗೆ ಸೇವೆ ಮಾಡಿ ಶ್ರೀಯುತರು ಕನ್ನಡಿಗರನ್ನೆಲ್ಲಾ ಚಿರಋಣಿಗಳನ್ನಾಗಿ ಮಾಡಿದ್ದಾರೆ. ಅವರ 'ಕೆಂಪು ಕಸೂತಿ' ಅಥವಾ 'ಅತ್ತೆಯ ಅಡಿಟ್' ಎಂಬ ಕಾದಂಬರಿ...."

ಪ್ರ : ಅದು ನಾಟಕವಲ್ಲವೇ ?

ಉ : ಇರಬಹುದು. ಆ ವಿಷಯ ನನಗೆ ಪ್ರಕೃತವಲ್ಲ. ನಾನೇನು ಪಾಠಕ ಮಹಾಶಯ ಕೆಟ್ಟುಹೋದೆನೆ ! "ಆ ಕಾದಂಬರಿಯನ್ನು ಓದಿ ಆನಂದಿಸದ ಕನ್ನಡಿಗನೇ ಇಲ್ಲವೆಂದು ಮುಕ್ತಕಂಠರಾಗಿ ಹೇಳಬಹುದು. ಅದರ ಯಾವುದೊಂದು ಬಂಧ, ಒಂದು ರಚನೆ, ಒಂದು ತಂತ್ರ ; ಶೈಲಿಯ ಓಜಸ್ಸು, ತೇಜಸ್ಸು, ಗಾಂಭೀರ್ಯ; ಪಾತ್ರನಿರೂಪಣೆಯಲ್ಲಿ ಎದ್ದು ತೋರುವ ಒಂದು ವೈಶಿಷ್ಟ್ಯ, ಒಂದು ವೈವಿಧ್ಯ ; ಪಾತ್ರಗಳ ಓರೆಕೋರೆಗಳ, ಏರುಪೇರುಗಳ ಪೃಥಕ್ಕರಣ ; ಗ್ರಂಥದಲ್ಲಿ ಕಂಡುಬರುವ ಒಂದು ಬುನಾದಿ...."

ಪ್ರ : ಅಂದರೆ ?

ಉ : ನಾನೇನು ಕ್ಲೀಷಾಪ್ರವೀಣನೋ, ನಿಘಂಟೋ ?

ಪ್ರ : ಹೋಗಲಿ ಬಿಡಿ. ಕೋಪಿಸಬೇಡಿ. ಒಟ್ಟಿನಲ್ಲಿ ಏನು ಹೇಳಿದ ಹಾಗಾಯಿತು ?

ಉ : ಹಾಗೆ ಬನ್ನಿ. ಒಟ್ಟಿನಲ್ಲಿ ಹೇಳಬಹುದಾದರೆ, ಇಂಗ್ಲಿಷಿನಲ್ಲೂ ಫ್ರೆಂಚಿನಲ್ಲೂ ಹೇಳುವಂತೆ ಒಂದು 'toute ensemble'—ಇವು ಕನ್ನಡಿಗರ ಮನಸ್ಸನ್ನು ಸೂರೆಗೊಂಡಿವೆ.

ಪ್ರ : ಇತ್ಯಾದಿ ಎಂದು ಹೇಳಿ ಮುಂದುವರಿಯಬಹುದಲ್ಲವೇ ?
ಉ : ಕ್ಲೀಷೆಯ ಸಂಪ್ರದಾಯ ನಿಮಗೆ ಗೊತ್ತಿಲ್ಲ. ಹೋಗಲಿ, ಮುಂದುವರಿಯೋಣ. "ಹೀಗೆ ತಾಯ್ನಾಡಿಗಾಗಿ ಅವಿಶ್ರಾಂತರಾಗಿ ದುಡಿದ ಶ್ರೀಯುತ ಕುಣಜಗಿಯವರ...."
ಪ್ರ : ಎಲೆಗಾನಹಳ್ಳಿ ಕಸ್ತೂರಿತ್ತಾಯ ಕುಣಜಗಿಯವರ ?
ಉ : ತಪ್ಪಿದೆ; ಹಾಗೇ ಹೇಳಬೇಕಾಗಿತ್ತು. ಅವರ ಪರಿಚಯವಾದನಂತರ ಶ್ರೀ ಎಲೆಗಾನಹಳ್ಳಿಯವರು....
ಪ್ರ : ಪುನಃ ಕರತಾಡನಗಳ ಮಧ್ಯೆ ?
ಉ : ಅಲ್ಲವೆ ಮತ್ತೆ ? ಎದ್ದು ತಮ್ಮ ಅಮೋಘವಾದ....
ಪ್ರ : ಉಜ್ವಲವಾದ ?
ಉ : ಒಪ್ಪಿದೆ....ತಮ್ಮ ಅಮೋಘವಾದ, ಉಜ್ವಲವಾದ, ವಿಚಾರಪರಿಪ್ಲುತವಾದ ಭಾಷಣವನ್ನು ಆರಂಭಿಸಿದರು.
ಪ್ರ : ಭಾಷಣ ಪ್ರಾರಂಭವಾದಾಗಲೇ ಅದು ಉಜ್ವಲವೆಂದು ತಿಳಿಯಿತೆ?
ಉ : ಸುಪ್ರಸಿದ್ಧ ಸಾಹಿತಿಯಾದವರು ಉಜ್ವಲವಲ್ಲದ ಭಾಷಣ ಮಾಡುವುದುಂಟೆ ?
ಪ್ರ : ಯಾವ ವಿಷಯ ಮಾತಾಡಿದರು ?
ಉ : ತಾಯ್ನಾಡು, ತಾಯ್ನುಡಿಗಳಿಗೆ ಸಂಬಂಧಪಟ್ಟ ಗಹನವಾದ ಜಟಿಲವಾದ ಸಮಸ್ಯೆಗಳ ವಿಷಯ.
ಪ್ರ : ಭಾಷಣದ ರೀತಿ ?
ಉ : ತಮ್ಮದೇ ಆದ, ತಮ್ಮ ಪ್ರತಿಭೆಗೆ ಸಹಜವೇ ಆದ ರೀತಿ.
ಪ್ರ : ಮಾತಿನ ಸರಣಿಯೊ ?
ಉ : ಪುಂಖಾನುಪುಂಖವಾಗಿತ್ತು. ಸಾಮ್ಯವೊಂದನ್ನು ಕೊಡಬಹುದಾದರೆ ಜೋಗದ ಜಲಪಾತದಂತಿತ್ತು.
ಪ್ರ : ಬಹಳ ವಿದ್ವತ್ಪೂರಿತವಾದ ಭಾಷಣವಿರಬೇಕು.
ಉ : ವಿದ್ವತ್ತೂ ಸಾರಳ್ಯವೂ ಬೆರೆದಿದ್ದವು.
ಪ್ರ : ಬೆರೆದ ರೀತಿ ?
ಉ : ಓತಪ್ರೋತವಾಗಿ.
ಪ್ರ : ಭಾಷಣದ ಸಾರಾಂಶ ಹೇಳುವಿರಾ ?
ಉ : ಅವರು ಶ್ರೋತೃವೃಂದವನ್ನು "ಕನ್ನಡಮ್ಮನ ಒಲವಿನ ಮಕ್ಕಳೇ, ಕನ್ನಡದ ಅಕ್ಕತಂಗಿಯರೇ, ಅಣ್ಣತಮ್ಮಂದಿರೇ" ಎಂದು ಸಂಬೋಧಿ

ಸಿದರು. ಅನಂತರ ತಾವು ಅಂದು ಪಡೆದ ಗೌರವಕ್ಕೆ ಸರ್ವಥಾ ಅನರ್ಹರೆಂದೂ, ಅದು ಕನ್ನಡಿಗರ ಹುಟ್ಟುಗುಣವಾದ, ಕನ್ನಡ ಸಂಸ್ಕೃತಿಗೆ ಸಹಜವಾದ ಅಭಿಮಾನದ ಕುರುಹು ಮಾತ್ರವೆಂದೂ ನುಡಿದರು. ತಾವೇನೋ ಹಲವಾರು ಕೃತಿಗಳನ್ನು ರಚಿಸಿರಬಹುದು; ಕನ್ನಡಿಗರ ಪದತಲವಲ್ಲಿ ಅರ್ಪಿಸಿರಬಹುದು. ಅದನ್ನು ಹಲವಾರು ಜನ ನುರಿತ ವಿಮರ್ಶಕರು, ಸಹೃದಯರು, ಅಮರವಾದ ಕಲಾಕೃತಿಗಳೆಂದು ಹೊಗಳಿಯೂ ಇರಬಹುದು. ಆ ಮಾತನ್ನು ತಾವೇ ಹೇಳಿಕೊಳ್ಳುವುದು ಯುಕ್ತವಲ್ಲ. ನಿಜವಾಗಿ ನೋಡಿದರೆ ಆ ಕೃತಿಗಳೆಂಥವು? ತಾವು ಮೊದಲು ತಾಯಿ ಹಾಲ ಕುಡಿದು ಲಲ್ಲೆಯಿಂದ ತೊದಲಿದ ನಾಲ್ಕು ಮಾತು! ಕನ್ನಡಮ್ಮನ ಅಡಿದಾವರೆಯಲ್ಲಿ ಅರ್ಚಿಸಿದ ತುಂಬೆಯ ಹೂವು! ಕನ್ನಡಮಾತೆಯೂ ಆಕೆಯ ಅಣುಗರೂ ಆ ಕಾಣಿಕೆಯನ್ನು ಔದಾರ್ಯದಿಂದ ಸ್ವೀಕರಿಸಿದರೆಂದರೆ ತಮಗೆ ಅದೊಂದು ಹೆಮ್ಮೆಯ ವಿಷಯ. ಈಗಲಾದರೋ ನಮಗೆ ಸ್ವಾತಂತ್ರ್ಯ ಬಂದಿದೆ.

ಪ್ರ : ಆ ರಹಸ್ಯವನ್ನೂ ಬಯಲಿಗೆಳೆದುಬಿಟ್ಟರೆ?

ಉ : ತೆರೆದ ಮನಸ್ಸಿನಿಂದ ಮಾತಾಡುತ್ತಿದ್ದರು ನೋಡಿ....ಈಗ ನಮಗೆ ಸ್ವಾತಂತ್ರ್ಯ ಬಂದಿದೆ. ಆದರೇನು! ಕಾವೇರಿಯಿಂದಮಾ ಗೋದಾವರಿವರೆಗಿರ್ದ ನಮ್ಮ ಈ....

ಪ್ರ : ಪೊನ್ನಾಡು, ಈ ಸೊಗಸಿನ ಬೀಡು, ಈಗ ಹರಿದು ಹಂಚಿಹೋಗಿದೆ, ಅಲ್ಲವೇ?

ಉ : ಭೇಷ್, ಭಲೆ! ನಮ್ಮ ಕವಿಚಕ್ರವರ್ತಿಗಳು ಹೇಳಿದಂತೆ "ಪೂತು, ಮಝು, ಭಾಪು!" ಕ್ಲೀಷಾಪ್ರವೀಣನ ಸ್ಥಾನವನ್ನು ನಾನು ನಿಮಗೆ ಬಿಟ್ಟುಕೊಡಬೇಕಾಗುತ್ತೆ. ಹೌದು, ನಮ್ಮ ಈ ನಾಡು ಹರಿದು ಹಂಚಿಹೋಗಿದೆ. ಆದ್ದರಿಂದ ಸಿರಿಗನ್ನಡದ ಡಿಂಗರಿಗರೆಲ್ಲರೂ ಹುರಿದುಂಬಿ ಏಳಬೇಕು, ಮತ್ತೆ ಬಾಳಬೇಕು. ಬೆಚ್ಚದೆಯೆ ಬೆದರದೆಯೆ ಮುನ್ನುಗ್ಗಬೇಕು. ಯಾವ ತೊಡರು ಬಂದರೇನು: ಈಸಬೇಕು, ಇದ್ದು ಜೈಸಬೇಕು. ಏಳ್, ಬಾಳ್ ಎಂಬುದೆ ನಮ್ಮ ತಾರಕ ಮಂತ್ರ!

ಪ್ರ : ನಮ್ಮ ಸಾಹಿತ್ಯದ ವಿಷಯ ಏನೂ ಹೇಳಲಿಲ್ಲವೆ?

ಉ : ಹೇಳದೆ ಉಂಟೆ! ಸಭೆಗೆ ಸಾಹಿತ್ಯದ ರಸದೌತಣವನ್ನೇ ಕೊಟ್ಟರು. ಕನ್ನಡ ಸಾಹಿತ್ಯದಲ್ಲಿ ಈಗ....

ಪ್ರ : ನವೋದಯವಾಗಿದೆ, ಅಲ್ಲವೆ ?

ಉ : ಸತ್ಯ, ನವೋದಯವಾಗಿದೆ. ಕಡಲ ರಾಣಿ ಕೊಟ್ಟ ಕಾಣಿಕೆಯಿಂದ ನಮ್ಮಲ್ಲಿ ಹೊಸ ಹುಟ್ಟು ಕಾಣುತ್ತಿದೆ; ಹೊಸ ಹುರುಪು ಬಂದಿದೆ. ನಿದ್ರಿಸುತ್ತಿದ್ದ ತಾಯಿ ಈಗ ಎಚ್ಚರಗೊಂಡಿದ್ದಾಳೆ. ಕನ್ನಡ ಕೋಗಿಲೆಯ ಕೂಜನ ನಾಡಿನ ಕುಂಜ ಕುಂಜದಲ್ಲಿಯೂ ಮರುದನಿ ಕೊಡುತ್ತಿದೆ.

ಪ್ರ : ಕವಿವಾಣಿಯನ್ನೇನಾದರೂ ನೆನಪಿಗೆ ತಂದರೋ ?

ಉ : ನೆನಪಿಗೆ ತರಲಿಲ್ಲ, ಉದ್ಧರಿಸಿದರು. ಶ್ರೀಕಂಠಯ್ಯನವರ ಕಂಠಶ್ರೀ ಯನ್ನು ನೆನೆದರು. "ಅವಳ ತೊಡಿಗೆಯಿವಳಿಗಿಟ್ಟು ನೋಡಬಯಸಿದೆ." "ಓ ತಾಯೆ, ನಮ್ಮಮ್ಮ, ದೇವಿ, ಸಾಮ್ರಾಜ್ಞಿ," ಯಾರವ್ವ ನೀ ತಾಯಿ?, "ಬಾರಮ್ಮ ಹರಸು" ಮುಂತಾದ ಪಂಕ್ತಿಗಳು; "ಎಂಥ ನಾಡಿದು ಎಂಥ ಕಾಡಾಯಿತೋ" ಎಂಬ ನೊಂದ ನುಡಿ; "ತಾಯೆ ಬಾರ ಮೊಗವ ತೋರ" ಎಂಬ ಬೇಡಿಕೆ; ರತ್ನನಿಗೆ ಕನ್ನಡ ಪದ್ಗೋಳ ಹಾಡುವುದರಲ್ಲಿದ್ದ ಉತ್ಸಾಹ—ಇದೆಲ್ಲವನ್ನೂ ಉದ್ಧರಿಸಿದರು.

ಪ್ರ : ಭಾಷಣ ಮುಗಿದ ರೀತಿ ?

ಉ : ಅದನ್ನು ಈರೀತಿ ಮುಕ್ತಾಯಗೊಳಿಸಿದರು : "ಏಳ್ ಕನ್ನಡತಾಯ್! ಸಿರಿಗನ್ನಡಂ ಗೆಲ್ಗೆ ಎಂಬ ವೀರಘೋಷ ಕನ್ನಡ ನಾಡಿನ ಆದ್ಯಂತದಲ್ಲೂ ಮೊಳಗಲಿ! ಹಿರಿಯ ಸಾಹಿತಿಗಳು ಹೊತ್ತಿಸಿಟ್ಟ ನಂದಾದೀಪ ನಾಡಿನ ಮೂಲೆ ಮೂಲೆಯಲ್ಲೂ ಬೆಳಗಲಿ! ತಾಯ ಸೇವೆಗೆ ಎಲ್ಲರೂ ನಡುಕಟ್ಟಲಿ! ಈಗ ಕನ್ನಡ ಅಣುಗರಾದವರು ನಾಳೆ ಕನ್ನಡ ಕಾವರಾಗಲಿ! ಈಗ ಕನ್ನಡ ಕಾವರಾದವರು ನಾಳೆ ಕನ್ನಡ ಜಾಣರಾಗಲಿ! ಯಾವ ನಾಡು ಪಂಪ, ರನ್ನ ಕುಮಾರವ್ಯಾಸರಂಥ ಕವಿ ಚಕ್ರವರ್ತಿಗಳಿಗೆ ಜನ್ಮ ಕೊಟ್ಟಿತೋ, ಯಾವ ನಾಡಿನಲ್ಲಿ ಜಕ್ಕಣನಂಥ ಶಿಲ್ಪಿಗಳು ಉದಿಸಿದರೋ, ಯಾವ ನಲುನಾಡನ್ನು ಕಾವೇರಿ ಗೋದೆಯರು ಮೈ ತೊಳೆವರೊ, ಆರಂಕುಸವಿಟ್ಟೊಡಂ ಯಾವ ನಾಡನ್ನು ನೆನೆಯದಿರಲಾಗದೋ ಅಂತಹ ಈ ನಾಡು, ಗಂಧದ ಗುಡಿಯಾದ ಈ ನಾಡು, ಚಿನ್ನದ ಬಸಿರಿನ ನಾಡು,

ಪಡುಗಡಲ ತೆರೆ ಬಂದು ಅಪ್ಪಿ ಮುದ್ದಿಪ ನಾಡು,
ತೆಂಗುಗರಿ ಕೊಡೆವಿಡಿವ....

ಪ್ರ : (ಆರ್ತನಾಗಿ ಅಂಗಲಾಚುತ್ತಾ) ಸಾಕು, ಸಾಕು, ಮಹಾರಾಯಾ !

ಉ : ಚೆನ್ನಾಯಿತು! ಇದೇನು ಕ್ಲೀಷೆಯೋ ಮಷ್ಕಿರಿಯೋ ! ನೋಡಿದಿರಾ, ನೀವು ರೇಗಿಸಿದ್ದರಿಂದ ನಾನು ಕ್ಲೀಷೆಯನ್ನು ಮರೆತು ಎಲ್ಲ ಜನ ರಂತೆಯೇ ಮಾತಾಡಿಬಿಟ್ಟೆ. ಶಾಂತಂ ಪಾಪಂ ! ಪ್ರತಿಹತವು ಮಂಗಳಂ ! ನೀವಾಗಿಯೇ ವರ್ಣಿಸು ಎಂದು ಬೇಡಿ ಈಗ ಬೇಡ ವೆಂದರಾದೀತೆ ! ಕೇಳಿ :

ಪಡುಗಡಲ ತೆರೆ ಬಂದು ಅಪ್ಪಿ ಮುದ್ದಿಪ ನಾಡು
ತೆಂಗುಗ....

(ಪ್ರಶ್ನೆ ಕೇಳುವವನು ದಿಗ್ಭ್ರಾಂತನಾಗಿ ಎಡವುತ್ತ, ತಡವುತ್ತ, ಮುಗ್ಗರಿಸುತ್ತ ಓಡಿಹೋಗುತ್ತಾನೆ.)

## ವ್ಯಾಘ್ರಗೀತೆ

"ಎಲೆ ಬೆಕ್ಕೆ ರೂಪಿನಿಂದಲೆ ಹುಲಿಯ ಜಾತಿಗೆ ಸೇರ್ದೆನೆಂದು ಗರ್ವಿಸ ಬೇಡ" ಎಂದು ಬರೆದ ಕವಿಯ ವಿಷಯದಲ್ಲಿ ನನಗೆ ಬಹಳ ಗೌರವವುಂಟು. ಆತ ಹುಲಿಯನ್ನು ಕೇವಲ ಹಿಂಸ್ರಪಶುವೆಂದು ತಿರಸ್ಕರಿಸಲಿಲ್ಲ. ಅದರ ಜಾತಿಗೆ ಸೇರುವುದು ಹೆಮ್ಮೆಯ ವಿಷಯವೆಂದು ಮನಗಂಡಿದ್ದನು. ಆದರೆ ಈ ಸೂಕ್ಷ್ಮಬುದ್ಧಿಯ ಕವಿಯೂ ಕೂಡ ಹುಲಿಯ ಬಲುಮೆಯನ್ನು ಹೊಗಳಿದನೇ ಹೊರತು ಆ ಪ್ರಾಣಿಯಲ್ಲಿರುವ ಇತರ ಸದ್ಗುಣಗಳನ್ನು ಕಾಣಲಾರದೆ ಹೋದ. ಹುಲಿ ಪ್ರಾಣಿಗಳನ್ನು ಕೊಂದು ತಿನ್ನುವುದೇನೋ ಉಂಟು. ಆದರೆ ನಿಷ್ಪಕ್ಷಪಾತವಾದ ದೃಷ್ಟಿಯಿಂದ ನೋಡಿದರೆ ಅದರಲ್ಲಿ ತಪ್ಪೇನಿದೆ? ಹುಟ್ಟಿಸಿದ ದೇವರು "ಹುಲ್ಲು ಮೇಯಿಸುವುದಿಲ್ಲ, ಮಾಂಸವನ್ನೇ ಮೇಯಿಸುತ್ತೇನೆ" ಎಂದು ವಚನಕೊಟ್ಟೇ ಹುಲಿಯನ್ನು ನಿರ್ಮಿಸಿದ್ದಾನೆ. ಶಾಕಾಹಾರವನ್ನು ತಿಂದು ಬದುಕಬಹುದಾದ ಮಾನವನೇ ಮಾಂಸವನ್ನು ತಿನ್ನಬಹುದಾದರೆ ಹುಲಿಯಲ್ಲಿ ಅದೊಂದು ದೊಡ್ಡ ಅಪರಾಧವೇ? ಅದು ಆಹಾರಕ್ಕಾಗಿ ಕೊಲ್ಲುವುದರಲ್ಲೇನೂ ತಪ್ಪಿಲ್ಲ; ಹಾಗೆ ಕೊಲ್ಲುವಾಗ ಯಾವುದಾದರೊಂದು ಧರ್ಮವನ್ನು ಅನುಸರಿಸಿ ಕೊಲ್ಲುತ್ತದೆಯೆ, ಅಥವಾ ಧರ್ಮಾಧರ್ಮಗಳ ಲೆಕ್ಕವನ್ನೇ ಇಡದೆ ಸ್ವಾಚ್ಛಂದ್ಯದಿಂದ ವರ್ತಿಸುತ್ತದೆಯೆ ಎಂಬುದೇ ಮುಖ್ಯ ಪ್ರಶ್ನೆ.

ಹುಲಿಗೆ ಧರ್ಮವೇನು ಬಂತು, ಎನ್ನಬಹುದು. ಇತರ ದೇಶಗಳಲ್ಲಿರುವ ಹುಲಿಗಳ ವಿಷಯ ಹೇಗೋ ನನಗೆ ತಿಳಿಯದು. ಆದರೆ ಯಾವ ನಾಡಿನಲ್ಲಿ ಶ್ರೀರಾಮನಂಥ ದೊರೆಗಳು ಆಳಿದರೋ, ಭಗವದ್ಗೀತೆಯಂಥ ಗ್ರಂಥ ಉದ್ಭವಿಸಿತೋ, ಆ ಭರತ ಭೂಮಿಯಲ್ಲಿ ಹುಲಿಗಳಾದರೂ ಅಧರ್ಮಕ್ಕೆಡೆಗೊಡುವುದುಂಟೆ? ಈಚೆಗೆ ನನ್ನ ಬಂಧು ಕೃಷ್ಣಮೂರ್ತಿ ತನ್ನ ವಂಶದವರೊಬ್ಬರ ಅನುಭವದ ಕಥೆಯನ್ನು ಹೇಳಿದ. ಅದನ್ನು ಕೇಳಿದ ಮೇಲೆ ನನಗೆ ಹುಲಿಯ ಧರ್ಮಶ್ರದ್ಧೆಯು ಅರಿವಾಯಿತು. ಅದರ ವಿಷಯದಲ್ಲಿ ಮನಸ್ಸು ಆರ್ದ್ರವಾಯಿತು. ನನ್ನನ್ನು ನೋಡಿದರೆ ಅದರ ಬಾಯಿ ಆರ್ದ್ರವಾಗಬಹುದು; ಆದರೆ ಅದು ಇಲ್ಲಿ ಪ್ರಕೃತ ವಿಷಯವಲ್ಲ.

ಕೃಷ್ಣಮೂರ್ತಿಯ ಅಜ್ಜಂದಿರು ತುಮಕೂರು ಜಿಲ್ಲೆಯಲ್ಲಿ ಒಂದು ಹಳ್ಳಿಯವರು. ಅಷ್ಟೇನೂ ಐಶ್ವರ್ಯವಂತರಲ್ಲದಿದ್ದರೂ ಹಿಂದೆ ಚೆನ್ನಾಗಿ

ಬದುಕಿ ಬಾಳಿದ ಮನೆತನ. ಅವರ ಹಿರಿಯರು ಸಣ್ಣದೊಂದು ಸಂಸ್ಥಾನದಲ್ಲಿ ಮಂತ್ರಿಯಾಗಿದ್ದು ತಮ್ಮ ರಾಜಭಕ್ತಿಗಾಗಿ ಹೆಸರು ಪಡೆದವರು. ನಮ್ಮ ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರ ಉಳಿದಿತ್ತು. ಆದರೂ ನಮ್ಮ ಶಾನುಭೋಗರು ತಮ್ಮ ವಂಶದ ಕೀರ್ತಿಗೆ ಕುಂದುತರದಂತೆ ಖಿರ್ದಿ ಪುಸ್ತಕವನ್ನು ನಿಷ್ಠೆಯಿಂದ ಕಾಪಾಡಿ ಕೊಂಡು ಮಸಿಯ ಕಾಣಿಕೆಗಾಗಿ ರೈತರನ್ನು ಪೀಡಿಸದೆ, ವಸೂಲಾದ ಹಣವನ್ನು ದಸ್ತು ಮಾಡದೆ, ದೇವರು ಕೊಟ್ಟಷ್ಟರಲ್ಲಿ ತೃಪ್ತಿಗೊಂಡು ಜೀವನ ನಡೆಸುತ್ತಿದ್ದರು. ಅವರ ಭಾಗಕ್ಕೆ ಖಿರ್ದಿ ಪುಸ್ತಕ ಕೇವಲ ಜೀವನದ ಆಧಾರವಲ್ಲ; ಅವರ ರಾಜಭಕ್ತಿಯ ಲಾಂಛನ.

ಒಂದು ಬಾರಿ ಅವರು ಇರಸಾಲಿಗಾಗಿ ಚಿಕ್ಕನಾಯಕನಹಳ್ಳಿಗೆ ಹೋಗಿದ್ದರು. ಖಜಾನೆಗೆ ಹಣ ಕಟ್ಟಿ, ಸ್ನೇಹಿತರನ್ನು ನೋಡಿಕೊಂಡು ಅಲ್ಲಿಂದ ವಾಪಸು ಹೊರಡುವ ವೇಳೆಗೆ ಸಂಜೆ ಆರು ಘಂಟೆಯಾಗಿತ್ತು. ಅವರು ತಮ್ಮ ಹಳ್ಳಿಯನ್ನು ತಲಪಬೇಕಾದರೆ ಮದಲಿಂಗನ ಕಣಿವೆಯನ್ನು ದಾಟಿ ಹೋಗಬೇಕು. ಕಾಡುದಾರಿ. ಆದರೂ ಬೆಳುದಿಂಗಳ ದಿನ; ಸ್ವಲ್ಪ ದೊಡ್ಡ ಹೆಜ್ಜೆ ಹಾಕಿದರೆ ಊಟದ ಹೊತ್ತಿಗೆ ಊರು ಸೇರಿಕೊಳ್ಳಬಹುದು ಎಂದುಕೊಂಡು ಬೇಗ ಬೇಗ ನಡೆದರು. ಅವರು ಬಹಳ ಕರ್ಮಠರಾದ್ದರಿಂದ ಬೆಳಗ್ಗೆ ಮನೆಯಲ್ಲಿ ಊಟಮಾಡಿದ್ದೇ ಹೊರತು ಬೇರೆ ಯಾವ ಉಪಾಹಾರ ವನ್ನೂ ತೆಗೆದುಕೊಂಡಿರಲಿಲ್ಲ. ಹೆಂಡತಿ ಮಾಡಿಟ್ಟಿರಬಹುದಾದ ರಸದೂಟದ ಕಲ್ಪನೆ ಶಾನುಭೋಗರ ಕಾಲಿಗೆ ಮತ್ತಷ್ಟು ಚುರುಕು ಕೊಟ್ಟಿತು. ಆದರೂ ಕಣಿವೆಗೆ ಬರುವ ವೇಳೆಗೆ ಆಗಲೇ ರಾತ್ರಿ ಹೆಜ್ಜೆಯಿಟ್ಟಿತ್ತು. ಮರಗಳ ನೆರಳಿನ ನಡುವೆ ಅಲ್ಲಲ್ಲಿ ಕದ್ದು ಬಂದ ಬೆಳದಿಂಗಳು ಕತ್ತಲೆಯನ್ನು ಹೆಚ್ಚು ಮಾಡಿತೆಂದೇ ಹೇಳಬೇಕು. ಆ ಅಸ್ಪಷ್ಟವಾದ ಬೆಳಕಿನಲ್ಲಿ ಕಾಡಿನ ಗಿಡ ಮರಗಳೂ ಬಂಡೆಗಳೂ ಚಿತ್ರವಿಚಿತ್ರವಾದ ರೂಪಗಳನ್ನು ತಾಳುವುವು. ನೆರಳು ಅಲ್ಲಾಡಿದರೆ ಎದುರಿಗೆ ಯಾರೋ ಬಂದಂತಾಗುವುದು. ಎಲೆಗಳು ಅಲುಗಿದರೆ ಮೈ ನಡುಗುವುದು. ಜೊತೆಗೆ ಆಗಿಂದಾಗ ನರಿಗಳ ಹುಯಿಲು ಬೇರೆ. ನಿರ್ಜನವಾದ ಪ್ರದೇಶ; ಅವೇಳೆ; ಯಾರಿಗಾದರೂ ಭಯವಾಗುವ ಸನ್ನಿವೇಶ. ಶಾನುಭೋಗರೇನೋ ಗಟ್ಟಿ ಮನಸ್ಸಿನವರೇ; ಅಲ್ಲದೆ ಆ ದಾರಿಯನ್ನು ಎಷ್ಟೋ ಸಾರಿ ತುಳಿದಿದ್ದವರು. ಆದರೂ ಮನಸ್ಸು ಆಗಾಗ ಅಳುಕದಿರಲಿಲ್ಲ. ಹಸಿವಿನ ಜೊತೆಗೆ ಭಯವೂ ಸೇರಿ ಅವರ ಕಾಲು ಮತ್ತಷ್ಟು ಚುರುಕಾಯಿತು.

ಆ ರಾತ್ರಿ ಹಸಿದಿದ್ದವರು ಶಾನುಭೋಗರೊಬ್ಬರೇ ಅಲ್ಲ. ರಸ್ತೆಗೆ ಸ್ವಲ್ಪ ದೂರದಲ್ಲೇ ಇದ್ದ ಗುಹೆಯಲ್ಲಿ ಹುಲಿಯೊಂದು ಮಲಗಿತ್ತು. ದಿನವೆಲ್ಲಾ ನಿದ್ದೆಮಾಡಿ ಆಗ ತಾನೆ ಆಕಳಿಸುತ್ತ ಎದ್ದ ಹುಲಿಗೆ ತನ್ನ ಹೊಟ್ಟೆ ಬರಿದಾಗಿದೆಯೆಂದು ಭಾಸವಾಯಿತು. ಶಾನುಭೋಗರಂತೆಯೇ ಅದಕ್ಕೂ ರಸದೂಟದ ಕನಸು. ನಿದ್ದೆಯ ಜಡತ್ವವನ್ನು ಕಳೆದುಕೊಂಡು ಇನ್ನು ಬೇಟೆಗೆ ಹೊರಡಬೇಕು. ವಿಧಿ ಆಹಾರಕ್ಕೆ ಏನನ್ನು ಒದಗಿಸುವುದೋ ಎಂದು ಯೋಚಿಸುತ್ತಾ ಒಂದೆರಡು ಸಾರಿ ಮೈಮುರಿದು ಹೊರಟಿತು. ಬಂಡೆಗಳ ಮರೆಯಲ್ಲೇ ನಡೆಯುತ್ತಿದ್ದಾಗ ಇದ್ದಕ್ಕಿದ್ದ ಹಾಗೆಯೇ ಮಧುರವಾದ ಗಂಧವೊಂದು ಅದರ ಘ್ರಾಣೇಂದ್ರಿಯವನ್ನು ಆಕ್ರಮಿಸಿತು. ಅದು ಚೆನ್ನಾಗಿ ಪರಿಚಿತವೂ ಅಲ್ಲ, ತೀರ ಅಪರಿಚಿತವೂ ಅಲ್ಲ. ಹಿಂದೆ ಎಂದೋ ಅಂಥದೇ ಮನೋಮೋಹಕವಾದ ಸುವಾಸನೆಯ ಅನುಭವವಾಗಿದೆ. ಯಾವುದಿರಬಹುದು, ಆ ವಾಸನೆ? ಜಿಂಕೆಯ ವಾಸನೆಯಂತೂ ಅಲ್ಲ. ಇನ್ನೂ ಮೊನ್ನೆತಾನೆ ಜಿಂಕೆಯನ್ನು ಕೊಂದಿರಲಿಲ್ಲವೆ! ಅಲ್ಲ, ಅದು ಜಿಂಕೆಯ ವಾಸನೆಯಲ್ಲ; ಅದಕ್ಕಿಂತ ಸಾವಿರ ಪಾಲು ಹಿತಕರವಾದದ್ದು. ಆಹಾ, ನೆನಪಾಯಿತು—ಎರಡು ವರ್ಷಗಳ ಹಿಂದೆ ಸುಮಾರು ಅದೇ ಹೊತ್ತಿನಲ್ಲಿ ಸಿಕ್ಕಿದ್ದನಲ್ಲ, ಆ ಬ್ರಾಹ್ಮಣ! ಅದೆಂಥ ಸುಖಕರವಾದ ಅನುಭವ! ಅಂದಿನವರೆಗೆ ತಾನು ಬ್ರಾಹ್ಮಣಭೋಜನ ಮಾಡಿರಲಿಲ್ಲ. ಸಾಧಾರಣವಾಗಿ ಈ ಮಾನವರು ಕೃತ್ರಿಮಿಗಳು; ಕತ್ತಿಯೋ, ದೂರದಿಂದಲೇ ಕೆಂಡವನ್ನುಗುಳಿ ಕೊಲ್ಲುವ ಆ ಬಂದೂಕೋ—ಏನಾದರೂ ಒಂದನ್ನು ಕೈಯಲ್ಲಿಟ್ಟುಕೊಂಡಿರುತ್ತಾರೆ. ಆದರೆ ಅಂದೇನೋ ಸುಲಭವಾಗಿ ಆತನನ್ನು ಕೊಲ್ಲುವ ಸುಸಂಧಿ ಒದಗಿತು. ಆತನ ಮಾಂಸದ ರುಚಿ ಹಲ್ಲಿಗೆ ಇಳಿದ ಮೇಲೆ ತನಗೆ ಜಿಂಕೆಯ ಮಾಂಸ ಸಹ ರುಚಿಸದಂತಾಯಿತು. ಆಶ್ಚರ್ಯ! ತಾನು ಮಾಂಸಾಹಾರಿ. ಆದರೂ ತನಗೆ ಇತರ ಮಾಂಸಾಹಾರಿಗಳನ್ನು ತಿನ್ನುವುದೆಂದರೆ ಬೇಸರ. ಶಾಕಾಹಾರಿಗಳ ಮಾಂಸವೆಂದರೆ—ಆ ರುಚಿ ಅವರ್ಣನೀಯ! ಜಿಂಕೆಯ ಮಾಂಸದಲ್ಲೂ ಬ್ರಾಹ್ಮಣರ ಮಾಂಸದಲ್ಲೂ ಅದೇ ವೈಶಿಷ್ಟ್ಯ. ಇದೇ ಸೃಷ್ಟಿಯ ವೈಚಿತ್ರ್ಯವೆನ್ನುವುದು....ಕ್ಷಣಕಾಲ ಹುಲಿ ತತ್ತ್ವವಿಚಾರಕ್ಕೆ ಮನಸ್ಸು ಕೊಟ್ಟಿತು. ಆರಣ್ಯಕಗಳ ಕಾಲದಿಂದಲೂ ಭಾರತೀಯರ ರಕ್ತದಲ್ಲಿ ಬಂದದ್ದಲ್ಲವೆ, ಈ ತತ್ತ್ವಾನ್ವೇಷಣೆಯ ಆಸಕ್ತಿ? ಆದರೆ ಸದ್ಯದಲ್ಲಿ ತತ್ತ್ವವಿಚಾರಕ್ಕಿಂತ ಉದರಪೋಷಣೆಯ ಅವಶ್ಯಕತೆ ಹೆಚ್ಚಾಗಿತ್ತು. 'ಅನ್ನಂ ಬ್ರಹ್ಮೇತಿ ವ್ಯಜಾನಾತ್.' ಅನ್ನಬ್ರಹ್ಮನ ಸಾಕ್ಷಾತ್ಕಾರವಾಗಿ ಐದು ಹಂತ

ಗಳನ್ನೇರಿದ ಮೇಲಲ್ಲವೆ, 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎನ್ನ ಬೇಕಾದರೆ ? ಹುಲಿಯು ಬಾಯಲ್ಲಿ ಒಸರುತ್ತಿದ್ದ ದ್ರವವನ್ನು ಹಾಗೆಯೇ ನುಂಗಿಕೊಂಡು ಆ ಸುವಾಸನೆಯ ಜಾಡನ್ನೇ ಹಿಡಿದು ನಿಶ್ಶಬ್ದವಾಗಿ ನಡೆಯುತ್ತಾ ರಸ್ತೆಯ ಬಳಿಗೆ ಬಂದು ಶಾನುಭೋಗರನ್ನು ಕಂಡಿತು. ಅವರ ದುಂಡುದುಂಡಾದ ಶರೀರವನ್ನು ನೋಡಿ ಹುಲಿಗೆ ಪರಮಾನಂದವಾಯಿತು. "ಇಂದೇನೋ ದೇವರ ಕೃಪೆ. ಎರಡು ವರ್ಷದ ಮೇಲೆ ಮತ್ತೆ ನಿರಾಯುಧ ನಾದ ಮನುಷ್ಯ ಸಿಕ್ಕಿದ. ಅದರಲ್ಲೂ ಶಾಕಾಹಾರಿ, ಬ್ರಾಹ್ಮಣ ! ಇದು ನನ್ನ ಪೂರ್ವಜನ್ಮದ ತಪಃಪೂಜಾದಿಗಳ ಫಲ," ಎಂದುಕೊಂಡಿತು. ಆದರೆ ಆ ತಪಃಪೂಜಾದಿಗಳಲ್ಲಿ ಏನೋ ಸ್ವಲ್ಪ ಲೋಪವಿದ್ದಿರಬೇಕು. ಹುಲಿ ಲೋಪ ದೋಷ ಪ್ರಾಯಶ್ಚಿತ್ತಾರ್ಥವಾಗಿ ನಾಮತ್ರಯ ಮಂತ್ರವನ್ನು ಜಪಿಸದೆ ಮರೆತಿರಬೇಕು. ಏನು ಲೋಪವಿತ್ತೋ ಏನೋ ; ಅಂತೂ ಹುಲಿಯ ಆನಂದಕ್ಕೆ ಕೊರತೆ ಒಂದಿತ್ತು : ಆ ಶಾನುಭೋಗರು ಹುಲಿಗೆ ಅಭಿಮುಖ ರಾಗಿರದೆ ಅದರ ಕಡೆಗೆ ಬೆನ್ನು ತಿರುಗಿಸಿ ನಡೆಯುತ್ತಿದ್ದರು. ಯಾರನ್ನೇ ಆಗಲಿ, ಭರತಖಂಡದ ಹುಲಿಗಳು ಹಿಂದಿನಿಂದ ಹಾರಿ ಕೊಲ್ಲುವುದಿಲ್ಲ. ಶತ್ರುವನ್ನಾದರೂ ಸರಿಯೆ, ಆತ ಬೆನ್ನು ತಿರುಗಿಸಿರುವಾಗ ಕೊಲ್ಲುವುದು ಆರ್ಯಧರ್ಮಸಲ್ಲವಷ್ಟೆ. ಪರಾಙ್ಮುಖವಧೆ ಮಾಡಿದ್ದರಿಂದಲ್ಲವೇ ಶ್ರೀರಾಮ ನಿಗೆ ಸಹ ಅಪಕೀರ್ತಿ ಬರುವ ಸಂಭವವೊದಗಿತು !

ನಸ್ಮರೇದ್ವಾಲಿಹಂತಾರಂ ರಾಘವಂ ಧರ್ಮಬಾಹಿರಂ ||

ಎಂದು ಶ್ರೀರಾಮನನ್ನೂ ಕೂಡ ಖಂಡಿಸಿದ ನಾಡು, ನಮ್ಮ ನಾಡು. ಈ ಖಂಡನೆಯನ್ನು ಶ್ರೀರಾಮನ ವಿಷಯದಲ್ಲಿ ಒಪ್ಪಲಿ ಬಿಡಲಿ, ಪರಾಙ್ಮುಖ ವಧೆ ಉಚಿತವಲ್ಲವೆಂಬ ಸಾಮಾನ್ಯ ತತ್ವವನ್ನೇನೋ ನಮ್ಮ ಹುಲಿ ಅಂಗೀ ಕರಿಸಿತ್ತು. ಶಾಖಾಮೃಗದ ವಿಷಯದಲ್ಲಿ ಸಹ ಅದು ಅಯುಕ್ತವೆಂದಮೇಲೆ ಮನುಷ್ಯನನ್ನು ಹಾಗೆ ಕೊಲ್ಲುವುದುಂಟೆ ? ಅಂಥ ಕೃತ್ಯವನ್ನೇನಾದರೂ ಮಾಡಿದರೆ ನಾಳೆ ತನ್ನ ಶೌರ್ಯದ ವಿಷಯದಲ್ಲಿ ಒಡಕು ಶಬ್ದ ಹೊರಟೀತು. ಆದ್ದರಿಂದ ಹುಲಿ ಹೇಗಾದರೂ ಮಾಡಿ ಶಾನುಭೋಗರಿಗೆ ಅಭಿಮುಖವಾಗಿ ಬರಬೇಕು. ಆದರೆ ಅವರನ್ನು ಹಾದು ಮುಂದೆ ಹೋಗುವುದು ಕಷ್ಟ. ಆ ಸ್ಥಳದಲ್ಲಿ ಒಂದೆರಡು ಮರಗಳನ್ನು ಬಿಟ್ಟರೆ ಸ್ವಲ್ಪ ದೂರದವರೆಗೆ ಬಯಲು. ಸುತ್ತಲೂ ಕುರುಚಲು ಕಾಡಿದ್ದಿದ್ದರೆ ಹುಲಿಯ ಕೆಲಸ ಸುಲಭ ವಾಗುತ್ತಿತ್ತು. ಆ ಬ್ರಾಹ್ಮಣನೋ, ಯಾವ ಎಲೆ ಅಲುಗಿದರೂ ಪೈಯೆಲ್ಲಾ ಕಣ್ಣಾಗಿ ನೋಡುತ್ತಾನೆ. ಹುಲಿ ಬಂದ ಸುಳಿವು ಗೊತ್ತಾದರೆ ಮರ ಹತ್ತಿ

ತಪ್ಪಿಸಿಕೊಳ್ಳಬಹುದು. ಹುಲಿಗೆ ಆ ವಿದ್ಯೆ ಬರದು. ಅದಕ್ಕೆ ಕಲಿಸಿದ್ದ ಚೌಷಷ್ಟಿ ಕಲೆಗಳಲ್ಲಿ ವೃಕ್ಷಾರೋಹಣ ಸೇರಿರಲಿಲ್ಲ. ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಯೋಚಿಸಿ ಹುಲಿ ಒಂದು ನಿಶ್ಚಯಕ್ಕೆ ಬಂತು: ನಿಶ್ಯಬ್ದವಾಗಿ ಆ ಬ್ರಾಹ್ಮಣನ ಹಿಂದೆಯೇ ನಡೆದು, ನಂತರ ಅವನ ಮುಂಭಾಗಕ್ಕೆ ನೆಗೆದು, ಕೂಡಲೆ ತಿರುಗಿ ಅವನ ಮೇಲೆ ಬೀಳಬೇಕು. ಇದು ಕಷ್ಟದ ಕೆಲಸವೆಂದು ನಮಗೆ ತೋರಬಹುದು. ಆದರೆ ಅದು ನುರಿತ ಹುಲಿ. ತನ್ನ ಪ್ರಯತ್ನ ಸಫಲವಾಗುತ್ತದೆಂಬ ಆತ್ಮವಿಶ್ವಾಸವಿತ್ತು. ಅದಲ್ಲದೆ ಹಸಿವಿನ ವೇಗವೂ ಶಾನುಭೋಗರ ಮಾಂಸಲವಾದ ದೇಹವೂ ಸಾಕಾದಷ್ಟು ಹುರುಪು ಕೊಟ್ಟವು. ತನ್ನ ಬಡಬಂಧುವಾದ ಬೆಕ್ಕಿನಂತೆ ದೇಹವನ್ನು ಹುದುಗಿಸಿಕೊಂಡು ಹುಲಿ ಮೆಲ್ಲಮೆಲ್ಲನೆ ಶಾನುಭೋಗರ ಹತ್ತಿರ ಸರಿಯಿತು.

ಇತ್ತ ಶಾನುಭೋಗರಿಗೆ ಇದ್ದಕ್ಕಿದ್ದ ಹಾಗೆಯೇ ಮನಸ್ಸಿನಲ್ಲಿ ಅಳುಕು ಹುಟ್ಟಿತು. ಪಂಚೇಂದ್ರಿಯಗಳಿಗೆ ಗೋಚರವಾಗದಿರುವಂಥ ಅಪಾಯವನ್ನು ಸೂಚಿಸುವ ಆರನೆಯ ಇಂದ್ರಿಯವೊಂದಿದೆಯೆಂದು ಬಲ್ಲವರು ಹೇಳುತ್ತಾರೆ. ಶಾನುಭೋಗರಲ್ಲಿ ಆ ಇಂದ್ರಿಯ ಜಾಗ್ರತವಾಗಿ ಹುಲಿ ಬಂದದ್ದು ಅವರಿಗೆ ತಿಳಿಯಿತು. ಅಷ್ಟು ನಿಶ್ಯಬ್ದವಾಗಿ ಹಿಂಬಾಲಿಸಬೇಕಾದರೆ ಹುಲಿಗಲ್ಲದೆ ಬೇರೆ ಮೃಗಗಳಿಗೆ ಸಾಧ್ಯವಿಲ್ಲ. ಹುಲಿಯೇ ಆದರೆ ಅದು ಹಿಂದಿನಿಂದ ಮೇಲೆ ಬೀಳುವುದಿಲ್ಲವೆಂದು ಶಾನುಭೋಗರು ಬಲ್ಲರು. ಧೈರ್ಯ ತಂದುಕೊಂಡು, "ನಾನೇ ಹುಲಿಯಾಗಿದ್ದಿದ್ದರೆ ಈ ಸಂದರ್ಭದಲ್ಲಿ ಏನು ಮಾಡುತ್ತಿದ್ದೆ ?" ಎಂದು ಪ್ರಶ್ನೆ ಹಾಕಿಕೊಂಡರು. ಹುಲಿಗೆ ಹೊಳೆದ ಯೋಚನೆಯೇ ಅವರಿಗೂ ಹೊಳೆಯಿತು. ಆಗಲಿ, ಈ ಪಂದ್ಯದಲ್ಲಿ ಹುಲಿಯೇ ಮೊದಲನೆಯ ಗರವನ್ನು ಹಾಕಲಿ," ಎಂದುಕೊಂಡು ಅದು ಹಿಂಬಾಲಿಸುತ್ತಿರುವುದು ತಮಗೆ ತಿಳಿಯಿತೆಂದು ಪತ್ತೆ ಕೊಡದೆ ಸುಮ್ಮನೆ ನಡೆದರು. ಅವರ ಮೈ ಸ್ವಲ್ಪ ನಡುಗಿರಬಹುದು, ಮುಖ ಸ್ವಲ್ಪ ಬಿಳುಪೇರಿರಬಹುದು—ಆದರೆ ಎಂಥ ಸೂಕ್ಷ್ಮದೃಷ್ಟಿಯ ಹುಲಿಗಾದರೂ ಅದು ಪತ್ತೆಯಾಗದಂತೆ ಭಯವನ್ನು ಅದುಮಿದರು. ಹುಲಿ ಹತ್ತಿರ ಬಂದು ನೆಗೆಯಿತು. ಅದು ತಮ್ಮ ತಲೆಯಮೇಲೆ ಬರುವ ವೇಳೆಗೆ ಸರಿಯಾಗಿ ಶಾನುಭೋಗರು ಸ್ವಲ್ಪ ಬಾಗಿದರು. ಹುಲಿ ನೆಲಕ್ಕೆ ಇಳಿದು ತಮ್ಮ ಕಡೆಗೆ ತಿರುಗುವುದರೊಳಗೆ ಅವರೂ ಹಿಂದಿರುಗಿ ಬಂದ ದಾರಿಯಲ್ಲೇ ಪುನಃ ನಡೆದರು. ಹುಲಿ ಕತ್ತೆತ್ತಿ ನೋಡಿದರೆ—ಶಾನುಭೋಗರು ಮತ್ತೆ ತನ್ನ

ಕಡೆಗೆ ಬೆನ್ನು ತಿರುಗಿಸಿದ್ದಾರೆ!

ಹುಲಿಯ ಮುಖ ಪೆಚ್ಚಾಯಿತು. ಆದರೆ ಶಾನುಭೋಗರ ವಿಷಯದಲ್ಲಿ ಮೆಚ್ಚಿಕೆಯೂ ಆಯಿತು—ತನಗೆ ತಕ್ಕ ಎದುರಾಳಿಯೇ ಸಿಕ್ಕಿದನೆಂಬ ಮೆಚ್ಚಿಕೆ. ತಿಂದರೆ ಇಂಥ ಬ್ರಾಹ್ಮಣನನ್ನು ತಿನ್ನಬೇಕು ಎಂದುಕೊಂಡು ಮತ್ತೊಂದು ಬಾರಿ ನೆಗೆಯಿತು. ಈ ಸಲವೂ ಹುಲಿಗೆ ಕಂಡದ್ದು ಶಾನುಭೋಗರ ಬೆನ್ನೇ. ಅದಕ್ಕೆ ಒಂದು ಕಡೆ ಹಸಿವು, ಮತ್ತೊಂದು ಕಡೆ ಹಸಿವಿಗಿಂತಲೂ ಹೆಚ್ಚಾಗಿ ತನ್ನ ಸ್ವಾಭಿಮಾನಕ್ಕೆ ಇಂಥ ಧಕ್ಕೆ ಬಂತಲ್ಲಾ ಎಂಬ ಯೋಚನೆ. ನಾಳೆ ಇತರ ವ್ಯಾಘ್ರಗಳೆದುರಿಗೆ ತನ್ನ ಗೌರವ ಎಷ್ಟಕ್ಕೆ ನಿಂತೀತು, ನಿರಾಯುಧನಾದ ಬ್ರಾಹ್ಮಣನೊಬ್ಬನಿಂದ ಚುರುಕಿನಲ್ಲಿ ಸೋಲಾಯಿತೆಂದರೆ!....ಆರ್ಷೇಯವಾಗಿ ಬಂದ ಸ್ವಧರ್ಮಕ್ಕೆ ತಿಲಾಂಜಲಿ ಕೊಟ್ಟು ಬೆನ್ನು ತಿರುಗಿಸಿದವನಾದರೂ ಆಗಲಿ, ಮೇಲೆ ಬಿದ್ದೇ ಬಿಡಲೆ ಎಂಬ ಯೋಚನೆ ಅದರ ಮನಸ್ಸಿನಲ್ಲಿ ಹೊಳೆದುಹೋಯಿತು. ಕ್ಷಣಕಾಲ ಅದರ ಮನಸ್ಸಿನಲ್ಲಿ ಗೊಂದಲ—ಸೃಷ್ಟಿ ಮೊದಲಾದಂದಿನಿಂದಲೂ ನಡೆದಿರುವ ಧರ್ಮಾಧರ್ಮಗಳ ಯುದ್ಧ.

ಆದರೆ ಆ ಗೊಂದಲ ಕ್ಷಣಕಾಲಕ್ಕಿಂತಲೂ ಹೆಚ್ಚಾಗಿ ನಿಲ್ಲಲಿಲ್ಲ. ಅದು ಸದ್ವಂಶದಲ್ಲಿ ಜನಿಸಿದ ಹುಲಿ. "ಖಂಡವಿದೆಕೋ, ಮಾಂಸವಿದೆಕೋ, ಗುಂಡಿಗೆಯ ಬಿಸಿರಕ್ತವಿದೆಕೋ" ಎಂದು ಆ ಹಸು ಆಹ್ವಾನ ಕೊಟ್ಟಾಗ ತನ್ನ ಅಜ್ಜ ಬಾಯಿ ಚಪ್ಪರಿಸಿಕೊಂಡು ಹಸುವನ್ನು ತಿನ್ನಬಹುದಾಗಿತ್ತು. ಆದರೂ ಆ ಹುಲಿರಾಯ ಸತ್ಯವ್ರತೆಯಾದ ಪುಣ್ಯಕೋಟಿಯನ್ನು ತಿನ್ನಲೊಲ್ಲದೆ ಪ್ರಾಣಬಿಡಲಿಲ್ಲವೆ? ಆ ಪವಿತ್ರ ಕಥೆ ಸುವರ್ಣಾಕ್ಷರದಲ್ಲಿ ಲಿಖಿತವಾಗಿ ಇಂದಿಗೂ ಹುಲಿಗಳಿಗೂ ಹಸುಗಳಿಗೂ ಆದರ್ಶವಾಗಿಲ್ಲವೆ? ಅಂಥ ಹುಲಿಯ ಮೊಮ್ಮಗನಾಗಿ ಹುಟ್ಟಿ ತಾನು ಅಧರ್ಮಕ್ಕೆ ಕೈಹಾಕುವುದೆ? ಹುಲಿಗೆ ಭಗವದ್ಗೀತೆ ನೆನಪಿಗೆ ಬಂತು: ಸ್ವಧರ್ಮೇ ನಿಧನಂ ಶ್ರೇಯಃ, ಬೈಬಲ್ ನೆನಪಿಗೆ ಬಂತು: "ಸೈತಾನ ಹಿಂದಿರುಗು" ಎಂದುಕೊಂಡಿತು.

ಆ ಪಾಪದ ಯೋಚನೆಯನ್ನು ಹೊರದೂಡಿ ಮತ್ತೆ ಶಾನುಭೋಗರ ಮುಂಭಾಗಕ್ಕೆ ನೆಗೆಯಿತು. ಕತ್ತೆತ್ತಿದರೆ ಶಾನುಭೋಗರು ಮತ್ತೆ ತಿರುಗಿದ್ದಾರೆ. ಹುಲಿಗೆ ಅವರ ಬೆನ್ನು ಹೊರತು ಮತ್ತೇನೂ ಕಾಣಲೊಲ್ಲದು. ಪುನಃ ಶಾನುಭೋಗರಿಗೆ ತಿರುಗಲು ಅವಕಾಶ ಕೊಡದಂತೆ ಮತ್ತಷ್ಟು ವೇಗವಾಗಿ ನೆಗೆಯಿತು. ಆದರೆ ಶಾನುಭೋಗರು ತಮ್ಮ ವೇಗವನ್ನು ಅದೇ ಪ್ರಮಾಣದಲ್ಲೇ ಹೆಚ್ಚಿಸಿಕೊಂಡರು—ಲೆಕ್ಕಾಚಾರದ ವಿಷಯ, ಶಾನು

ಭೋಗರಾದವರಿಗೆ ಹೇಳಿಕೊಡಬೇಕೆ ! ಈ ಸ್ಪರ್ಧೆ ಐದಾರು ಸಾರಿ ನಡೆಯು ವುದರೊಳಗೆ ಇಬ್ಬರ ವೇಗವೂ ಸಲಸಲಕ್ಕೂ ಹೆಚ್ಚಿತು. ಈಗ ಶಾನುಭೋಗ ರಿಗೆ ನಡೆಯುವುದು ಸಾಧ್ಯವಿರಲಿಲ್ಲ. ನಿಂತ ಕಡೆಯಲ್ಲೇ ಹುಲಿಯ ವೇಗಕ್ಕೆ ಸರಿಯಾಗಿ ಚಾಚೂ ತಪ್ಪದಂತೆ ತಮ್ಮ ವೇಗವನ್ನೂ ಹೊಂದಿಸಿ ಕೊಂಡು ಕುಲಾಲಚಕ್ರದಂತೆ ತಿರುಗುತ್ತಿದ್ದರು. ಒಂದು ಕ್ಷಣವಾದರೂ ಹುಲಿಗೆ ಅವರ ಮುಖದರ್ಶನವಾಗಲಿಲ್ಲ. ಆದರೆ ಈ ಡೊಂಬರಾಟವನ್ನು ಎಷ್ಟು ಕಾಲ ನಡಸಲು ಸಾಧ್ಯ ! ಶಾನುಭೋಗರ ತಲೆ ಸುತ್ತಲಾರಂಭಿಸಿತು. ಇತ್ತ ಹುಲಿಗೆ ಮೈಯೆಲ್ಲಾ ನೋವು. ಶಾನುಭೋಗರ ಹಿಂದೆಯೂ ಮುಂದೆಯೂ—ಆ ಸಂದರ್ಭದಲ್ಲಿ ಹಿಂದೆ ಮುಂದೆ ಎಂಬ ಶಬ್ದಗಳಿಗೆ ಅರ್ಥವೇ ಇರಲಿಲ್ಲ—ಹುಲಿ ಬೀಳುತ್ತಿದ್ದ ಕಡೆ ನೆಲದ ಮಟ್ಟ ಆರಂಗುಲ ಇಳಿಯಿತು. ಶಾನುಭೋಗರಿಗೆ ಭಯವೂ ಸಂಕಟವೂ ಹೆಚ್ಚಿದವು. ಹುಲಿ ಯೇನೋ ಪಾಪಭೀರು, ನಿಜ. ಆದರೆ ಅದನ್ನು ಬಿಗಿದಿರುವ ಧರ್ಮದ ಪಾಶ ಎಷ್ಟು ಕಾಲ ತಡೆದೀತು? ಈಗಾಗಲೇ ಅದು ಸಡಿಲವಾಗಿರಬೇಕು; ಒಂದೆರಡು ನಿಮಿಷಗಳಲ್ಲಿ ಕಿತ್ತೇ ಹೋಗಬಹುದು. ತಿರುಗುತ್ತಿರುವಾಗಲೇ ಅವರ ಮನಸ್ಸಿನಲ್ಲಿ ಯೋಚನೆಗಳು ಮಿಂಚಿನ ವೇಗದಲ್ಲಿ ಹಾದುಹೋದವು.

ತಮ್ಮ ಗತಿ ಹೇಗಾಗುವುದೋ ! ಅವರಿಗೆ ಜೀವನದ ಬಯಕೆ ಯೇನೋ ಇದ್ದರೂ ಸಾವಿನ ಹೆದರಿಕೆ ಅಷ್ಟಾಗಿ ಇರಲಿಲ್ಲ. ಜಾತಸ್ಯ ಮರಣಂ ಧ್ರುವಂ. ಸಂಸಾರದ ಯೋಚನೆಯೂ ಇಲ್ಲ. ಬೆಳೆದು ಕೈಗೆ ಬಂದ ಮಗನಿದ್ದಾನೆ. ಮನೆಯ ಯೋಗಕ್ಷೇಮ ನೋಡಿಕೊಳ್ಳುತ್ತಾನೆ. ಹೆಂಡತಿಯ ಯೋಚನೆ ಸ್ವಲ್ಪ ಬಾಧಿಸಿತು. ಅವಳ ಮುಂದಿನ ಜೀವನ ಕಷ್ಟವೆಂದರೂ ಅವಳ ದುಃಖಕ್ಕೆ ಕಾಲ ಶಾಂತಿಯನ್ನೊದಗಿಸುತ್ತದೆ. ಅಂತೂ ಅದನ್ನೆಲ್ಲಾ ಯೋಚಿಸಿ ಫಲವಿಲ್ಲ. ಆದರೆ ಆಗ ದಕ್ಷಿಣಾಯನ; ಸ್ವರ್ಗದ ಬಾಗಿಲು ತೆರೆದಿರುವುದಿಲ್ಲ. ಭೀಷ್ಮನಂಥವನೇ ದಕ್ಷಿಣಾಯನದಲ್ಲಿ ಸಾಯಲು ಹಿಂಜರಿಯಲಿಲ್ಲವೆ ? ಅದೊಂದು ಯೋಚನೆ. ಮತ್ತೊಂದು ಯೋಚನೆ—ಅದೇನು ವಿಚಿತ್ರವರ್ತನೆಯೋ ಮಾನವನ ಮನಸ್ಸಿನದು !— ಆ ವಿಪತ್ತಿನ ಸನ್ನಿವೇಶದಲ್ಲಿ ಅವರಿಗೆ ತಮ್ಮ ಖಿರ್ದಿ ಪುಸ್ತಕದ ಯೋಚನೆ ಬರಬೇಕೆ ? ಸಾಮಾನ್ಯ ಸಂದರ್ಭಗಳಲ್ಲಿ ಶಾನುಭೋಗರಾದವರು ಖಿರ್ದಿ ಪುಸ್ತಕಕ್ಕೆ ಪ್ರಥಮಸ್ಥಾನ ಕೊಡುವುದೇನೂ ಆಶ್ಚರ್ಯವಲ್ಲ. ವಂಶ ಪಾರಂಪರ್ಯವಾಗಿ ಬಂದದ್ದು—ತಮ್ಮ ತಂದೆಯಿಂದ ತಾವು ಪಡೆದದ್ದು; ತಮ್ಮಿಂದ ಮಗನ ವಶಕ್ಕೆ ಹೋಗಬೇಕಾದ್ದು ; ರಾಷ್ಟ್ರದ ಸ್ವತ್ತು. ಅದನ್ನು

ರಕ್ಷಿಸಬೇಕಾದ್ದು ಆದ್ಯಕರ್ತವ್ಯ. ಆದರೆ ಆ ಸಾಯುವ ಕಾಲದಲ್ಲೂ ಅವರ ಮನಸ್ಸನ್ನು "ಹುಲಿ ಖಿರ್ದಿ ಪುಸ್ತಕವನ್ನು ತಿನ್ನುತ್ತದೆಯೇ" ಎಂಬ ಪ್ರಶ್ನೆ ಬಾಧಿಸಿತು. ಖಿರ್ದಿ ಪುಸ್ತಕದ ವಿಷಯದಲ್ಲಿ ಅದು ಅರೋಚಿಯೆಂದು ದೃಢವಾಗುವುದಾದರೆ! ಹಿಂದೆ ಹುಲಿ ತಿಂದಿದ್ದ ಶಾನುಭೋಗರು ಯಾರೂ ಆ ವಿಷಯದಲ್ಲಿ ಸಾಕ್ಷಿ ನುಡಿಯುವಂತಿಲ್ಲವಷ್ಟೆ.

ಶಾನುಭೋಗರ ಮನಸ್ಸನ್ನು ನಿರಾಶೆ ಕವಿಯುತ್ತಾ ಬಂತು. ಸಾಯುವುದಂತೂ ತಪ್ಪದು. ಅದಕ್ಕೆ ಮೊದಲು ಈ ನಿಲುವಿಲ್ಲದ ಪರಿಭ್ರಮಣದ ಸಂಕಟವನ್ನೇಕೆ ಅನುಭವಿಸಬೇಕು? ಹುಲಿಯ ಪಂಜದಿಂದ ಒಂದೇಟು ಬಿದ್ದರೆ ಸಾಕು—ಮುಂದೆ ಯಾವುದರ ಅರಿವೂ ಉಳಿಯುವುದಿಲ್ಲ. ನೋವೇನಿದ್ದರೂ ಒಂದೇ ಒಂದು ಕ್ಷಣದ ಮಾತು. ಮುಂದಿನ ಕ್ಷಣದಲ್ಲಿ ಈ ಮರ್ತ್ಯಲೋಕದ ಸಂಕಟವನ್ನೆಲ್ಲಾ ಮರೆತು ಸ್ವರ್ಗದಲ್ಲಿ ವಿಹರಿಸಬಹುದು. ಹೀಗೆಂದುಕೊಂಡು ಇನ್ನೇನು ಹುಲಿಗೆ ಮುಖಕೊಟ್ಟು ನಿಲ್ಲಬೇಕು, ಅಷ್ಟರಲ್ಲಿ ಭಗವದ್ಗೀತೆಯ ವಾಕ್ಯವೊಂದು ನೆನಪಿಗೆ ಬಂತು: ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ! ಕ್ಷತ್ರಿಯನಿಗೆ ಹೇಳಿದ ಮಾತು, ನಿಜ. ಆದರೆ ನಮ್ಮಲ್ಲಿ ಕ್ಷಾತ್ರ ಮತ್ತು ಬ್ರಾಹ್ಮಧರ್ಮಗಳು ಅದಲು ಬದಲಾಗುವುದು ಹಿಂದಿನಿಂದಲೂ ಉಂಟಷ್ಟೆ. ದ್ರೋಣಾಚಾರ್ಯರು ಧನುಸ್ಸನ್ನು ಹಿಡಿದರು; ವಿಶ್ವಾಮಿತ್ರರು ಬ್ರಹ್ಮರ್ಷಿಯಾದರು. ಇದನ್ನೆಲ್ಲಾ ನೆನೆದುಕೊಂಡು ಶಾನುಭೋಗರು "ಮಡಿಯಬೇಕಾದರೆ ಮಾಡಿಯೇ ಮಡಿಯುತ್ತೇನೆ," ಎಂದು ನಿಶ್ಚಯಿಸಿದರು. ಆದರೆ ಮಾಡುವುದಾದರೂ ಏನನ್ನು? ಅವರಲ್ಲಿ ಆಯುಧವಿರಲಿಲ್ಲ. ಖಿರ್ದಿ ಪುಸ್ತಕ ಶಾನುಭೋಗರ ಬ್ರಹ್ಮಾಸ್ತ್ರ, ಅದನ್ನೇ ಉಪಯೋಗಿಸಬೇಕು. ಏನು ಮಾಡುವುದು, ಸರ್ವನಾಶೇ ಸಮುತ್ಪನ್ನೇ....ಆದರೆ ಅದು ಹುಲಿಯ ಮೇಲೇನು ಫಲಿಸೀತು! ಅದನ್ನು ಪ್ರಯೋಗಿಸಿದ್ದರಿಂದ ಹುಲಿ ಸಾಯುವುದಂತಿರಲಿ, ಅದರ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಆದರೂ ಕ್ಷಣಕಾಲ ಹುಲಿ ಅಪ್ರತಿಭವಾದರೆ, ಅದರ ಗಮನ ಸ್ವಲ್ಪ ಚಲಿಸಿದರೆ, ಅಷ್ಟರಲ್ಲಿ ಸಮೀಪದ ಮರಕ್ಕೆ ಹಾರಿ ಮೇಲಕ್ಕೇರಬಹುದೆಂಬ ಹುಚ್ಚು ಆಸೆ. ಅಂತೂ ಮನುಷ್ಯ ಪ್ರಯತ್ನದಲ್ಲಿರುವುದನ್ನೆಲ್ಲಾ ಮಾಡಿಬಿಡಬೇಕು, ಅದರ ಮೇಲೆ—ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ!

ಇತ್ತ ಹುಲಿಗೂ ವಿಪರೀತವಾದ ಆಯಾಸ. ಶಾನುಭೋಗರು ನಿಂತ ಕಡೆ ತಿರುಗುತ್ತಿದ್ದವರು. ಹುಲಿಯಾದರೋ ಪ್ರತಿಸಾರಿಯೂ ಅತ್ತಲಿಂದಿತ್ತ

ಇತ್ತಲಿಂದತ್ತ ನೆಗೆಯಬೇಕಾಗಿತ್ತು. ಆದರ ಮೂಳೆಗಳೆಲ್ಲಾ ಕಳಚಿಕೊಂಡು ಬೀಳುವುವೋ ಎನ್ನುವಂತಾಗಿತ್ತು. ಮೊದಲು ಹತ್ತಿಪ್ಪತ್ತು ಸಾರಿಯಾದ ಮೇಲೆ ನೆಗೆಯುವುದಂತೂ ಕೇವಲ ಯಾಂತ್ರಿಕ ಕ್ರಿಯೆಯಾಗಿ ಪರಿಣಮಿಸಿತ್ತು. ತಾನು ಏತಕ್ಕೆ ಹಾರುತ್ತಿದ್ದೇನೆಂಬುದೇ ಮರೆತುಹೋಗಿದ್ದಿರಬಹುದು. ಖಿರ್ದಿ ಪುಸ್ತಕ ಆದರ ಮುಖಕ್ಕೆ ಒಂದು ಬಡಿದಾಗ ಹುಲಿಗೆ ಪೆಟ್ಟೇನೂ ಆಗಲಿಲ್ಲ, ಆಶ್ಚರ್ಯವಾಯಿತು. ಬಳಲಿಕೆಯಿಂದ ಜಡವಾಗಿದ್ದ ಮನಸ್ಸಿಗೆ ಪರಿಸ್ಥಿತಿಯ ಅರಿವಾಗಲು ಅರೆನಿಮಿಷ ಹಿಡಿಯಿತು. ಆ ಅರೆ ನಿಮಿಷದಲ್ಲಿ ಶಾನುಭೋಗರು "ದೇವರೆ, ಮರ ಹತ್ತುವಷ್ಟು ಅವಕಾಶ ಕರುಣಿಸು" ಎನ್ನುತ್ತಾ ಒಂದೇ ಉಸಿರಿನಲ್ಲಿ ಮರದ ಕಡೆಗೆ ಧಾವಿಸಿದರು. ಆದರೆ ದೇವರ ರಕ್ಷಣಾವ್ಯವಸ್ಥೆ ಬೇರೆ ಇತ್ತು. ಮರಕ್ಕೆ ಕೆಲವು ಅಡಿ ದೂರದಲ್ಲಿ ನೆಲದಿಂದ ಮೇಲೆದ್ದುಕೊಂಡಿದ್ದ ಕಲ್ಲನ್ನು ಎಡವಿ ಶಾನುಭೋಗರು ಬಿದ್ದರು. ಮೊದಲೇ ದಣಿವಾಗಿತ್ತು. ಬಿದ್ದ ಪೆಟ್ಟಿಗೆ ಪ್ರಜ್ಞೆ ತಪ್ಪಿತು.

ಕೆಲವು ನಿಮಿಷಗಳಾದ ಮೇಲೆ ಮೂರ್ಛೆ ತಿಳಿಯಿತು. ಆದರೂ ಆಗ ಅವರಲ್ಲಿ ಯಾವುದೊಂದು ಇಂದ್ರಿಯವೂ ಚುರುಕಾಗಿ ಕೆಲಸ ಮಾಡುತ್ತಿರಲಿಲ್ಲ, ಮನಸ್ಸು ಅಸ್ಪಷ್ಟ ಸ್ಥಿತಿಯಲ್ಲಿತ್ತು; ಕಣ್ಣೂ ಮಂಜು ಮಂಜು. ತಲೆಯೆತ್ತಿ ಸುತ್ತಲೂ ನೋಡುವಷ್ಟು ಚೈತನ್ಯವಿರಲಿಲ್ಲ. ಮಲಗಿದ್ದ ಹಾಗೆಯೇ ಕಡೆಗಣ್ಣು ಹೊರಳಿಸಿ ನೋಡಿದರೆ, ಸಮೀಪದಲ್ಲಿ ಚಿಂತಾಮಗ್ನವಾಗಿದ್ದ ಹುಲಿಯೊಂದು ಕುಳಿತಿದೆ: ಕತ್ತಲುಗಟ್ಟಿದ್ದ ಅವರ ಮನಸ್ಸಿಗೆ ಇದು ವಿಚಿತ್ರವಾಗಿ ಕಂಡು ಸ್ವಲ್ಪ ನಕ್ಕರು—ಆ ಹುಲಿಯ ಮುಖದ ಮೇಲೆ ತೇಲುತ್ತಿದ್ದ ಬೆಪ್ಪು ಕಳೆ ಶುದ್ಧ ಹಾಸ್ಯಾಸ್ಪದವಾಗಿ ತೋರಿತು....ಮತ್ತೆ ಅವರ ಕಣ್ಣು ಆಯಾಸದಿಂದ ತಾನಾಗಿಯೇ ಮುಚ್ಚಿಕೊಂಡಿತು....ಅದೇನೋ ಸದ್ದು —ಘಂಟೆಯ ಸದ್ದೆ? ಹುಲಿ ಘಂಟೆ ಬಾರಿಸುತ್ತಿದೆ....ಅಲ್ಲ, ದೇವರ ಪೂಜೆ ಆಗಮಾರ್ಥಂತು ದೇವಾನಾಂ....ನೈವೇದ್ಯಕ್ಕೇನೂ ಇಲ್ಲವೆ....ಶಾನುಭೋಗರ ಅಸಂಬದ್ಧ ಯೋಚನೆಗಳು ಅಲ್ಲಿಗೇ ನಿಂತವು. ಹುಲಿಯ ಉಸಿರಿನ ಅಸಹ್ಯ ವಾಸನೆಯಿಂದಲೋ ಏನೋ, ಅವರು ಮತ್ತೆ ಮೂರ್ಛೆ ಹೋದರು. ಎಷ್ಟು ಹೊತ್ತು ಆ ಸ್ಥಿತಿಯಲ್ಲಿದ್ದರೋ ಅವರಿಗಂತೂ ತಿಳಿಯದು. ಎಚ್ಚತ್ತಾಗ ಅವರ ಬಳಿಯಲ್ಲಿ ನಾಲ್ಕೈದು ಜನ ನಿಂತಿದ್ದರು. ತಮ್ಮ ಮುಖವೆಲ್ಲಾ ಒದ್ದೆಯಾಗಿತ್ತು; ಇನ್ನೂ ಯಾರೋ ನೀರು ಚುಮುಕಿಸುತ್ತಲೇ ಇದ್ದರು.

ಶಾನುಭೋಗರು ಮೂರ್ಛೆಯಲ್ಲಿದ್ದಾಗ ನಡೆದದ್ದು ಇಷ್ಟು: ಚಿಕ್ಕ ನಾಯಕನ ಹಳ್ಳಿಗೆ ತೆಂಗಿನಕಾಯಿ ತುಂಬಿಕೊಂಡು ಹೋಗಿದ್ದ ಕೆಲವು

ರೈತರು ತಿಂಗಳ ಬೆಳಕಿನಲ್ಲಿ ಗಾಡಿ ಹೊಡೆದುಕೊಂಡು ತಮ್ಮ ಹಳ್ಳಿಗೆ ಹಿಂದಿರು ಗುತ್ತಿದ್ದರು. ಶಾನುಭೋಗರು ಬಿದ್ದ ಸ್ಥಳಕ್ಕೆ ಕಾಲು ಹರದಾರಿಯಿದೆ ಎನ್ನು ವಾಗ ಎತ್ತುಗಳು ಏನು ಮಾಡಿದರೂ ಮುಂದೆ ಹೋಗದೆ ಕಣಿ ಹಾಕಿ ಕೊಂಡವು. ಅದೇ ವೇಳೆಗೆ ಎದೆ ನಡುಗುವಂತೆ ಹುಲಿಯ ಗರ್ಜನೆ ಕೇಳಿ ಸಿತು. ಎತ್ತುಗಳ ಘಂಟೆಯ ಶಬ್ದವನ್ನು ಕೇಳಿದ ಹುಲಿ ಕೆಲವು ನಿಮಿಷ ತಡೆದು ನೋಡಿತು. ಆದರೆ ರೈತರ ಮಾತು ಕೇಳಿಬಂದ ಮೇಲೆ ನಿರಾಶೆ ಯಿಂದಲೂ ಕೋಪದಿಂದಲೂ ಗರ್ಜಿಸಿ ಪಲಾಯನ ಮಾಡಿತು. ಗಾಡಿ ಯವರು ಐದು ಜನವಿದ್ದರೂ ಎಷ್ಟೇ ಆಗಲಿ ಹುಲಿಯೆಂದರೆ ಭಯವಲ್ಲವೆ! ಸ್ವಲ್ಪ ಹೊತ್ತು ಗಾಡಿಯ ಬಳಿಯಲ್ಲೇ ನಿಂತು ನೋಡಿದರು. ಮತ್ತೆ ಗರ್ಜನೆ ಕೇಳಲಿಲ್ಲ. ಅನಂತರ ಅವರು ತಮ್ಮಲ್ಲಿದ್ದ ಕೋವಿಯಿಂದ ಒಂದೆರಡು ತೋಟಾ ಹಾರಿಸಿ, ಕೈಲಾದಷ್ಟು ಗಲಭೆ ಮಾಡುತ್ತಾ ತೆಂಗಿನಗರಿಯ ಪಂಜು ಹೊತ್ತಿಸಿಕೊಂಡು ಜಾಗರೂಕತೆಯಿಂದ ಮುಂದುವರಿದರು. ಮೂರ್ಛೆ ಯಲ್ಲಿ ಬಿದ್ದಿದ್ದ ಶಾನುಭೋಗರನ್ನು ಕಂಡು ಮುಖದ ಮೇಲೆ ನೀರೆರಚಿ ಎಚ್ಚರಿಸಿದರು.

ಮೊದಲೇ ಹೇಳಿದಂತೆ ಶಾನುಭೋಗರು ಗಟ್ಟಿಮನಸ್ಸಿನವರು. ಬೇಗ ಚೇತರಿಸಿಕೊಂಡೆದ್ದು ನಡೆದ ಸಂಗತಿಯನ್ನೆಲ್ಲಾ ನೆನಪಿಗೆ ತಂದುಕೊಂಡರು. ಮೈಕೈ ಸ್ವಲ್ಪ ನಡುಗುತ್ತಿತ್ತೇ ಹೊರತು ಅವರಿಗೆ ಮೈಯಲ್ಲಿ ಗಾಯವೇನೂ ಆಗಿರಲಿಲ್ಲ. ಹುಲಿಯ ಭಯವೇನೋ ಕಳೆದಿತ್ತು; ಖಿರ್ದಿ ಪುಸ್ತಕವನ್ನೂ ಮತ್ತೆ ಪಡೆದು ಭದ್ರಮಾಡಿಕೊಂಡದ್ದಾಯಿತು. ಆದರೆ ಅವರ ಮನಸ್ಸ ನ್ನೆಲ್ಲಾ ವಿಸ್ಮಯ ಆವರಿಸಿತ್ತು. ತಾವು ಉಳಿದದ್ದು ಹೇಗೆ? ನಿಸ್ಸಹಾಯ ರಾಗಿ ಪ್ರಜ್ಞೆಯಿಲ್ಲದೆ ಬಿದ್ದಿದ್ದಾಗ ಹುಲಿ ತಮ್ಮನ್ನು ಕೊಂದು ಎಳೆದು ಕೊಂಡು ಹೋಗಲಿಲ್ಲವೇಕೆ? ಸ್ವಲ್ಪ ಹೊತ್ತು ಯೋಚಿಸಿ ಗಾಡಿಯವರನ್ನು ಕೇಳಿದರು. "ನಾನು ಮುಖ ಮೇಲಾಗಿ ಬಿದ್ದಿದ್ದೆನೆ?" ಎಂದು. ಇಲ್ಲ, ಅವರು ಬಿದ್ದಿದ್ದದ್ದು ಬೆನ್ನು ಮೇಲಾಗಿ. ಶಾನುಭೋಗರ ಸಮಸ್ಯೆಗೆ ಉತ್ತರ ದೊರೆತಂತಾಯಿತು. ಅವರು ಎಡವಿ ಬಿದ್ದಾಗಲೂ ಹುಲಿಗೆ ಪರಾಙ್ಮುಖ ರಾಗಿಯೇ ಬಿದ್ದರು. ಆದುದರಿಂದಲೇ ಹುಲಿ ಅವರನ್ನು ಕೊಲ್ಲಲಾರದೆ ಹೋಯಿತು. ಕೊನೆಯವರೆಗೂ ಆ ಪ್ರಾಣಿ ತನ್ನ ಕುಲಧರ್ಮವನ್ನು ಪಾಲಿಸಿಕೊಂಡೇ ಬಂದಿತ್ತು! ಉದಾರಹೃದಯರಾದ ಶಾನುಭೋಗರ ಬಾಯಿಂದ 'ಭಲೆ' ಎಂಬ ಮೆಚ್ಚಿಕೆಯ ಮಾತು ಹೊರಟಿತು. ಸಂದರ್ಭ ವನ್ನರಿಯದೆ, "ಈ ಹಾರುವಯ್ಯನಿಗೆ ಹುಚ್ಚು ಹಿಡಿಯಿತೋ" ಎನ್ನುವಂತೆ

ನೋಡುತ್ತಿದ್ದ ಗಾಡಿಯವರಿಗೆ ಅಂದಿನ ಕಥೆಯನ್ನೆಲ್ಲಾ ಹೇಳಿದರು.

ಶಾನುಭೋಗರು "ಕುಡಿದ ನೀರು ಅಲುಗದ ಹಾಗೆ" ಎನ್ನಲಾಗ ದಿದ್ದರೂ ಜೀವಸಹಿತ ಮನೆ ಸೇರಿಕೊಂಡರು. ರಸದೂಟವನ್ನು ಮಾಡಿದರು. "ಹುಲಿ ಈಗ ಎಷ್ಟು ಹಸಿದಿರಬೇಕು" ಎಂಬ ಯೋಚನೆ ಬಂದಾಗ ಅವರ ವದನಾರವಿಂದದಲ್ಲಿ ಮುಗುಳುನಗೆ ಮೂಡಿತು; ಊಟದ ರುಚಿ ಇಮ್ಮಡಿ ಯಾಯಿತು. ಅವರಿಗೆ ಅರೆ ನಿಮಿಷದ ಅವಕಾಶವನ್ನು ಒದಗಿಸಿಕೊಟ್ಟು ಪ್ರಾಣವನ್ನು ಕಾಪಾಡಿದ ಆ ಖಿರ್ದಿ ಪುಸ್ತಕ ಎಂದಿನಂತೆ ತನ್ನ ಜೀರ್ಣ ವಸ್ತ್ರದ ಹೊದಿಕೆಯಲ್ಲಿ ತೊಲೆಯ ಮೇಲೆ ವಿಶ್ರಾಂತಿ ಪಡೆಯುತ್ತಿತ್ತು. ಶಾನುಭೋಗರ ದೃಷ್ಟಿಯು ಅನಂತವಾತ್ಸಲ್ಯದಿಂದ, ಕೃತಜ್ಞತೆಯಿಂದ, ಆ ಕಡೆಗೆ ಹೊರಳಿತು.

ಆ ಶಾನುಭೋಗರಂತೂ ಈಗ ಇಲ್ಲ. ಆದರೆ ಖಿರ್ದಿ ಪುಸ್ತಕ ಇಂದಿಗೂ ಭದ್ರವಾಗಿದೆ. ದೇವರ ಮಂದಾಸನದ ಮೇಲೆ ಮಂಡಿಸಿ ಶಾನು ಭೋಗರ ಸಂತತಿಯವರಿಂದ ಈಗಲೂ ಪೂಜೆಯನ್ನು ಕೈಗೊಳ್ಳುತ್ತಿದೆ. ಅವರೆಲ್ಲರ ಕೃತಜ್ಞತೆಯೂ ಅದಕ್ಕೆ ಸಂದಿದೆ. ಆದರೆ ನಿಜವಾಗಿ ನೋಡಿ ದರೆ ಶಾನುಭೋಗರು ಉಳಿದದ್ದು ಖಿರ್ದಿ ಪುಸ್ತಕದಿಂದಲ್ಲ, ಹುಲಿಯ ಧರ್ಮಶ್ರದ್ಧೆಯಿಂದ. ಆ ಗುಣವನ್ನು ಹಾಡಿ ಹೊಗಳುವ ಭಾಗ್ಯ ನನ್ನ ಪಾಲಿಗೆ ಬಂದಿದೆ.

## ಕಾರ್ ರಿಪೇರಿ—ನೀನೇ ಮಾಡಿ ನೋಡು

ಈಚೆಗೆ ಈ ಕೂಗು ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ನಾದುರಸ್ತಾದ ಯಂತ್ರಗಳನ್ನು ನಾವೇ ಸರಿಪಡಿಸಿಕೊಳ್ಳುವುದಕ್ಕೆ ಅನುಕೂಲವಾಗುವಂತೆ ತಕ್ಕ ಹತೆಯಾರುಗಳನ್ನು ತಯಾರಿಸುವುದಕ್ಕಾಗಿಯೇ ಕೆಲವು ಕಾರ್ಖಾನೆಗಳನ್ನು ಸ್ಥಾಪಿಸಿದ್ದಾರಂತೆ. "ನಿಮ್ಮ ಕಾರು ಜೇನೆ ಬಿದ್ದಾಗಲೆಲ್ಲಾ ಗ್ಯಾರೇಜಿಗೆ ತೆಗೆದುಕೊಂಡು ಹೋಗಬೇಡಿ. ರಿಪೇರಿ ಕೆಲಸ ನಿಮ್ಮನ್ನು ತಿಂದು ಬಿಡುತ್ತದೆ. ನೀವೇ ಆ ರಿಪೇರಿ ಮಾಡಿ ನೋಡಿ. ನಿಮ್ಮ ಹಣವನ್ನು ಉಳಿಸಿಕೊಳ್ಳಿ; ನಿಮ್ಮ ಕಾಲವನ್ನೂ ಉಳಿಸಿಕೊಳ್ಳಿ. ಆಳು ಮಾಡುವ ಕೆಲಸ ಹಾಳು!"—ಎಲ್ಲರೂ ಇಂಥ ಬುದ್ಧಿವಾದ ಹೇಳುವವರೇ. ಇದನ್ನು ನೋಡಿದರೆ ಪ್ರಪಂಚವೆಲ್ಲಾ ನನ್ನ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿದಂತೆ ತೋರುತ್ತದೆ. ನಾನು ಅನ್ಯಾಯವಾಗಿ ಹಣ ವೆಚ್ಚ ಮಾಡುವುದಲ್ಲದೆ ಕಾರನ್ನೂ ಕೆಡಿಸಿಕೊಂಡು ನಷ್ಟಕ್ಕೀಡಾಗುತ್ತೇನಲ್ಲಾ ಎಂದು ಪ್ರಪಂಚವೇ ಕಣ್ಣೀರು ಬಿಡುತ್ತಿದೆ. ಇಷ್ಟೊಂದು ಸಹಾನುಭೂತಿ, ಅನುಕಂಪ ಎಲ್ಲಿಂದ ಬಂತು—ಅದೂ ಈ ಯುದ್ಧಾನಂತರದ ಧಾರ್ಮಿಕ ಅವನತಿಯ ಕಾಲದಲ್ಲಿ! ನಾವಿರುವುದು ಕಲಿಯುಗದಲ್ಲೋ ಅಥವಾ ಕೃತಯುಗದಲ್ಲೋ? ಮಾನವನ ಸ್ವಭಾವದ ವಿಷಯದಲ್ಲಿ ನಾನು ನಿರಾಶಾವಾದಿಯೇನೂ ಅಲ್ಲ; ದೋಷೈಕದೃಕ್ ಎಂಬ ನಿಂದೆ ನನ್ನ ವಿಷಯದಲ್ಲಿ ಸಲ್ಲದು. ಆದರೂ ಈ 'ನೀನೇ ಮಾಡಿ ನೋಡು' ಚಳುವಳಿಯನ್ನು ವಿಶ್ವಾಸದಿಂದ ಸ್ವಾಗತಿಸಲಾರೆ. ಚಳುವಳಿಯ ಉದ್ದೇಶ ನಾನು ಸ್ವಾವಲಂಬಿಯಾಗಬೇಕೆಂದಾಗಲಿ, ನನ್ನ ಕೈಚಳಕ ಹೆಚ್ಚಬೇಕೆಂದಾಗಲಿ, ನನ್ನ ಹಣ ಉಳಿಯಬೇಕೆಂದಾಗಲಿ ಇರಲಾರದು. ಸ್ವಾರ್ಥದಿಂದ ಕಲುಷಿತವಾದ ಒಳಉದ್ದೇಶವೇನೋ ಇರಬೇಕೆಂಬ ಸಂಶಯ ನನ್ನನ್ನು ಬಾಧಿಸುತ್ತಿದೆ.

ಇಂಥ ಬುದ್ಧಿವಾದವನ್ನು ಕೇಳಿದಾಗ ನನಗೆ ವೃತ್ತಪತ್ರಿಕೆಗಳಲ್ಲಿ ಬರುವ ಜಾಹೀರಾತುಗಳ ನೆನಪು ಬರುತ್ತದೆ. ಯಾವುದೋ ಕಾರ್ಖಾನೆಯಲ್ಲಿ ಯುವಕನೊಬ್ಬ ನೌಕರಿಗಿದ್ದಾನೆ.' ಬುದ್ಧಿವಂತ, ಶ್ರದ್ಧಾಳು—ಆದರೆ ಅವನು ಭದ್ರಾಕರಣ ಮಾಡಿಕೊಂಡಿರುವುದು ಸಮರ್ಪಕವಾಗಿಲ್ಲ; ಮುಖದ ಮೇಲೆ ಕೂಳೆ ಕಾಣುತ್ತದೆ. ಆದ್ದರಿಂದ ಮೇಲುದರ್ಜೆಯ ಕೆಲಸ ಖಾಲಿ ಬಿದ್ದ ಸಮಯದಲ್ಲಿ ಯಜಮಾನನ ಗಮನ ಅವನ ಕಡೆಗೆ ಹರಿಯು

ವುದೇ ಇಲ್ಲ. ಆಗ ಯುವಕನ ಸ್ನೇಹಿತನೊಬ್ಬ ಸಲಹೆಕೊಡುತ್ತಾನೆ: "ನಾಳೆಯಿಂದ ಸೆವನ್ ಓ ಕ್ಲಾಕ್ ಬ್ಲೇಡನ್ನು ಉಪಯೋಗಿಸು" ಎಂದು. ಮೂರು ದಿನಗಳಾದ ಮೇಲೆ ಕಾರ್ಖಾನೆಯ ಮಾಲೀಕ ಆ ಯುವಕನ ಮಿಂಚುವ ಕೆನ್ನೆಗಳನ್ನು ನೋಡಿ ಆನಂದಭರಿತನಾಗಿ "ಹುಡುಗ ಬಹಳ ಸುಟಿಯಾಗಿದ್ದಾನೆ. ಅವನಿಗೆ ಮ್ಯಾನೇಜರ್ ಕೆಲಸ ಕೊಡಿ" ಎಂದು ಅಪ್ಪಣೆ ಮಾಡುತ್ತಾನೆ.

ಪತ್ರಿಕೆಗಳಿಗೆ ಈ ಜಾಹೀರಾತು ಕೊಟ್ಟವನು "ಅಯ್ಯೋ, ಈ ಹುಡುಗ ಇನ್ನೂ ಮ್ಯಾನೇಜರಾಗಲಿಲ್ಲವಲ್ಲ!" ಎಂದು ಪರಿತಪಿಸಿ ಕಣ್ಣೀರಿನಲ್ಲಿ ಕೈ ತೊಳೆಯುತ್ತಿದ್ದನೆ ? ಅವನ ಉದ್ದೇಶವೆಂದರೆ ಯುವಕನ ಅಭ್ಯುದಯವಲ್ಲ, ಸೆವನ್ ಓ ಕ್ಲಾಕ್ ಬ್ಲೇಡು ಹೆಚ್ಚಾಗಿ ಮಾರಾಟವಾಗಲೆಂದು. 'ನೀನೇ ಮಾಡಿ ನೋಡು' ಎಂಬ ಘೋಷಣೆಯ ಒಳಗುಟ್ಟೂ ಇಷ್ಟೇ ಎಂದು ನನ್ನ ನಂಬಿಕೆ. ನೀವೇ ಮಾಡಿದ್ದರಿಂದ ನಿಮ್ಮ ಹಣವೇನೂ ಉಳಿಯುವುದಿಲ್ಲ. ಕಾರಿನ ಯಂತ್ರ ಮತ್ತಷ್ಟು ಕೆಟ್ಟು ವರ್ಕ್‌ಷಾಪಿನವರ ಮತ್ತು ಗ್ಯಾರೇಜಿನವರ ಜೇಬಿಗೆ ಮತ್ತಷ್ಟು ಹಣ ಸೇರುತ್ತದೆ. ಈ ಕೂಗನ್ನೆಬ್ಬಿಸುವವರು ಅವರಿರಬೇಕು ಅಥವಾ ಅವರ ದಳ್ಳಾಳಿಗಳಿರಬೇಕು.

ದೇವರ ಸೃಷ್ಟಿಯಲ್ಲಿ ತರ್ಕಬದ್ಧವಾದ ವ್ಯವಸ್ಥೆಯಿದೆ. ಆತ ಮಾಂಸಾಹಾರಿಯಾದ ಹುಲಿಯನ್ನು ಸೃಷ್ಟಿಸಿದರೆ ಜೊತೆಗೇ ಅದರ ಆಹಾರಕ್ಕೆ ಬೇಕಾದ ಜಿಂಕೆಯನ್ನೂ ಸೃಷ್ಟಿಸುತ್ತಾನೆ. ಯಂತ್ರಗಳನ್ನು ಉಪಯೋಗಿಸುವವರೆಲ್ಲರೂ ವರ್ಕ್‌ಷಾಪಿನವರ ಹೊಟ್ಟೆ ತುಂಬಲೆಂದು ದೇವರು ಸೃಷ್ಟಿಸಿರುವ ಬೇಟೆಯ ಮೃಗಗಳಂತೆ. ವರ್ಕ್‌ಷಾಪಿನವರು ಹುಲಿಗಳು, ನಾವು ಜಿಂಕೆಗಳು. ಈ ದೈವನಿಯಮವನ್ನು ಮೀರಲಾಗುವುದಿಲ್ಲ.

ಯಂತ್ರವೆಂದರೆ ಈ ಘಳಿಗೆ ಸರಿಯಾಗಿದ್ದು ಮುಂದಿನ ಘಳಿಗೆ ಕೆಟ್ಟು ಹೋಗುವ ವಸ್ತುವಿಶೇಷ. ಅದು ಜನರ ಬೇಸರವನ್ನೂ ದೇಹಶ್ರಮವನ್ನೂ ಕಳೆಯಲು ಹುಟ್ಟಿತೆಂದು ಭಾವಿಸುವುದು ಶುದ್ಧ ಹುಚ್ಚುತನ. ಯಂತ್ರ ಹುಟ್ಟಿದ್ದು ನಮ್ಮ ಕರ್ಮಫಲ ಬೇಗ ಸವೆಯಲೆಂದು ; ಅನುಭವಿಸಬೇಕಾದ ಕಷ್ಟನಿಷ್ಠುರಗಳೆಲ್ಲವನ್ನೂ ಈ ಜನ್ಮದಲ್ಲೇ ಅನುಭವಿಸಿ ಪುನರ್ಜನ್ಮದ ಸಂಕಟವನ್ನು ಪರಿಹರಿಸಿಕೊಳ್ಳಲೆಂದು. ಯಂತ್ರಗಳನ್ನು ತಯಾರುಮಾಡುವವರು ಅವನ್ನು ಮಾರುವುದಕ್ಕಾಗಿ ತಯಾರುಮಾಡುತ್ತಾರೆ, ನಮ್ಮ ಸೌಖ್ಯಕ್ಕಾಗಿ ಅಲ್ಲ. ಅವು ಎಷ್ಟು ಬೇಗ ಕೆಟ್ಟುಹೋದರೆ ಅಷ್ಟು ಬೇಗ ಹೊಸ ಯಂತ್ರಗಳನ್ನು ಮಾಡಬಹುದು. ನೀವೇ ರಿಪೇರಿಮಾಡಿ ನೋಡಿದರೆ ಯಂತ್ರ

ಮತ್ತಷ್ಟು ಬೇಗ ಕೆಡುತ್ತದೆ. ಇದೇ ಈ ಘೋಷಣೆಯ ಹಿಂದಿನ ತರ್ಕ. ಕೆಟ್ಟುಹೋಗುವ ಯಂತ್ರಗಳನ್ನು ಮತ್ತೆ ಮತ್ತೆ ಕೊಳ್ಳಬೇಕಾದದ್ದೇನು ಎಂಬ ಪ್ರಶ್ನೆ ಸಲ್ಲದು. ಪತಂಗವು ದೀಪದ ಉರಿಗೆ ಎರಗಬೇಕಾದದ್ದೇನು ? ಅದು ಬ್ರಹ್ಮ ಬರೆದ ಬರಹ. ಎಷ್ಟೇ ತಿಳಿವಳಿಕೆಯುಳ್ಳವರಾಗಲಿ ವಿಚಾರ ಪರರಾಗಲಿ, ಒಂದಲ್ಲ ಒಂದು ವೇಳೆ ಹಳ್ಳಕ್ಕೆ ಬೀಳುತ್ತಾರೆಂಬ ಮಾತಿಗೆ ನಾನೇ ಉದಾಹರಣೆ.

ನಾನು ಸಾಮಾನ್ಯವಾಗಿ ಯಂತ್ರಗಳ ಗೊಡವೆಗೇ ಹೋಗುವವನಲ್ಲ. ಆದರೂ ಕಾರ್ ಇಟ್ಟುಕೊಂಡು ಮೆರೆಯಬೇಕೆಂಬ ಆಸೆ ಬೆನ್ನು ಹತ್ತಿದ ಭೇತಾಳವಾಯಿತು. ನನ್ನ ಉದ್ಯೋಗಕ್ಕೆ ಕಾರಿನ ಅವಶ್ಯಕತೆಯೇನೂ ಇಲ್ಲ. ಕಾರ್ ಇಟ್ಟುಕೊಳ್ಳಬೇಕಾದರೆ ಅದಕ್ಕಾಗಿಯೇ ಬೇರೆ ಭತ್ಯ ಬರುವಂಥ ನೌಕರಿ ಇರಬೇಕು; ಯಾವುದಾದರೂ ವರ್ಕ್‌ಷಾಪಿನಲ್ಲಿ ರಿಪೇರಿ ಕೆಲಸ ವನ್ನೆಲ್ಲಾ ಬಿಟ್ಟಿಮಾಡಿಸುವ ಸೌಕರ್ಯವಿರಬೇಕು. ಇಲ್ಲದಿದ್ದರೆ ಅದರ ತಂಟೆಗೇ ಹೋಗಬಾರದು. ಕಾರ್ ಇಟ್ಟುಕೊಳ್ಳುವುದಕ್ಕೆ ಬದಲಾಗಿ ಕಾರ್ ಇರುವ ಸ್ನೇಹಿತನನ್ನು ಸಂಪಾದಿಸುವುದು ಬುದ್ಧಿವಂತಿಕೆಯ ಲಕ್ಷಣ. ಮೂಢರು ಕಾರ್ ಕೊಳ್ಳುತ್ತಾರೆ ; ಬುದ್ಧಿವಂತರು ಅದರಲ್ಲಿ ತಿರುಗುತ್ತಾರೆ. ಈಗ ನಾನು ಕಾರನ್ನು ಕೊಂಡಿದ್ದೇನೆ.

ನನ್ನ ಬಯಕೆಗೆ ಪಾತಿ ಕಟ್ಟಿ ನೀರು ಹೊಯ್ದು ಬೆಳೆಸಿದವನು ನಮ್ಮ ಗೋಪಾಲ. ಅವನು ಬಹಳ ದಿನಗಳಿಂದ ಕಾರ್ ಇಟ್ಟುಕೊಂಡಿದ್ದಾನೆ. ಒಂದು ದೃಷ್ಟಿಯಿಂದ ನೋಡಿದರೆ ಆ ಯಂತ್ರದಿಂದ ಅವನಿಗೆ ಸುಖ ಲಭಿಸಿದೆ ಯೆಂದೂ ಹೇಳಬಹುದು. ಯಂತ್ರಗಳ ವಿಷಯದಲ್ಲಿ ನಮಗೆಲ್ಲಾ ಯಾವುದು ಕಷ್ಟವೆಂದು ತೋರುತ್ತದೋ ಅದೇ ಅವನಿಗೆ ಸುಖ. ಅವನು ಈ 'ನೀನೇ ಮಾಡಿನೋಡು' ಘೋಷಣೆಗೆ ಮರುಳಾದವನು. ಕಾರು ನಡುರಸ್ತೆಯಲ್ಲಿ ತೊಂದರೆ ಕೊಟ್ಟರೆ ಅವನಿಗೆ ಹಬ್ಬದ ಊಟ ಸಿಕ್ಕಿದಂತೆ. ಅವನದೇ ಒಂದು ಸ್ವರ್ಗದ ಕಲ್ಪನೆಯಿದೆ. ಆ ಸ್ವರ್ಗದಲ್ಲಿ ಐರಾವತ, ಉಚ್ಚೈಶ್ರವಸ್ಸು, ಅಪ್ಸರೆಯರು, ಪುಷ್ಪಕವಿಮಾನ, ಮುಂತಾದ್ದೇನೂ ಇಲ್ಲ. ಯಾವುದೋ ನಿರ್ಜನವಾದ ರಸ್ತೆ; ಅದರ ಮಧ್ಯದಲ್ಲಿ ಮೊಂಡತನ ಮಾಡಿ ನಿಂತಿರುವ ಕಾರು. ಸುತ್ತಿನ ನಾಲ್ಕು ಮೈಲಿ ಫಾಸಲೆಯಲ್ಲಿ ಯಾವ ಊರೂ ಇರಬಾರದು. ಇವನು ವಜ್ರಕವಚವನ್ನು ಧರಿಸಿದ ವೀರನಂತೆ ಠೀವಿಯಿಂದ ಮೆಕ್ಯಾನಿಕ್ಕನ ಬಟ್ಟೆಗಳನ್ನು ಧರಿಸಿ ಕಾರಿನಿಂದ ಇಳಿಯಬೇಕು—ಶ್ರೀಕೃಷ್ಣನು 'ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ' ಎಂದ ಮಾತು ಆ ಬಟ್ಟೆಗಳಿಗೆ

ಚೆನ್ನಾಗಿ ಅನ್ವಯಿಸುತ್ತದೆ. ಅನಂತರ ಕಾರಿಗೆ ಜಾಕ್ ಹಾಕಿ ನಿಲ್ಲಿಸಿ ಅದ ಕೆಳಗೆ ಮುಖ ಮೇಲಾಗಿ—ಕುಸ್ತಿಯವರು 'ಚಿತ್ತು' ಎನ್ನುತ್ತಾರಲ್ಲ ಆ ಸ್ಥಿತಿಯಲ್ಲಿ ಮಲಗಿ ಯಂತ್ರವನ್ನು ಪರಿಶೀಲಿಸುತ್ತಿರಬೇಕು. ಹತ್ತಿರದಲ್ಲಿ ಸ್ಪ್ಯಾನರ್, ಪಂಪು, ಟೈರ್‌ಲೀವರ್, ತಂತಿಯ ಸುರುಳಿ, ರಬ್ಬರ್ ಟ್ಯೂಬಿನ ಚೂರುಗಳು—ಇತ್ಯಾದಿ ಸಲಕರಣೆಗಳು ಅಸ್ತವ್ಯಸ್ತವಾಗಿ ಬಿದ್ದಿರಬೇಕು. ಹೆಂಡತಿ ಮಕ್ಕಳು ಇವನ ಸಾಹಸವನ್ನು ಬೆರಗಾಗಿ ನೋಡುತ್ತಾ ಶಾಭಾಸ್ ಗಿರಿಯ ವೃಷ್ಟಿ ಕರೆಯಲು ಸಿದ್ಧರಾಗಿ ನಿಂತಿರಬೇಕು—ನಡುಹಗಲಿನ ಬೇಸಗೆಯ ಬಿಸಿಲಿದ್ದರೆ ಮತ್ತೂ ಒಳ್ಳೆಯದು. "ಸ್ಕ್ರೂ ಡ್ರೈವರ್ ಏಕೆ ತರಲಿಲ್ಲ ? ಕಟಿಂಗ್ ಪ್ಲೈಯರ್ ಎಲ್ಲಿ ? ನಿನ್ನ ನೆನಪಿಗೆ ಬೆಂಕಿಯಿಟ್ಟರು!" ಎಂದು ಇವನು ಎಲ್ಲರ ಮೇಲೂ ರೇಗುತ್ತಿರಬೇಕು—ಇದೇ ಗೋಪಾಲನ ಸ್ವರ್ಗ. ಇಷ್ಟೆಲ್ಲಾ ಅವಾಂತರ ಮಾಡಿಕೊಂಡು ಹೇಗೋ ಕಾರನ್ನು ಪುಸಲಾಯಿಸಿ ನಡೆಸುತ್ತಾನೆ. ಊರಿಗೆ ಹೋದ ಮೇಲೆ ವರ್ಕ್‌ಷಾಪಿನವರು "ಏನು ಸ್ವಾಮಿ, ಕಾರಿನಲ್ಲಿ ಯಾರೋ ನಾಡಾಡಿಗಳ ಕೈವಾಡ ಕಾಣುತ್ತೆ! ಇದನ್ನು ಸರಿಮಾಡಬೇಕಾದರೆ ಇನ್ನೂರು ರೂಪಾಯಿ ಆಗುತ್ತೆ. ಕಾರನ್ನು ಅವರಿವರ ಕೈಗೆ ಕೊಡಬೇಡಿ. ನೀವೇ ಮಾಡಿನೋಡಿ" ಎಂದು ಬುದ್ಧಿ ಹೇಳುತ್ತಾರೆ.

ಗೋಪಾಲ ನನಗಾಗಿ ಬೆಂಗಳೂರಿನಲ್ಲೆಲ್ಲಾ ಸುತ್ತಾಡಿ, ಹತ್ತಾರು ಕಾರುಗಳನ್ನು ಪರೀಕ್ಷಿಸಿ, ಕೊನೆಗೆ ಒಂದು ಮಾರಿಸ್ ಮೈನರ್ ಗಾಡಿಯನ್ನು ಆಯ್ದು ತಂದ. ನನಗೆ ಸ್ವಂತ ಕಾರಿನಲ್ಲಿ ಓಡಾಡಬೇಕೆಂಬ ಬಯಕೆ ಎಷ್ಟೇ ಬಲವಾಗಿದ್ದರೂ ಗೋಪಾಲನು ಆರಿಸಿದ ಕಾರು ಚೆನ್ನಾಗಿರುತ್ತದೆಂಬ ಧೈರ್ಯವಿಲ್ಲ. ಅವನು ಆ ಗಾಡಿಯನ್ನು ಒಂದೆರಡು ಮೈಲಿ ಓಡಿಸಿ ನೋಡಿದ ನಂತೆ, ನಾಲ್ಕಾರು ಜನ ಅದನ್ನು ಹೊಗಳಿದರಂತೆ—ಹತ್ತು ಕೈ ದಾಟಿದ ಕಾರುಗಳಿಗೆ ವಂದಿಮಾಗಧರ ಅವಶ್ಯಕತೆ ಹೆಚ್ಚೆಂದು ದಳ್ಳಾಳಿಗಳೆಲ್ಲಾ ಬಲ್ಲರು. ಅವರ ಮಾತಿಗೆ ಮರುಳಾಗಿ ಗೋಪಾಲ ಮೂರುವರೆ ಸಾವಿರ ರೂಪಾಯಿನ ಚೆಕ್ಕು ಕೊಟ್ಟು ಅದನ್ನು ಮನೆಗೆ ತಂದ. ಇದೊಂದಕ್ಕೂ ನಾನು ಷರೀಕಾಗಿರಲಿಲ್ಲ—ಎಲ್ಲಾ ನನ್ನ ಒಪ್ಪಿಗೆಯಿಲ್ಲದೆ ನಡೆದ ಕೆಲಸ. ಮನೆಗೆ ಬಂದವನೇ "ನಿನ್ನ ಕಾರು ಹೇಗೆ ಓಡುತ್ತೆ ತೋರಿಸುತ್ತೇನೆ, ಬಾ" ಎಂದು ಕರೆದ. 'ನನ್ನ' ಕಾರು ಎಂಬ ಮಾತು ಕಿವಿಗೆ ಇಂಪಾಗಿತ್ತು. ನೋಡುವುದಕ್ಕೆ ಕಾರು ಲಕ್ಷಣವಾಗಿಯೂ ಇತ್ತು. ಹೊಸದಾಗಿ ಬಣ್ಣ ಬಳಿದು ಪಾಲಿಷ್ ಮಾಡಿದ್ದರು. ಕ್ರೋಮಿಯಮ್ ಪ್ಲೇಟ್ ಮಾಡಿದ್ದ ದೀಪಗಳಂತೂ ಕಣ್ಣು

ತೆಳೆಯುವಂತಿದ್ದುವು. ಕಾರಿನ ಒಳಗಡೆ ಬಹುಶಃ ಎಂಜಿನ್ ಇದ್ದಿರಬೇಕು.

ಈ ಸೊಬಗನ್ನೆಲ್ಲಾ ನೋಡಿದ ಮೇಲೂ ಮನಸ್ಸನ್ನು ಇಳಿಯಬಿಡದೆ ನಾನು ಕಾರಿನಲ್ಲಿ ಕೂತದ್ದಾಯಿತು. ಅದನ್ನು ಸ್ಟಾರ್ಟ್‌ಮಾಡಲೆಂದು ಗೋಪಾಲ ಒಂದು ಮೊಳೆಯನ್ನು ಎಳೆದ. ಅದು ಒಂದು ಕ್ಷಣ ಗುರುಗುಟ್ಟಿ ಸುಮ್ಮನಾಯಿತು. ಕಬ್ಬಿಣದ ಹಿಡಿಯೊಂದನ್ನು ಎಂಜಿನ್ನಿಗೆ ಸಿಕ್ಕಿಸಿ ತೋಳು ನೋಯುವವರೆಗೂ ತಿರುಗಿಸಿದ—ಪ್ರಯೋಜನವಾಗಲಿಲ್ಲ. ಪೆಟ್ರೋಲ್ ಇಲ್ಲವೇನೋ ಎಂದು ನೋಡಿದ—ಬೇಕಾದಷ್ಟಿತ್ತು. "ಕಾರ್‌ಬ್ಯುರೆಟ್ಟರಿನಲ್ಲಿ ಕೊಳೆ ತುಂಬಿದೆಯೇನೋ ನೋಡೋಣ, ಬಾ. ನೀನೇ ಮಾಡಿನೋಡುವ ಅಭ್ಯಾಸ ಮಾಡಿಕೊ" ಎನ್ನುತ್ತಾ ಕಾರ್‌ಬ್ಯುರೆಟ್ಟರನ್ನು ಬಿಚ್ಚಿ, ನೆಲಕ್ಕೆ ಕೆಡವಿ, ಒಂದು ಸ್ಕ್ರೂ ಮೊಳೆಯನ್ನು ಕಳೆದು, ಅದನ್ನು ಪತ್ತೆಮಾಡಿ, ಸ್ಕ್ರೂಡ್ರೈವರಿನಿಂದ ಗಾಯ ಮಾಡಿಕೊಂಡು—ಅಂತೂ ಮತ್ತೆ ಕಾರ್ಬ್ಯುರೆಟ್ಟರನ್ನು ಜೋಡಿಸಿದ್ದಾಯಿತು. ಆದರೂ ಕಾರ್ ಹೊರಡಲೊಲ್ಲದು. ಆಮೇಲೆ ಸ್ಪಾರ್ಕ್‌ಪ್ಲಗ್ಗಿನ ತಂತಿ ಅಳ್ಳಕವಾಗಿದೆಯೆಂದು ಅದಕ್ಕೆ ಏನೋ ಇಲಾಜು ಮಾಡಿದ. ಇದನ್ನೆಲ್ಲಾ ಗೋಪಾಲ ಮಾಡುತ್ತಿದ್ದ. ನಾನು ನೋಡುತ್ತಿದ್ದೆ—ನಿರ್ಲಿಪ್ತನಾಗಿ, ಅನಾಸಕ್ತಿ ಯೋಗವನ್ನು ಅಭ್ಯಾಸ ಮಾಡಿದಂತೆ ನೋಡುತ್ತಿದ್ದೆ. ಆ ಕಾರ್ ನನಗೆ ಬೇಡವೆಂದು ಮನಸ್ಸು ಆಗಲೇ ನಿಶ್ಚಯಕ್ಕೆ ಬಂದಿತ್ತು. ಕೊನೆಗೆ ಕಾರ್ ಸ್ಟಾರ್ಟೇನೋ ಆಯಿತು ; ಆದರೆ ಹತ್ತು ಗಜ ಹೋಗುವುದರೊಳಗೆ ಎಂಜನ್ನಿನಿಂದ ಹೊಗೆ ಬರಲಾರಂಭಿಸಿತು. ಸುಟ್ಟ ರಬ್ಬರಿನ ವಾಸನೆ ಗಾಡಿಯಲ್ಲೆಲ್ಲಾ ತುಂಬಿ ವಾಂತಿ ಬರುವಂತಾಯಿತು.

ಗ್ಯಾರೇಜಿಗೆ ಹೋಗಿ ತೋರಿಸಿದಾಗ ಅಲ್ಲಿಯ ಮೆಕ್ಯಾನಿಕ್ ಹೇಳಿದ: "ಈ ತಂತಿ ನೋಡಿದಿರಾ ? ಷಾರ್ಟಾಗಿ ಹೋಗಿದೆ (ಅವನ ಅರ್ಥ 'ಷಾರ್ಟ್ ಸರ್ಕ್ಯೂಟ್' ಆಗಿದೆಯೆಂದು). ಡೈನಮೋ ಸುಟ್ಟು ಹೋಗಿದೆ. ಹೊಸದು ಹಾಕಿಸಬೇಕು....ಇದನ್ನು ನೀವೇ ರಿಪೇರಿ ಮಾಡಿದಿರಾ ? ಅದೇ ಒಳ್ಳೆಯದು ಸ್ವಾಮಿ. ನೀವೇ ಮಾಡಿನೋಡಬೇಕು. ಒಂದೊಂದು ವೇಳೆ ಎಂಜನಿಯರಿಂಗಿಗೆ ಬದಲಾಗಿ ಆಂಜನೇಯರಿಂಗ್ ಆಗಿ ಹೋಗುತ್ತೆ, ಏನು ಮಾಡುವುದು ! ಎಡವದೆ ನಡೆಯುವುದನ್ನು ಕಲಿಯಲು ಸಾಧ್ಯವೆ !" ಅವನ ಮಾತಿನಲ್ಲಿ ಸಹಾನುಭೂತಿಯ ಜೊತೆಗೆ ಪ್ರಶಂಸೆ ಬೆರೆದಿತ್ತು. ಗೋಪಾಲ ಆಂಜನೇಯರಿಂಗ್ ಮಾಡಿದ್ದರ ಫಲವಾಗಿ ಆ ಮೆಕ್ಯಾನಿಕ್ಕಿಗೆ ೧೫೦ ರೂಪಾಯಿನ ವ್ಯಾಪಾರವಾಯಿತು—ಪ್ರಶಂಸೆ ಮಾಡುವುದು ಹೆಚ್ಚೆ !

ಈ ಯಂತ್ರಗಳನ್ನು ನೆಚ್ಚಬಾರದು. ಅವು ಉಂಡಮನೆಗೆ ಎರಡು ಬಗೆದು ವರ್ಕ್‌ಷಾಪಿನವರ ಪರವಾಗಿ ಮಸಲತ್ತು ಮಾಡುತ್ತಿರುತ್ತವೆ. ನೀವೇನಾದರೂ ಮಾಡಹೋದರೆ ಅವು ಬೀಸುವ ಬಲೆ ಮತ್ತಷ್ಟು ಭದ್ರವಾಗುತ್ತದೆ. ಅತ್ತ ವರ್ಕ್‌ಷಾಪಿನವರು 'ನೀವೇ ಮಾಡಿ ನೋಡಿ' ಎಂದು ಸಲಹೆ ಕೊಟ್ಟರೆ ಅವರನ್ನೂ ನೆಚ್ಚಬಾರದು. ಯಂತ್ರಗಳು ಕಳ್ಳರಂತೆ; ವರ್ಕ್‌ಷಾಪಿನವರು ಕಳ್ಳಮಾಲಿನ ವ್ಯಾಪಾರಿಗಳಂತೆ.

ಗೋಪಾಲ ತನ್ನ ಊರಿಗೆ ಹೊರಟಾಗ "ಗಾಡಿಯನ್ನು ನೀನು ಬೇಕಾದರೆ ಇಟ್ಟುಕೊ, ಇಲ್ಲದಿದ್ದರೆ ಯಾರಿಗಾದರೂ ಮಾರಿಬಿಡು" ಎಂದು ಹೇಳಿ ಅದನ್ನು ನಮ್ಮ ಮನೆಯಲ್ಲಿ ಬಿಟ್ಟುಹೋದ. ನನ್ನ ಕಣ್ಣೆದುರಿಗೆ ನಾಲ್ಕು ದಿನ ಇದ್ದರೆ ಅದನ್ನು ಕೊಳ್ಳಬೇಕೆನ್ನಿಸಬಹುದು ಎಂದು ಅವನ ನಿರೀಕ್ಷೆ. ಅವನ ಮನೆಗೆ ಹೋದರೆ ನನ್ನ ಮುಂದೆ ಉಪಾಹಾರ ತಂದಿರಿಸುತ್ತಾನೆ. ನನಗೆ ಬೇಡ ಎಂದರೆ, "ಬೇಡದಿದ್ದರೆ ಬಿಡು. ಎದುರಿಗಿದ್ದದ್ದರಿಂದ ನಿನಗೇನೂ ತೊಂದರೆಯಿಲ್ಲವಷ್ಟೆ," ಎನ್ನುತ್ತಾನೆ. ಅರ್ಧಘಂಟೆ ಮಾತನಾಡುವುದರೊಳಗೆ ನಾನು ತಟ್ಟೆಯನ್ನು ಬರಿದುಮಾಡಿರುತ್ತೇನೆ. ಕಾರಿನ ವಿಷಯದಲ್ಲಿಯೂ ಇಂಥ ಪ್ರಯೋಗ ಫಲಿಸಬಹುದೆಂದು ಅವನ ಲೆಕ್ಕ. ಆದರೆ ನಾನು ತಿಂಡಿಯ ವಿಷಯದಲ್ಲಿ ಮನಸೋತಂತೆ ಕಾರಿನ ವಿಷಯದಲ್ಲಿ ಸೋಲಲಿಲ್ಲ. ಎಷ್ಟೇ ಆಗಲಿ ಮೂರುವರೆ ಸಾವಿರ ರೂಪಾಯಿನ ಮಾತು !

ಗೋಪಾಲನಂತೂ ಕಾರನ್ನು ಕಡೆಗಣಿಸಿ ಹೊರಟುಹೋದ. ಈಗ ಅದು ಯಾರಿಗೂ ಬೇಡದ ವಸ್ತು. ಅದನ್ನು ಕೊಳ್ಳಲು ಗಿರಾಕಿಗಳು ಯಾರೂ ಮುಂದೆ ಬರಲಿಲ್ಲ—ಬೆಂಗಳೂರಿನಲ್ಲಿ ಗೋಪಾಲನಂಥ ಜನರು ವಿರಳ. ಇನ್ನು ಅದನ್ನು ಕೇಳುವವರು ಯಾರು ? ಪಾಪ, ಈ ತಿರಸ್ಕೃತ ಜೀವನ ಅದಕ್ಕೂ ಬೇಸರವಾಗಿರಬೇಕಲ್ಲವೆ ? ಯಂತ್ರವಾದರೇನು, ಅದಕ್ಕೂ ಜನರ ಆದರ ಬೇಕು. ತನ್ನನ್ನು ಯಾರಾದರೂ ಆಘ್ರಾಣಿಸಿ ಮುಡಿಯಲೆಂಬ ಆಸೆ ಹೂವಿಗೆ ಎಷ್ಟು ಸಹಜವೋ, ಕಾರಿಗೆ ತನ್ನನ್ನು ಯಾರಾದರೂ ಓಡಿಸಲೆಂಬ ಆಸೆ ಅಷ್ಟೇ ಸಹಜ. ನಮ್ಮೆಲ್ಲರಂತೆ ಅದೂ ತನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಡವೆ ? ಇದನ್ನೆಲ್ಲಾ ಯೋಚಿಸಿ ನನ್ನ ಮನಸ್ಸು ಅದರ ವಿಷಯದಲ್ಲಿ ಸೋಲದಿದ್ದರೂ ಮೃದುವಾಯಿತು. ಅದಕ್ಕೆ ನೀರು ನೆರಳುಗಳನ್ನು ಒದಗಿಸಿಕೊಟ್ಟದ್ದಲ್ಲದೆ ಆಗಿಂದಾಗ ಅದನ್ನು ನಾಲ್ಕು ಮೈಲಿ ತಿರುಗಿಸಿಕೊಂಡು ಬರುವ ಪದ್ಧತಿ ಮಾಡಿಕೊಂಡೆ.

ಒಂದು ದಿನ ಅದನ್ನು ಮಂಡ್ಯಕ್ಕೆ ತೆಗೆದುಕೊಂಡು ಹೋಗಬೇಕಾಯಿತು. ಆರೇಳು ಮೈಲಿ ಹೋಗುವವರೆಗೆ ಅದರ ನಡತೆಯನ್ನು ಎಷ್ಟು ಹೊಗಳಿದರೂ ಸಾಲದು. ಆ ಎಂಜಿನ್ನಿನ ಶಬ್ದವಂತೂ ಸೊಗಸಾಗಿ ಶ್ರುತಿ ಮಾಡಿದ ತಂಬೂರಿಯ ನಾದದಂತಿತ್ತು. ಕಾರ್ ನಡೆಸುವುದನ್ನು ಮರೆತು ಆ ಶ್ರುತಿಗೆ ಕಂಠವನ್ನು ಹೊಂದಿಸಿ ಹಾಡಬೇಕೆನ್ನಿಸಿತು. ಹೀಗೆ ಮಾಯಾ ಜಾಲವನ್ನು ಬೀಸಿ ನನ್ನನ್ನು ನಿರ್ಜನವಾದ ಪ್ರದೇಶಕ್ಕೆ ಸೆಳೆದೊಯ್ದು, ಯಾರ ಸಹಾಯವೂ ದೊರೆಯದ ಆ ಸ್ಥಳದಲ್ಲಿ ಬಂಡಾಯ ಹೂಡಿ ಯಂತ್ರ ನಿಂತುಬಿಟ್ಟಿತು. ನನ್ನ ಜೊತೆಯಲ್ಲಿದ್ದ ಸ್ನೇಹಿತರು "ನೀವೇ ಏನಾದರೂ ಮಾಡಿನೋಡಿ" ಎಂದರು. ನಾನು ಕಿವಿಗೊಡಲಿಲ್ಲ. ನಡುರಸ್ತೆಯಲ್ಲಿ ಮೋಟಾರ್ ಕಾರನ್ನು ಹೊದ್ದುಕೊಂಡು ಅಂಗತಂಗನಾಗಿ ಮಲಗುವ ಅಭ್ಯಾಸ ನನಗಿಲ್ಲ. ಅಲ್ಲದೆ ಆ ಕಾರಿನ ನಡತೆ ನನ್ನನ್ನು ರೇಗಿಸಿತ್ತು. ಯಾರಿಗೂ ಬೇಡವಾಗಿ ಒಣಗುತ್ತ ಬಿದ್ದಿದ್ದ ಆ ಯಂತ್ರಕ್ಕೆ ನೀರು ನೆರಳು ಕೊಟ್ಟು ಆದರಿಸಿದವನು ನಾನು. ತನ್ನನ್ನು ಉಪಯೋಗಿಸಿದ್ದೇ ಮಹಾ ಪ್ರಸಾದವೆಂದು ತಿಳಿಯಬೇಡವೆ, ಈ ಅನಾಥ ಪರದೇಶಿ ಕಾರಿಗೆ! ನನ್ನ ಉಪ್ಪು ತಿಂದು ನನ್ನಮೇಲೇ ತಿರುಗಿಬಿದ್ದ ಆ ಯಂತ್ರದ ಯೋಚನೆಯನ್ನೇ ಬಿಟ್ಟು ನಾನು ನಿರಾತಂಕವಾಗಿ ಕುಳಿತು ಪ್ರಕೃತಿಯ ಸೌಂದರ್ಯವನ್ನು ಅನುಭವಿಸುವುದರಲ್ಲಿ ಮಗ್ನನಾದೆ. ಅರ್ಧ ಘಂಟೆ ಕಳೆದ ಮೇಲೆ ಮತ್ತೆ ಅದನ್ನು ಸ್ಟಾರ್ಟ್ ಮಾಡಿದಾಗ—ನಂಬಿದರೆ ನಂಬಿ, ಬಿಟ್ಟರೆ ಬಿಡಿ—ಅದು ಯಾವ ತಕರಾರೂ ಇಲ್ಲದೆ ಹೊರಟಿತು!

ಈ ಯಂತ್ರಗಳೊಡನೆ ವ್ಯವಹರಿಸುವಾಗ ಅವನ್ನು ಮುದ್ದುಮಾಡಿ ಉಪಚರಿಸಹೋಗುವುದು ಮೌಢ್ಯ. ಹೊಡೆದು ಬಡಿದು ಶಿಕ್ಷಿಸುವುದೂ ತಪ್ಪು. ಅವುಗಳ ಚೇಷ್ಟೆಗೆ ಔದಾಸೀನ್ಯವೇ ತಕ್ಕ ಮದ್ದು. ಜೊತೆಯಲ್ಲಿದ್ದ ನನ್ನ ವಿಜ್ಞಾನಿ ಮಿತ್ರರೇನೋ "ಎಂಜಿನ್ ಕಾದುಹೋಗಿತ್ತು. ಅರ್ಧ ಘಂಟೆ ನಿಂತದ್ದರಿಂದ ತಣ್ಣಗಾಗಿ ಮತ್ತೆ ಹೊರಟಿತು" ಎಂದು ವಿವರಣೆ ಕೊಟ್ಟರು. ಅವರು ಭೌತಶಾಸ್ತ್ರಜ್ಞರು. ಮನಶ್ಶಾಸ್ತ್ರಜ್ಞರಾಗಿದ್ದರೆ ಅವರಿಗೆ ನಿಜಸ್ಥಿತಿ ತಿಳಿಯುತ್ತಿತ್ತು. ಕಾರು ನಿಂತದ್ದಕ್ಕೆ ಕಾರಣ "ತೊಂದರೆ ಕೊಟ್ಟರೆ ಇವನು ನನಗೆ ಉಪಚಾರ ಮಾಡುತ್ತಾನೆ" ಎಂಬ ಮೂಢ ನಂಬಿಕೆ. ನನಗೆ ಮುದ್ದುಗರೆಯುವವರನ್ನು ಕಂಡರೆ ಆಗದು. ಅರ್ಧ ಘಂಟೆ ಕಳೆದರೂ ನಾನು ಉದಾಸೀನನಾಗಿಯೇ ಇದ್ದುದನ್ನು ಕಂಡು ಆ ಯಂತ್ರ "ಇವನಲ್ಲಿ ನನ್ನ ಬೇಳೆ ಬೇಯುವುದಿಲ್ಲ" ಎಂದು ನಿರಾಶೆಗೊಂಡು

ಮತ್ತೆ ಹೊರಟಿತು. ನಾನು ಏನೂ ಮಾಡದೆ ಇದ್ದದ್ದರಿಂದ ಗ್ಯಾರೇಜಿಗೆ ಕೊಡುವ ಹಣವನ್ನೂ ಉಳಿಸಿದಂತಾಯಿತು, ಇತ್ತ ಕಾರಿಗೆ ಬುದ್ಧಿಯನ್ನೂ ಕಲಿಸಿದಂತಾಯಿತು.

ಏನೂ ಮಾಡದಿದ್ದರೆ ನಾವು ಕೈಲಾಗದವರು, ಪರಾಶ್ರಯಿಗಳು ಎಂಬ ಅಪಪ್ರಥೆ ಬರುವುದಿಲ್ಲವೆ, ಅದು ಹೇಡಿತನವಲ್ಲವೆ, ಎಂದು ಆಕ್ಷೇಪಿಸ ಬಹುದು. ಇದರಲ್ಲಿ ಅವಮಾನದ ಪ್ರಸಂಗವೇ ಇಲ್ಲವೆಂದು ಘಂಟಾ ಘೋಷವಾಗಿ ಹೇಳುತ್ತೇನೆ. ನಾವೇನು ಕಾರಿನ ಒಡೆಯರೋ ಸೇವಕರೋ? ಒಡೆಯರೆನ್ನುವುದು ನಿಜವಾದರೆ ನಾವೇ ಅದರ ಸೇವೆಗೆ ನಿಲ್ಲಬೇಕೆನ್ನುವುದು ಯಾವ ನ್ಯಾಯ ? ಒಡೆಯರು ತಾವೇ ಮಾಡಿ ನೋಡುತ್ತಾರೆಯೆ ? ಇಂದ್ರ ತನ್ನ ಸಭೆಯಲ್ಲಿ ತಾನೇ ಕುಣಿಯುತ್ತಾನೆಯೆ ? ರಂಭೆ ಊರ್ವಶಿಯರನ್ನು ಕುಣಿಯಹೇಳುತ್ತಾನೆ. ಅವರು ಲಯ ತಪ್ಪಿ ಹೆಜ್ಜೆಯಿಟ್ಟರೆ ಭರತಾ ಚಾರ್ಯನ ಕಡೆಗೆ ತಿರುಗಿ ಭ್ರುಕುಟಿಯನ್ನು ರಚಿಸುತ್ತಾನೆ. ಕುಣಿಯುವುದು ಅಪ್ಸರೆಯರ ಕೆಲಸ; ಕುಣಿತವನ್ನು ತಿದ್ದುವುದು ಭರತಾಚಾರ್ಯನ ಕೆಲಸ ; ಕುಳಿತು ನೋಡುವುದು ಇಂದ್ರನ ಕೆಲಸ. ನೃತ್ಯ ಮಾತ್ರವಲ್ಲದೆ ಇತರ ವಿಷಯಗಳಲ್ಲೂ ಹಾಗೆಯೇ. ಯುದ್ಧದ ಪ್ರಸಂಗ ಬಂದಾಗ ಮರ್ತ್ಯಲೋಕದಿಂದ ದಶರಥನನ್ನೋ ದುಷ್ಯಂತನನ್ನೋ ಕರೆತರಲು ಮಾತಲಿ ಯನ್ನು ಕಳಿಸುತ್ತಾನೆ; ಋಷಿಗಳ ತಪೋಭಂಗ ಮಾಡಬೇಕಾದರೆ ವಸಂತ ಮಲಯಾನಿಲರನ್ನೂ ಮನ್ಮಥನನ್ನೂ ಓಡಿಸುತ್ತಾನೆ. ಶಿವನ ಫಾಲನೇತ್ರಕ್ಕೆ ಆಹುತಿಯಾದವರು ಯಾರು ? ಇಂದ್ರನೋ ಮನ್ಮಥನೋ ? ಇದು ಸ್ವರ್ಗ ದವರು ನಮಗೆ ಹಾಕಿಕೊಟ್ಟಿರುವ ಮೇಲ್ಪಂಕ್ತಿ. ಇದನ್ನು ಮರೆತು, ಪಾಶ್ಚಾತ್ಯರ ಕಾರ್ಖಾನೆಯ ನಾಗರಿಕತೆಯಿಂದ ಹುಟ್ಟಿದ ಕೂಗಿಗೆ ಮರುಳಾಗಿ ನಾನೇ ಮಾಡುತ್ತೇನೆ ಎಂದು ಹೊರಟವರುಂಟೆ !

ಈ ಸಂದರ್ಭದಲ್ಲಿ ನಾವು ಸೂಕ್ಷ್ಮವಾಗಿ ಪರಿಶೀಲಿಸಬೇಕಾದ ಅಂಶ ವೊಂದಿದೆ. 'ನೀನೇ ಮಾಡಿ ನೋಡು' ಎಂದರೆ, ನೋಡುವುದು ಮಾಡು ವುದು ಎಂಬ ಎರಡು ಕೆಲಸಗಳನ್ನೂ ಒಬ್ಬರೇ ಮಾಡಬೇಕೆಂಬ ಅರ್ಥ ಬರುತ್ತದೆ. ಹೀಗಾದರೆ ಎರಡು ಕೆಲಸಗಳಲ್ಲಿ ಯಾವುದೊಂದೂ ಸಮರ್ಪಕ ವಾಗಿ ನಡೆಯುವುದಿಲ್ಲ. ಕ್ರಿಸ್ತರ ಬೈಬಲ್ ಹೇಳುವ ಪ್ರಕಾರ ದೇವರು ಈ ವಿಶ್ವವನ್ನು ಆರು ದಿನಗಳಲ್ಲಿ ನಿರ್ಮಿಸಿದನಂತೆ. ಏಳನೆಯ ದಿನ ತನ್ನ ಕೆಲಸ ವನ್ನು ನೋಡಿ 'ಭೇಷ್, ಚೆನ್ನಾಗಿದೆ' ಎಂದುಕೊಂಡನಂತೆ. ನಮಗೆ ಬಹಳ ಬೇಸರ ತರುವ ವಸ್ತುವನ್ನು ನೋಡಿದಾಗ 'ಇದೇನು ಚೆಂದವೋ

ದೇವರಿಗೇ ಪ್ರೀತಿ' ಎಂದುಕೊಳ್ಳುತ್ತೇವೆ. ದೇವರಿಗೆ ತಾನು ಸೃಷ್ಟಿಸಿದ ವಿಶ್ವ ಪ್ರಿಯವಾದದ್ದು ಈ ಅರ್ಥದಲ್ಲೇ ಇರಬೇಕು. ಯಾವ ಪ್ರಪಂಚ ವನ್ನು ನೋಡಿ ಕೋಟಿಗಟ್ಟಲೆ ಜನರು 'ಸಂಸಾರಂ ದುಸ್ತರಂ ಘೋರಂ' ಎಂದು ತೆಗಳಿ 'ಇದರಿಂದ ಪಾರು ಮಾಡಬಾರದೆ, ಭಗವಂತ' ಎಂದು ಆರ್ತಸ್ವರದಿಂದ ಮೊರೆಯಿಟ್ಟಿರುವರೋ ಅದೇ ಪ್ರಪಂಚ ದೇವರಿಗೆ ಚೆನ್ನಾಗಿ ಕಂಡಿತಂತೆ! ಏಕೆಂದರೆ ಅವನು ನೋಡಿದ್ದು ತಾನೇ ಮಾಡಿದ ಕೆಲಸ. ಸೃಷ್ಟಿಯ ಕೆಲಸವನ್ನು ನಿರ್ವಹಿಸುತ್ತಿರುವಾಗ ಅವನಿಗೆ ತಾನು ಮಾಡುತ್ತಿರುವುದೇನು ಎಂಬುದರ ಅರಿವು ಇದ್ದಿರಲಾರದು. ಮನುಷ್ಯನನ್ನು ಸೃಷ್ಟಿ ಮಾಡುವಾಗ ಯಾವುದೋ ಜ್ಞಾನದಲ್ಲಿ ಕಪಿಯ ರಕ್ತ, ಹುಲಿಯ ರಕ್ತ, ಅಮೃತ, ವಿಷ—ಎಲ್ಲವನ್ನೂ ಕಲಬೆರಕೆ ಮಾಡಿಬಿಟ್ಟ!

ತಾನೇ ಮಾಡಿ ನೋಡುವುದಕ್ಕೆ ಬದಲಾಗಿ ಮತ್ತೊಬ್ಬರ ಕೈಯಲ್ಲಿ ಮಾಡಿಸಿ ತಾನು ನೋಡುತ್ತ ಕುಳಿತಿದ್ದರೆ, ಈ ಪ್ರಪಂಚ ಎಷ್ಟೋ ಉತ್ತಮ ವಾಗಬಹುದಾಗಿತ್ತೇನೊ. ವಿಶ್ವದ ಅವ್ಯವಸ್ಥೆಗೆಲ್ಲಾ ಈ 'ನೀನೇ ಮಾಡಿ ನೋಡು' ಎಂಬ ತತ್ವವೇ ಕಾರಣ. ದೇವರು ತನ್ನ ಆರ್ಕೇಂಜಲ್ ಗೇಬ್ರಿ ಯಲ್ಲಿಗೆ ಸೃಷ್ಟಿಯ ಕೆಲಸವನ್ನು ವಹಿಸಿಕೊಟ್ಟು, ತಾನು ನೋಡುತ್ತ ಕುಳಿ ತಿದ್ದನೆನ್ನಿ. ಕೆಲಸ ಸಾಗುತ್ತಿರುವಾಗಲೇ ತನ್ನ ಸೇವಕನನ್ನು ಎಚ್ಚರಿಸಿ, "ಇದು ನೆಟ್ಟಗಿಲ್ಲ; ಅದು ವಕ್ರವಾಯಿತು; ಹೆಂಗಸಿಗೆ ಅಷ್ಟೊಂದು ನಾಲಗೆ ಕೊಡಬಾರದಾಗಿತ್ತು; ಗಂಡಸಿಗೆ ಮತ್ತಷ್ಟು ಬೆನ್ನುಮೂಳೆ ಸೇರಿಸು; ರಾಜ ಕಾರಣಿಗೆ ಎರಡು ನಾಲಗೆ ಕೊಡಬೇಡ" ಎಂದು ಮುಂತಾಗಿ ಸಲಹೆಕೊಟ್ಟು ಗದರಿಸಿ, ಪ್ರಪಂಚವನ್ನು ಸಮರ್ಪಕವಾದ ರೀತಿಯಲ್ಲಿ ವ್ಯವಸ್ಥೆಗೊಳಿಸ ಬಹುದಾಗಿತ್ತು. ಎರಡು ಕೆಲಸವನ್ನೂ ತಾನೇ ಮಾಡಹೊರಟದ್ದರಿಂದ ಕೆಲಸ ಕೆಟ್ಟಿತು.

ಇಂದಿನ ಅರ್ಥಶಾಸ್ತ್ರಜ್ಞರು ದೇವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ Division of Labour—ಅಂದರೆ ಕೆಲಸಗಳನ್ನು ನಾಲ್ಕಾರು ಜನ ರಿಗೆ ಹಂಚಿಕೊಡುವ ಉಪಾಯವನ್ನು ಕಂಡುಹಿಡಿದಿದ್ದಾರೆ. ಇದು ವಿಚಾರ ಪರರಾದವರೆಲ್ಲಾ ಒಪ್ಪಲೇ ಬೇಕಾದ ತತ್ವ. ಮೆರವಣಿಗೆ ಹೋಗುತ್ತಿರು ವವನು ಅದನ್ನು ನೋಡುತ್ತಲೂ ಇರುವುದು ಸಾಧ್ಯವೆ? ನಾಟಕವನ್ನಾಡು ವವರೂ ನೋಡುವವರೂ ಬೇರೆಬೇರೆ ಜನವಾಗಬೇಡವೆ? ನಾಟಕವನ್ನು 'ನೀನೇ ಆಡಿ ನೋಡು' ಎನ್ನುವುದು ಅರ್ಥವಿಲ್ಲದ ಮಾತು. ಆಡುತ್ತಿರುವ ವನು ನೋಡಲಾಗುವುದಿಲ್ಲ. ನಾನು ಜನ್ಮತಃ ಅದ್ವೈತಿ. ಶಂಕರಾಚಾರ್ಯ

ರಲ್ಲಿ ನನಗೆ ಅಪಾರವಾದ ಭಕ್ತಿಯಿದೆ. ಆದರೆ ಈ ಬಗೆಯ ವ್ಯವಹಾರ ಪ್ರಪಂಚದಲ್ಲಿ ನಾನು ನಿರ್ಲಜ್ಜನಾದ ದ್ವೈತಿ. ಇವೆರಡು ಕೆಲಸಗಳೂ ಬೇರೆ ಬೇರೆ ಜನರಿಂದಾಗಬೇಕೆಂದು ನನ್ನ ನಿಶ್ಚಲವಾದ ನಂಬಿಕೆ. ಎರಡಕ್ಕೂ ಬೇಕಾದ ಶಕ್ತಿ ಕುಶಲತೆಗಳು ಬೇರೆ ಬೇರೆ. ಸಾವಧಾನವಾಗಿ ಯೋಚಿಸಿದರೆ ಭಗವದ್ಗೀತೆ ಹುಟ್ಟಿದ್ದೂ ಈ ತತ್ತ್ವವನ್ನು ಬೋಧಿಸುವುದಕ್ಕಾಗಿಯೇ. ಮಾಡುವುದೇ ಅರ್ಜುನನ ಕೆಲಸ, ನೋಡುವುದಲ್ಲ. ಆ ಭಾಗವನ್ನು ಅವನು ಶ್ರೀಕೃಷ್ಣನಿಗೆ ಬಿಡಬೇಕಾಗಿತ್ತು. ಸೇನಯೋರುಭಯೋರ್ಮಧ್ಯೆ ರಥವನ್ನು ನಿಲ್ಲಿಸಿಕೊಂಡು ತನ್ನ ಬಂಧುಗಳನ್ನೂ ಭೀಷ್ಮದ್ರೋಣಕೃಪಾದಿಗಳನ್ನೂ ಶತ್ರುಸೈನ್ಯದಲ್ಲಿ ನೋಡಿದ್ದರಿಂದ ಅವನ ಹೃದಯ ಕರಗಿ ದುರ್ಬಲವಾಯಿತು. ಕೆಲಸ ಕೆಡುವುದರಲ್ಲಿತ್ತು. ತಾನು ಕರ್ಮ ಮಾಡುವುದರ ಜೊತೆಗೆ ಕರ್ಮಸಾಕ್ಷಿಯೂ ಆಗಲು ಹೊರಟದ್ದರಿಂದಲೇ ಗಾಂಡೀವ ಅವನ ಕೈಯಿಂದ ಜಾರಿಬಿದ್ದಿತು. 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ಭಗವದ್ವಾಕ್ಯದಲ್ಲಿ ಅಡಗಿರುವುದು ಇದೇ ಘನವಾದ ತತ್ತ್ವ. ಕರ್ಮವನ್ನು ಮಾಡುವುದು ನಿನ್ನ ಕೆಲಸ; ಅದೇನಾಯಿತು ಎಂದು ನೋಡುವುದಲ್ಲ.

ಆದ್ದರಿಂದ ನಾನು 'ಮಾಡುವುದು ನೋಡುವುದು' ಇವೆರಡರಲ್ಲಿ ನನಗೆ ಪ್ರಿಯವಾದ ಒಂದನ್ನು ಮಾತ್ರ—ಅಂದರೆ ನೋಡುವ ಕೆಲಸವನ್ನು—ಆರಿಸಿಕೊಳ್ಳುತ್ತೇನೆ. "ನಿನ್ನದೆಲ್ಲಾ ಪೈಗಳ್ಳತನದ ವಾದ, ಆಲಸಿಕೆಯನ್ನು ತತ್ವದ ಗಾದಿಗೆ ಏರಿಸುವ ತುಚ್ಛ ಪ್ರಯತ್ನ" ಎನ್ನಬೇಡಿ. ಸರಿಯಾಗಿ ನೋಡುವುದೇನೂ ಸುಲಭವಾದ ಕೆಲಸವಲ್ಲ. ಮಾಡುವ ಕೆಲಸ ಕೈಚಳಕಕ್ಕೆ ಸಂಬಂಧಪಟ್ಟದ್ದು; ಅಭ್ಯಾಸದಿಂದ ಅದನ್ನು ಕಲಿಯಬಹುದು. ಬಡಗಿ ಎರಡು ಕುರ್ಚಿಗಳನ್ನು ಮಾಡಿದರೆ, ಎರಡನೆಯದು ಮೊದಲಿನದಕ್ಕಿಂತ ಚೆನ್ನಾಗಿರುತ್ತದೆ. ನೋಡುವುದೆಂದರೆ ಕವಿಯ ದರ್ಶನ; ಅದು ಸ್ಫೂರ್ತಿಗೆ ಸಂಬಂಧಪಟ್ಟದ್ದು, ಕೇವಲ ಅಭ್ಯಾಸಕ್ಕಲ್ಲ. ಅದಕ್ಕೆ ಒಂದು ಕಡೆ ಚಿತ್ತೈಕಾಗ್ರತೆಯೂ ತಪಸ್ಸೂ ಬೇಕು; ಮತ್ತೊಂದು ಕಡೆ ಯಾವುದೋ ದಿವ್ಯ ಶಕ್ತಿಯ ಅನುಗ್ರಹ ಬೇಕು, ಪ್ರಸಾದ ಬೇಕು. ಆದರಲ್ಲಿ ಕುಂಟಿಕೊಂಡು ಪ್ರಗತಿಯನ್ನು ಸಾಧಿಸಲಾಗುವುದಿಲ್ಲ. ಕಣ್ಣೆದುರಿಗಿರುವ ನೂರೆಂಟು ಅಂಶಗಳ ಜಟಿಲತೆಯ ಮೇಲೆ ಸಮಗ್ರವಾದ ದೃಷ್ಟಿಯನ್ನು ಬೀಸಿ, ಮಿಂಚಿನ ವೇಗದಿಂದ ಅವುಗಳ ಪರಸ್ಪರ ಸಂಬಂಧವನ್ನು ಗ್ರಹಿಸಿ ಅವುಗಳ ನಿಜರೂಪವನ್ನು ಕಂಡು ಇದಮಿತ್ಥಂ ಎಂದು ಹೇಳುವುದೇನು ಸುಲಭದ ಕೆಲಸವೆ! ಅದರ ಕಷ್ಟ ಗೊತ್ತಾಗಬೇಕಾದರೆ ನೀವೇ ಮಾಡಿ ನೋಡಿ.

# ಮಹಾರಾಜಾ ಕಾಲೇಜಿನ ಕಾಮನ್ ರೂಮ್

ಒಂದಾನೊಂದು ಕಾಲದಲ್ಲಿ ನಮ್ಮ ಮಹಾರಾಜಾ ಕಾಲೇಜಿನ ಅಧ್ಯಾಪಕರು ಧರಿಸುತ್ತಿದ್ದ ವೇಷಭೂಷಣಗಳನ್ನು ನೋಡಿದರೆ ಎಂಥಾ ಉತ್ಸಾಹಿ ಯುವಕರಿಗಾದರೂ ಜೀವನದಲ್ಲಿ ವೈರಾಗ್ಯವುಂಟಾಗುತ್ತಿತ್ತು. ಅವರ ಪೋಷಾಕಿನಲ್ಲಿ ಪ್ರಧಾನಾಂಶವೆಂದರೆ ಅದರ ಕರಿಯಬಣ್ಣ. ಅಧ್ಯಾಪಕರು ಪಾಠ ಹೇಳಲು ತರಗತಿಗೆ ಹೋಗುವಾಗ ಕರಿಯ ಗೌನುಗಳನ್ನು ಹಾಕಿಕೊಳ್ಳಬೇಕೆಂದು ನಿಯಮವಿತ್ತು. ಕೆಲವರಂತೂ ಕಾನ್ವೊಕೇಷನ್ ಕಾಲದಲ್ಲಿ ಕರಿಯ ಬಟ್ಟೆಯಿಂದ ತಯಾರಿಸಿದ 'ಅಕೆಡೆಮಿಕ್ ಕ್ಯಾಪ್' ಎಂಬುದನ್ನು ಬೇರೆ ಮೆರೆಸುತ್ತಿದ್ದರು. ಅಂಥ ವಿಕಾರವಾದ ವಸ್ತುವನ್ನು ಸೃಷ್ಟಿಸಬೇಕಾದರೆ ಅದಕ್ಕೇ ಒಂದು ರೀತಿಯ ತಪಸ್ಸು ಬೇಕು. ಈ ಟೋಪಿ ಗೌನುಗಳ ಜೋಡಣೆ ಯಾವನೋ ಅಪರಕರ್ಮ ಸಹಾಯ ಸಭೆಯ ಸದಸ್ಯನ ಸ್ಫೂರ್ತಿಯಿಂದಲೇ ಹೊರಬಿದ್ದಿರಬೇಕೆಂದು ನನ್ನ ನಂಬಿಕೆ. ಜ್ಞಾನ ಪ್ರಸಾರಕ್ಕೆ ಮೀಸಲಾದ ಸಂಸ್ಥೆಯಲ್ಲಿ ಗಾಂಭೀರ್ಯ ಅವಶ್ಯಕನೆಂದೇನೋ ಒಪ್ಪಬಹುದು. ಮೃತಾಶೌಚದ ವಾತಾವರಣವೇತಕ್ಕಿರಬೇಕೋ ತಿಳಿಯದು—ಪಾಶ್ಚಾತ್ಯರಲ್ಲಿ ಕರಿಯ ಬಣ್ಣದ ಉಡುಪನ್ನು ಧರಿಸುವುದು ಯಾರಾದರೂ ಬಂಧುಮಿತ್ರರು ಸತ್ತಾಗ, ಶೋಕಸೂಚಕವಾಗಿ. ಕಾಲೇಜಿನಲ್ಲಿ ಇಂಥ ಅಮಂಗಳದ ಉಡುಪನ್ನು ಧರಿಸುವುದೇಕೆ? ಜ್ಞಾನವೆಂದರೆ ಬೆಳಕೇ ಹೊರತು ಕತ್ತಲೆಯಲ್ಲವಷ್ಟೆ. ಈ ವಿಷಯದಲ್ಲಿ ನಮ್ಮವರ ಕಲ್ಪನೆ ಪಾಶ್ಚಾತ್ಯರದ್ದಕ್ಕಿಂತ ಉತ್ತಮ. ನಮ್ಮ ಸರಸ್ವತಿಯು 'ಕುಂದೇಂದುತುಷಾರ ಹಾರಧವಳಾ', 'ಶುಭ್ರವಸ್ತ್ರಾವೃತಾ.'

ನಾವು ಕಾಲೇಜಿಗೆ ಸೇರುವ ವೇಳೆಗೇ ಈ 'ಅಕೆಡೆಮಿಕ್' ಟೋಪಿಯು ಸತ್ತು ಸ್ವರ್ಗದಲ್ಲೋ ನರಕದಲ್ಲೋ ಇತ್ತು. ಗೌನು ಮಾತ್ರ ಕೊರಗುತ್ತ ನರಳುತ್ತ ಪ್ರಾಧ್ಯಾಪಕರ ಆಶ್ರಯದಲ್ಲಿ ಇನ್ನೂ ಅರೆಜೀವದ ಉಸಿರೆಳೆಯುತ್ತಿತ್ತು. ಈ ವಿಚಿತ್ರ ಉಡುಪನ್ನು ಧರಿಸಿ ಗಂಭೀರ ಮುದ್ರೆಯಿಂದ ಅಳತೆಗಾಲು ಹಾಕಿಕೊಂಡು ವೇದಿಕೆಯ ಮೇಲೆ ಬಂದು ನಿಲ್ಲುವ ನಮ್ಮ ಗುರುಗಳನ್ನು ಕಂಡರೆ ನಮಗೆ ಎಷ್ಟೇ ಭಕ್ತಿಯಿತ್ತೆಂದರೂ ಅದಕ್ಕಿಂತ ಹೆಚ್ಚಾಗಿ ಭಯ. ಅವರು ನಮ್ಮಂತೆ ಮನುಷ್ಯರಲ್ಲ. ಬೇರೆ ಯಾವುದೋ ಪ್ರಪಂಚದಿಂದ ಇಳಿದು ಬಂದವರು, ಮಾನವಸಹಜವಾದ ಸರಳ ರೀತಿಯ ನಡೆವಳಿಕೆ

ಅವರಲ್ಲಿ ಸಲ್ಲದು, ಎಂದೇ ನಮ್ಮೆಲ್ಲರ ಭಾವನೆ. ಒಂದೊಂದು ವೇಳೆ, "ಇವರ ಜೀವನದಲ್ಲಿ ಘನತೆ ಬೇಕಾದಷ್ಟಿರಬಹುದು. ಸ್ಥಾನಮಾನಗಳ ಜೊತೆಗೆ ಬರುವ ಆತ್ಮವಿಶ್ವಾಸವಿರಬಹುದು. ಆದರೆ ಅದನ್ನೆಲ್ಲಾ ಮರೆತು ಕ್ಷಣಕಾಲವಾದರೂ ನಕ್ಕು ನಲಿಯುವ ಶಕ್ತಿಯನ್ನೂ ದೇವರು ಕರುಣಿಸ ಬಾರದಾಗಿತ್ತೆ!" ಎನ್ನಿಸುತ್ತಿತ್ತು. ಗೌನೂ ಗೆಲವೂ ಜೊತೆಯಲ್ಲಿ ಬಾಳ ಲಾರವೆಂದು ನಮ್ಮ ದೃಢವಾದ ನಂಬಿಕೆ.

ಆದರೆ ವಾಸ್ತವವಾಗಿ ನಮ್ಮ ಪ್ರಾಧ್ಯಾಪಕರ ಬಿಗುಮಾನ ಬಾಹ್ಯ ವೇಷದ್ದೇ ಹೊರತು ರಕ್ತಗತವಾದದ್ದಲ್ಲ. ಆ ಬಗೆಯ ಜೀವನ ಒಂದು ನಾಟಕವೆಂದು ಅವರೂ ಬಲ್ಲರು. ಆಗಿನ ಪರಿಸ್ಥಿತಿಯಲ್ಲಿ ಅವರು ಆ ನಾಟಕವನ್ನು ಆಡಿಯೇ ತೀರಬೇಕು; ವಿಧ್ಯುಕ್ತವಾಗಿ ತಮ್ಮ ಪಾತ್ರವನ್ನು ವಹಿಸಲೇ ಬೇಕು. ಈ ನಿರ್ಬಂಧ ಎಷ್ಟೋ ವೇಳೆ ಅವರಿಗೂ ಬೇಸರ ತಂದಿತ್ತೆಂದು ತೋರುತ್ತದೆ. ಪ್ರಿನ್ಸಿಪಲ್ ಎನ್. ಎಸ್. ಸುಬ್ಬರಾಯರು ವೇದಿಕೆಯ ಮೇಲೆ ನಿಂತಾಗ, ಕಾಲೇಜಿನ ಪಡಸಾಲೆಗಳಲ್ಲಿ ತಿರುಗುವಾಗ, ಟೀಪಾರ್ಟಿಗಳಿಗೆ ಬಂದಾಗ, ಅವರ ಸೂಟಿನ ಗರಿ ಸ್ವಲ್ಪವೂ ಮುರಿಯದೆ ಅದರ ಮಡಿಕೆ ಅಸಿಧಾರೆಯಂತೆ ಕಾಣುತ್ತಿರಬೇಕು. ಎಲ್ಲರೂ ಸೂಟನ್ನು ಧರಿಸುವುದಕ್ಕೆ ಮುಂಚೆ ಇಸ್ತ್ರಿ ಮಾಡಿಸಿದರೆ ಸುಬ್ಬರಾಯರು ಮಾತ್ರ ಅದನ್ನು ಧರಿಸಿದ ಮೇಲೆ ಇಸ್ತ್ರಿ ಮಾಡಿಸುತ್ತಾರೆ ಎಂದು ವಿದ್ಯಾರ್ಥಿವೃಂದ ದಲ್ಲಿ ಕಥೆ ಹರಡಿತ್ತು. ಅವರ ಷರ್ಟಿನ ತೋಳತುದಿಯಲ್ಲಿ ಯಾವಾಗಲೂ ಒಂದು ಕರವಸ್ತ್ರ ಇಣಿಕಿ ನೋಡುತ್ತಿರಬೇಕು. ಈ ಅಭ್ಯಾಸವನ್ನು ಅವರು ಕೇಂಬ್ರಿಜ್ಜಿನಿಂದ ತಂದರೆಂದು ತೋರುತ್ತದೆ. ಆಗಿಂದಾಗ ಆ ಕರವಸ್ತ್ರ ವನ್ನು ಎಳೆದುಕೊಂಡು ತಮ್ಮ ಕೋಟಿನ ಮೇಲೆ ಬೀಳದಿದ್ದ ಸೀಮೆಸುಣ್ಣದ ಪುಡಿಯನ್ನು ಹೊಡೆಯುವುದೇ ಒಂದು ವೈಖರಿ. ಅವರ ಉಡುಪಿಗೆ ತಕ್ಕಂತೆ ಮಾತೂ ಬಿರುಸು.

ಆದರೆ ಅವರ ಕೊಠಡಿಗೆ ಹೋದರೆ ಅಲ್ಲಿ ಕಾಣುತ್ತಿದ್ದ ಸುಬ್ಬರಾಯರೆ ಬೇರೆ. ಒಂದು ದಿನ ನಾನು ಅವರನ್ನು ಕಾಣಲು ಹೋದಾಗ ಅವರು ಆಗ ತಾನೇ ತರಗತಿಯಿಂದ ಬಂದು ತಮ್ಮ ಗೌನನ್ನು ಕಿತ್ತು ಹತ್ತಿರದ ಕುರ್ಚಿಯ ಮೇಲೆ ಒಗೆಯುತ್ತಿದ್ದರು. ಮುಖದಲ್ಲಿ ಅಸಹ್ಯ ಕಾಣುತ್ತಿತ್ತು. ನನ್ನನ್ನು ಕಂಡಾಗ ಸ್ವಲ್ಪ ನಕ್ಕರು. ಆ ನಗೆಯ ಅರ್ಥ "ಇವೊತ್ತಿಗೆ ಮುಗಿಯಿತಲ್ಲ ಈ ಹಾಳು ಗೌನಿನ ಕೆಲಸ! ಇನ್ನು ನಿರಾಳವಾಗಿ ಕುಳಿತುಕೊಳ್ಳೋಣ" ಎಂದು ಇರಬೇಕು. ಅವರ ಮಾತಿನ ಬಿರುಸೂ ಅಷ್ಟೆ, ಹೊರಗೆ ಕಾಣುವ

ಕ್ಷಣಕಾಲದ ಬಿರುಸೇ ಹೊರತು ಹೃದಯದಲ್ಲಿ ನೆಲಸುವುದಲ್ಲ. ಒಂದೆರಡು ನಿಮಿಷದಲ್ಲೇ ಅದು ಹಾಸ್ಯದಲ್ಲಿ ತೇಲಿಹೋಗಿ ಸಲಿಗೆಗೆ ಎಡೆ ಕೊಡು ತ್ತಿತ್ತು. ಹೊರಗೆ ಇಷ್ಟು ಆಡಂಬರ ದರ್ಪಗಳನ್ನು ತೋರಿಸುತ್ತಿದ್ದ ಸುಬ್ಬ ರಾಯರು ತಮ್ಮ ಕೊಠಡಿಯಲ್ಲಿ ಕುಳಿತು ಶಿಷ್ಯರೊಡನೆ ತೊಗರಿಸುಬ್ಬಿನ ಉಂಡೆಯ ರುಚಿಯಮೇಲೆ ಕಾಲು ಘಂಟೆ ವ್ಯಾಖ್ಯಾನ ಮಾಡಿದ್ದುಂಟು. ಅವರ ಬಿಗುಮಾನ ಬಿರುಸುಗಳನ್ನು ಕಂಡವರು ಬಹಳ ಜನ; ಅವರ ಹೃದಯದ ಮಾರ್ದವವನ್ನು ಅವರಿಂದ ಸಹಾಯ ಪಡೆದವರು ಮಾತ್ರ ಬಲ್ಲರು. ಅಂಥವರ ಸಂಖ್ಯೆಯೇನೂ ಅಲ್ಪವಲ್ಲ.

ಪ್ರೊಫೆಸರ್ ರಾಲೋ ಅವರು ತರಗತಿಯಲ್ಲಿ ಪಾಠ ಹೇಳುತ್ತಿರು ವಾಗಲೂ ಸಹ ತಾವು ಸಾವಿರ ರೂಪಾಯಿ ಸಂಬಳದ ಅಧಿಕಾರಿಯೆಂಬು ದನ್ನು ಮರೆಯುತ್ತಿದ್ದರು. ಅವರು ಗೌನನ್ನು ಧರಿಸುತ್ತಿದ್ದುದೇನೋ ಉಂಟು. ಆದರೆ ಅದು ಹರಕಲು ಗೌನು. ಹರಕನ್ನು ಮುಚ್ಚುವ ಬದಲು ರಾಲೋ ಅದನ್ನು ಪ್ರಯತ್ನಪೂರ್ವಕವಾಗಿ ಪ್ರದರ್ಶಿಸುತ್ತಿದ್ದರು. ಅವರ ಗಡಿಯಾರ ಫೌಂಟನ್ ಪೆನ್ನುಗಳು ನಿತ್ಯರೋಗಿಗಳು. ಎಲ್ಲ ರೋಗಿಗಳಂತೆ ಅವಕ್ಕೂ ತಮ್ಮ ರೋಗವನ್ನು ಎಲ್ಲರೆದುರಿಗೂ ಹೇಳಿಕೊಳ್ಳುವ ಗೀಳು. ಫೌಂಟನ್ ಪೆನ್ನನ್ನು ನಾಲ್ಕಾರು ಸಾರಿ ಝಾಡಿಸದೆ ಎಂದೂ ಅವರು ಬರೆದದ್ದಿಲ್ಲ. ಅದನ್ನು ನೋಡಿ ನಾವು ನಕ್ಕರೆ "Don't look, you scoundrels!" ಎಂದು ಕೋಪವನ್ನು ನಟಿಸುವರು. ಅವರೇನಾದರೂ ನಾಟಕದ ಕಂಪೆನಿಯಲ್ಲಿ ಸೇರಿದ್ದರೆ ಪ್ರಥಮ ವರ್ಗದ ನಟರೆಂದು ಹೆಸರು ಪಡೆಯುತ್ತಿದ್ದರು. ಅವರಂತೆ ಸಾಹಿತ್ಯವನ್ನು—ಅದರಲ್ಲೂ ನಾಟಕವನ್ನು, ಪಾಠ ಹೇಳಿದವರು ಮತ್ತೊಬ್ಬರನ್ನು ಕಾಣೆ. ರುದ್ರನಾಟಕವಾಗಲಿ, ಹಾಸ್ಯನಾಟಕವಾಗಲಿ ಒಂದು ಸಾರಿ ಅವರು ಅಭಿನಯ ಸಹಿತವಾಗಿ ಅದನ್ನು ಓದಿದರೆಂದರೆ ಪ್ರತಿಯೊಂದು ಪಾತ್ರವೂ ಜೀವಂತವಾಗಿ ನಮ್ಮೆದುರು ನಿಲ್ಲುತ್ತಿತ್ತು; ಕವಿಯ ಪ್ರತಿಯೊಂದು ಸಾಲಿನ ಲಯ, ಪ್ರತಿಯೊಂದು ಪದದ ಮತ್ತು ಪದಪುಂಜದ ಧ್ವನಿ, ನಮ್ಮ ಮನಸ್ಸಿನಲ್ಲಿ ಪುನಃ ಸೃಷ್ಟಿ ಯಾಗುತ್ತಿತ್ತು. ನಾಟಕ ನಮಗೆ ಹೃದ್ಯವಾಗಬೇಕಾದರೆ ಯಾವ ವಿಮರ್ಶ ಕನ ಸಹಾಯವೂ ಬೇಕಿಲ್ಲ; ಅವರ ಓದುಗಾರಿಕೆಯೊಂದೇ ಸಾಕು. ಕಸಾಂಡ್ರ, ಕ್ಲೈಟೆಮ್ನೆಸ್ಟ್ರ, ಕಾರ್ಡೀಲಿಯ, ಲಿಯರ್, ಹ್ಯಾಮ್ಲೆಟ್, ಡಾಗ್‌ಬೆರಿ, ಫಾಲ್‌ಸ್ಟಾಫ್—ಇವೆಲ್ಲಾ ಪಾತ್ರಗಳನ್ನು ಅವರು ಅಭಿನಯಿ ಸಿದ್ದು ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಹೀಗೆ ಈಸ್ಕಿಲಸ್, ಷೇಕ್ಸ್‌ಪಿಯರ್

ಮೊದಲಾದವರ ನಾಟಕಗಳಲ್ಲಿ ಲೋಲರಾಗಿರುವವರಿಗೆ ಬಿಗುಮಾನದ ನಾಟಕ ಹೇಗೆ ತಾನೆ ರುಚಿಸೀತು! ಎಷ್ಟೋ ವೇಳೆ ಪಾಠ ಮುಗಿದ ಮೇಲೆ ಅವರು ಬಾಗಿಲಿನಿಂದ ಹೊರಗೆ ಹೋಗಬೇಕೆಂಬ ಮರ್ಯಾದೆಯನ್ನು ಮರೆತು ಕಿಟಕಿಯಿಂದಲೇ ಹೊರಕ್ಕೆ ಹಾರಿದ್ದುಂಟು.

ಒಂದು ದಿನ ಅಪರಾಹ್ಣ, ಪರೀಕ್ಷೆಗಳು ನಡೆಯುತ್ತಿದ್ದ ಕಾಲ. ಇನ್ನೂ ಮಾರ್ಚ್ ತಿಂಗಳಾದರೂ ಸೆಕೆ ವಿಪರೀತವಾಗಿತ್ತು. ಕೊಠಡಿ ಕೊಠಡಿಗೂ ಪ್ರಶ್ನಪತ್ರಿಕೆಗಳನ್ನು ಹಂಚಲು ನಾನು ರಾಲೋ ಅವರ ಜೊತೆಯಲ್ಲಿ ಹೋಗಿದ್ದೆ. ಒಂದು ಕೊಠಡಿಯಲ್ಲಿ ನನ್ನ ಮಿತ್ರ ಬಿ. ಆರ್. ಸುಬ್ಬರಾಯರು 'ಇನ್ವಿಜಿಲೇಟರ್' ಆಗಿ ನಿಂತು ಬಿಸಿಲಿನ ಝಳವನ್ನೂ ತೂಕಡಿಕೆಯನ್ನೂ ತಡೆಯಲಾರದೆ, ದೊಡ್ಡದಾಗಿ ಆಕಳಿಸುತ್ತಿದ್ದರು. ಅವರ ಆಕಳಿಕೆ ಇನ್ನೇನು ಮುಗಿಯಬೇಕು ಎನ್ನುವ ಹೊತ್ತಿಗೆ ನಾವಿಬ್ಬರೂ ಅಲ್ಲಿಗೆ ಬಂದೆವು. ಸುಬ್ಬರಾಯರು ಕಣ್ಣುಬಿಟ್ಟು ನೋಡಿದರೆ ಪ್ರಶ್ನಪತ್ರಿಕೆಯ ಕಟ್ಟನ್ನು ಕೊಡಲು ಕೈನೀಡಿ ರಾಲೋ ನಿಂತಿದ್ದಾರೆ! ತಮ್ಮ ಆಲಸಿಕೆ ಅವರ ಕಣ್ಣಿಗೆ ಬಿತ್ತಲ್ಲ ಎಂದು ಸುಬ್ಬರಾಯರಿಗೆ ಬಹಳ ನಾಚಿಕೆಯಾಗಿದ್ದಿರಬೇಕು. ತಿಂಡಿಯನ್ನು ಕದಿಯಲು ಹೋಗಿ ತಾಯಿಯ ಕೈಗೆ ಸಿಕ್ಕಿಬಿದ್ದ ಮಗುವಿನಂತಿತ್ತು, ಅವರ ಮುಖಮುದ್ರೆ. ರಾಲೋ ಅದನ್ನು ಗಮನಿಸಿಯೂ ಗಮನಿಸದವರಂತೆ ಚೇಷ್ಟೆಯ ನಗುವನ್ನು ನಕ್ಕು "ಅಲ್ಲವೆ ಸುಬ್ಬರಾಯರೆ? ನನಗೂ ಹಾಗೆ ಅನ್ನಿಸುತ್ತೆ," ಎಂದರು. ಒಂದು ಕ್ಷಣ ಸುಬ್ಬರಾಯರಿಗೆ ಈ ಮಾತು ಅರ್ಥವಾಗಲಿಲ್ಲ. ಆನಂತರ ಅದು ತಮ್ಮ ಆಕಳಿಕೆಗೆ ಉತ್ತರವೆಂದು ತಿಳಿದು ಅವರೂ ನಕ್ಕರು.

ಪ್ರೊಫೆಸರ್ ಮ್ಯಾಕಿಂಟಾಷ್ ಅವರಂತೂ ಬಿಗುಮಾನದಿಂದ ನಡೆದುಕೊಂಡದ್ದನ್ನು ಯಾರೂ ಕಾಣರು. ಪಾಠ ಹೇಳುವಾಗ ಹೊರತು ಉಳಿದ ಕಾಲದಲ್ಲಿ ಅವರು ಜನರೊಡನೆ ಮಾತನಾಡುವುದಂತಿರಲಿ, ಕಣ್ಣಿಗೆ ಬೀಳುವುದೇ ಅಪರೂಪ! ಇದು ಜಂಬದ ಪರಿಣಾಮವಲ್ಲ—ಅವರದ್ದು ಬಹಳ ಸಂಕೋಚದ ಸ್ವಭಾವ, ಅಷ್ಟೆ. "ಮ್ಯಾಕಿಂಟಾಷ್ ಕಂಬದ ಮರೆಯಲ್ಲಿ ನಿಂತಿರುವವರು" ಎಂದು ಪ್ರೊ. ವಾಡಿಯಾ ಅವರು ಆಗಾಗ ಹೇಳುತ್ತಿದ್ದರು. ನೋಡಿದರೆ ಅವರ ಮುಖದ ಮೇಲೆ ಎಂದೂ ನಗೆ ಆಡಿದಂತೆ ತೋರುತ್ತಿರಲಿಲ್ಲ. ಅವರ ಹಾಸ್ಯಪ್ರವೃತ್ತಿ ಎಷ್ಟು ಸೂಕ್ಷ್ಮವಾದದ್ದು, ಮೃದುವಾದದ್ದು, ಎಂದು ತಿಳಿಯಬೇಕಾದರೆ ಯೂನಿಯನ್ನಿನಲ್ಲಿ ಅವರು ಈ ರೂಪಕ್ಕೆ ಎಂದಾದರೂ ಒಂದು ದಿನ ಭಾಷಣ ಮಾಡಿದ್ದನ್ನು ಕೇಳಬೇಕು.

ನಮ್ಮ ತತ್ವಶಾಸ್ತ್ರದ ಪ್ರಾಧ್ಯಾಪಕರು 'ಸು' ಚೇಷ್ಟೆಯಲ್ಲಿ ಇವರೆಲ್ಲರಿಗಿಂತ ಒಂದು ಕೈ ಮೇಲು. ಪ್ರೊ. ರಾಧಾಕೃಷ್ಣನ್ ಅವರ ತರಗತಿಯಲ್ಲಿ ಪಾಠ ಆರಂಭವಾಗುವುದಕ್ಕೆ ಮೊದಲು ಸುಮಾರು ಹದಿನೈದು ನಿಮಿಷ ವಿದ್ಯಾರ್ಥಿಗಳನ್ನು ಮಾತಾಡಿಸಿ ಅವರನ್ನು ಕೀಟಲೆ ಮಾಡಿ ನಗಿಸುವುದಕ್ಕೆ ಮೀಸಲು. ಆಗ ಗುರುಶಿಷ್ಯರು ಒಬ್ಬರನ್ನೊಬ್ಬರು ಯಾವ ಪ್ರಶ್ನೆ ಬೇಕಾದರೂ ಕೇಳಬಹುದು. ಕಾಫಿ ಒಳ್ಳೆಯದೋ ಟೀ ಒಳ್ಳೆಯದೊ ? ತೃಪ್ತಿ ಒಳ್ಳೆಯದೋ ಮಹತ್ವಾಕಾಂಕ್ಷೆ ಒಳ್ಳೆಯದೊ ? ಬಂಧನವಿಲ್ಲದ ಸ್ವಾತಂತ್ರ್ಯವುಂಟೆ ? ಗುರುಗಳು ಇಂಗ್ಲೆಂಡಿಗೆ ಹೋಗಲಿಲ್ಲವೇಕೆ ? ಅವರಂತೆ ಎಲ್ಲರೂ ನಿಲುವಂಗಿ ಹಾಕಿಕೊಂಡರೆ ಚೆನ್ನಾಗಿರುತ್ತದೆಯೆ ?—ಇಂಥ ನೂರು ಪ್ರಶ್ನೆಗಳು ಚರ್ಚೆಗೆ ಬರುತ್ತಿದ್ದವು. ಈ ಪ್ರಶ್ನೆಗಳಲ್ಲಿ ಯಾವುದೂ ಸಣ್ಣದಲ್ಲ, ಯಾವುದೂ ದೊಡ್ಡದಲ್ಲ. ಗುರುಗಳು ಸಮಸ್ಯೆಗೆ ಏನೋ ಒಂದು ತಿರುವು ಕೊಟ್ಟು ಸಣ್ಣದನ್ನು ದೊಡ್ಡದಾಗಿ ಮಾಡುವರು, ದೊಡ್ಡದನ್ನು ಸಣ್ಣದಾಗಿ ಮಾಡುವರು. ಈ ಚರ್ಚೆ ಮುಗಿದ ಮೇಲೆ ಪಾಠ ಆರಂಭವಾಗುವುದು. ಡೆಕಾರ್ಟನ 'ಕೋಜಿಟೊ ಎರ್ಗೊ ಸುಮ್,' ಲೈಬ್ನಿಟ್ಸನ ಮೋನಡಾಲಜಿ, ದೈವಮತ್ತನಾದ ಸ್ಪಿನೋಸಾ, ಕ್ಯಾಂಟನ 'ಕ್ಯಾಟಗೋರಿಕಲ್ ಇಂಪರೆಟಿವ್'—ಯಾವ ವಿಷಯ ಉಪನ್ಯಾಸ ಮಾಡಲಿ ಅದೊಂದು ಅಮೃತಧಾರೆ. ಅದನ್ನು ಸವಿದು ಮತ್ತರಾಗದೆ ಅವರ ವಿಚಾರಸರಣಿಯನ್ನೂ ನಾವು ಅನುಸರಿಸುತ್ತಿದ್ದದ್ದೇ ಒಂದು ಆಶ್ಚರ್ಯ. ವಾಕ್ಸೌಂದರ್ಯವೂ ವಿಚಾರಸರಣಿಯೂ ಹದವಾಗಿ ಹೊಂದಿಕೊಂಡು ಬರುತ್ತಿದ್ದದ್ದರಿಂದ ಒಂದನ್ನು ಬಿಟ್ಟು ಮತ್ತೊಂದನ್ನು ಸೇವಿಸುವಂತಿಲ್ಲ. ಸಾಮಾನ್ಯ ವಿಷಯುಗಳ ಚರ್ಚೆಯ ತಳಹದಿ ಹಾಕಿ ಅದರ ಮೇಲೆ ಭವ್ಯವಾದ ತತ್ವ ಪ್ರಾಸಾದವನ್ನು ಅನಾಯಾಸವಾಗಿ ನಿರ್ಮಿಸುವ ಕೆಲಸ ಒಂದು ಘಂಟೆಯೊಳಗೆ ಮುಗಿಯುತ್ತಿತ್ತು.

ಇಂಥ ಐಂದ್ರಜಾಲಿಕರು, ಉದ್ಗ್ರಂಥಗಳನ್ನು ಬರೆದು ಇಡೀ ಪ್ರಪಂಚದಲ್ಲೇ ಕೀರ್ತಿಗಳಿಸಿದವರು, ತಮ್ಮ ಸಹಪ್ರಾಧ್ಯಾಪಕರ ಕೊರಳಪಟ್ಟಿಗೆ ವಾಕಿಂಗ್ ಸ್ಟಿಕ್ಕಿನ ಕೊಂಡಿ ಸಿಕ್ಕಿಸಿ ಎಳೆಯುವುದುಂಟೆ, ಅದೂ ತಮ್ಮ ಶಿಷ್ಯರೆದುರಿಗೆ ! ಈ ಹುಡುಗಾಟಕೆಯನ್ನು ನೋಡುತ್ತ ನಿಂತಿದ್ದ ಪ್ರೊ. ವಾಡಿಯಾ ಅವರಿಗಾದರೂ ತೋರಬೇಡವೆ—ಇಂಥ ವರ್ತನೆ ತತ್ವಶಾಸ್ತ್ರಾಧ್ಯಾಪಕರಿಗೆ ಸಲ್ಲದೆಂದು ? ಅವರೂ ತಮ್ಮ ಸ್ನೇಹಿತರ ಚೇಷ್ಟೆಗೆ ಷೋಕಾಗಿ ನಗುತ್ತ ನಿಂತಿದ್ದರು.

ಇವರೆಲ್ಲಾ ಪಾಶ್ಚಾತ್ಯರ ಹೂಣವಿದ್ಯೆಯ ಅಭ್ಯಾಸಮಾಡಿ ಕೆಟ್ಟವರು ಎಂದು ಕೊಳ್ಳೋಣ. ಅಚ್ಚ ಹಿಂದೂಸ್ಥಾನದ ಪಾಂಡಿತ್ಯದ ಪ್ರತೀಕವೆನ್ನ ಬಹು ದಾದ ಕಾನಕಾನಹಳ್ಳಿಯ ವರದಾಚಾರ್ಯರೂ ಪಾಂಡಿತ್ಯದ ಠೀವಿಯನ್ನು ಉಳಿಸಿಕೊಳ್ಳದಿದ್ದರೆ ಅವರಿಗೆ ಕ್ಷಮೆಯುಂಟೆ ? ಅವರು ಪ್ರಸಿದ್ಧ ವೈಯಾ ಕರಣಿಗಳು; 'ಕರ್ಣಾಟಕ ಶಬ್ದಾನುಶಾಸನ ತತ್ತ್ವಾವಲೋಕನತರಂಗ' ಎಂಬ ಗ್ರಂಥವನ್ನು ಬರೆದವರು. ಆ ಗ್ರಂಥಶೀರ್ಷಿಕೆಗೆ ಸರಿದೂಗುವಂತಾದರೂ ತಮ್ಮ ಬಾಹ್ಯಗಾಂಭೀರ್ಯವನ್ನು ಅಳವಡಿಸಿಕೊಳ್ಳಬೇಡವೆ? ಅವರು ಜನಮೇಜಯರಾಯನ ಕಾಲದಲ್ಲಿ ಹೊಲಿಸಿದ ಪಟ್ಟೆಪಟ್ಟೆ ಅಂಗಿಯೊಂದನ್ನು ತೊಟ್ಟು, ತಲೆಗೆ ಹಸರು ಶಾಲಿನ ರುಮಾಲನ್ನು ವಕ್ರವಕ್ರವಾಗಿ ಸುತ್ತಿ ಕಾಲೇಜಿಗೆ ಬರುತ್ತಿದ್ದರು. ಅವರಂಥ ಜನರನ್ನು ನೆಚ್ಚಿದ ಕ್ಷೌರಿಕನಿಗೆ ಉಪವಾಸವೇ ಗತಿ. ಇಂಥ ವಿಷಯಗಳಲ್ಲಿ ಅವರಿಗೆ ಏನೇನೂ ನಾಚಿ ಕೆಲ್ಲ; ಇಲ್ಲವೆಂಬುದರ ಅರಿವು ಅವರಿಗೂ ಇಲ್ಲ. ಅವರ ಶಿಷ್ಯರಿಗೂ ಇಲ್ಲ. ಸಾಧಾರಣವಾಗಿ ವ್ಯಾಕರಣಜ್ಞಾನಕ್ಕೂ ರಸಿಕತೆಗೂ ಹೊಂದುವಣಿಯಿಲ್ಲ ವೆಂದು ಎಲ್ಲರ ಅಭಿಪ್ರಾಯ. ವರದಾಚಾರ್ಯರು ಮಾತ್ರ ಈ ಮಾತಿಗೆ ವಿನಾಯಿತಿ. ಅವರು ಭಾರತವನ್ನು ಬೋಧಿಸುವುದೆಂದರೆ ಅದು ಸಾಹಿತ್ಯದ ಪಾಠ ಮಾತ್ರವಲ್ಲ, ಗಮಕದ ಪಾಠವೂ ಹೌದು. ಆ ಕಾಲದಲ್ಲಿ 'ಕನ್ನಡ ಮುನಷಿ'ಗಳನ್ನು ಕಂಡರೆ ಹುಡುಗರಿಗೆ ಅಷ್ಟಾಗಿ ಗೌರವವಿಲ್ಲ. ಆದ ವರದಾಚಾರ್ಯರನ್ನು ಕಂಡರೆ ಗೌರವ ಮಾತ್ರವಲ್ಲ, ಪ್ರೇಮವೂ ಇತ್ತು. ಹುಡುಗರ ಹುಚ್ಚುಮಾತುಗಳೂ ಹುಚ್ಚು ನಡತೆಗಳೂ ಎಂದೂ ಅವರನ್ನು ತಾಳ್ಮೆಗೆಡಿಸಿದ್ದಿಲ್ಲ. ಅವು ಆಚಾರ್ಯರ ಹಾಸ್ಯದ ಅಲಗಿಗೆ ಮಸೆಕಲ್ಲು ಇದ್ದಂತೆ. ಆದರೆ ಆ ಅಲಗು ನಾಟಿದರೆ ಪೆಟ್ಟು ತಿಂದವನಿಂದ ಹೊರಡುವುದು ರಕ್ತವಲ್ಲ, ನಗೆಯ ಹೊನಲು.

ಅಂದ ಮೇಲೆ ಆ ಹಳೆಯ ತಲೆಮಾರಿನ ಅಧ್ಯಾಪಕರೆಲ್ಲಾ ಒಣ ಗಾಂಭೀರ್ಯಕ್ಕೆ ಉಲ್ಲಾಸವನ್ನು ಬಲಿಕೊಟ್ಟವರಲ್ಲ. ಆದರೆ ಎಷ್ಟಿಲ್ಲವೆಂದರೂ ಅವರು ಸ್ವಲ್ಪ ಕಟ್ಟುನಿಟ್ಟಾದ ನಿಯಮ ಸಂಪ್ರದಾಯಗಳನ್ನು ಪಾಲಿಸ ವಿಧಿಯಿರಲಿಲ್ಲ. ಅವರನ್ನು ನೋಡಿದರೆ "ಇವರು ಸ್ವಭಾವತಃ ಜೀವನದ ಚೆಲುವನ್ನು ಕಂಡವರು, ನಕ್ಕು ನಲಿಯ ಬಲ್ಲವರು. ಆದರೆ ಅದೇನ ದುರದೃಷ್ಟವೋ, ಹೊಂಬಿಸಿಲಿನಲ್ಲಿ ಹೊಳೆಯುವ ತಮ್ಮ ಪ್ರಪಂಚವನ್ನು ಬಿಟ್ಟು ದಾರಿತಪ್ಪಿ, ಮಧ್ಯಮಯುಗದ ಕ್ರೈಸ್ತಪಾದ್ರಿಗಳು ಸ್ಥಾಪಿಸಿದ ಯಾವುದೋ ಅರೆಗತ್ತಲಿನ ದೇಗುಲದಲ್ಲಿ ಸಿಕ್ಕಿ ತೊಳಲುತ್ತಿದ್ದಾರೆ" ಎನ್ನಿ

ಸುತ್ತಿತ್ತು. ಈ ಪರಿಸ್ಥಿತಿ ಬಹುಕಾಲ ನಿಲ್ಲಲಿಲ್ಲ. 1925–30ರ ಸುಮಾರಿನಲ್ಲಿ ಯೌವನದ ಉತ್ಸಾಹ, ಸೊಂಪು, ತಡೆಯಿಲ್ಲದ ಸರಳತೆ, ಚಿಂತೆಯರಿಯದ ಗೆಲವು—ಇವುಗಳ ಮಹಾಪೂರ ಕಾಲೇಜಿನ ಮೇಲೆ ಕೊಚ್ಚಿ ಹರಿಯಿತು. ಆಗ ಸುಮಾರು ಹತ್ತು ಹದಿನೈದು ಜನ ಯುವಕರು ಅಧ್ಯಾಪಕರಾಗಿ ಸೇರಿದರು. ವೇದಿಕೆಯ ಮೇಲಿಂದ ಕೇಳಿಬರುತ್ತಿದ್ದ ಉಪನ್ಯಾಸಗಳ ಗಂಭೀರವಾಣಿಯ ಜೊತೆಗೆ ಯುವಕರ ಅಬ್ಬರ, ಕುಣಿತ, ಹಾಸ್ಯಗಳು ಕಾಲೇಜನ್ನು ತುಂಬಿದವು.

ಒಂದು ರೀತಿಯಲ್ಲಿ ನೋಡಿದರೆ ನಮ್ಮ ಗುರುಗಳಿಗಿಂತ ನಾವೇ ಭಾರತದ ಹಳೆಯ ಸಂಪ್ರದಾಯವನ್ನು ಚೆನ್ನಾಗಿ ಪ್ರತಿನಿಧಿಸಿದೆವೆನ್ನಬಹುದು. ಭಾರತ ತನ್ನ ದೇವರುಗಳೊಡನೆ ಸಹ ಚಕ್ಕಂದವಾಡಿ ನಗುವ ಹಕ್ಕನ್ನು ಮೊದಲಿನಿಂದಲೂ ಉಳಿಸಿಕೊಂಡು ಬಂದಿದೆ. ಇನ್ನು ಕಾಲೇಜಿನ ಸಂಪ್ರದಾಯಗಳ ಹೆಚ್ಚುಗಾರಿಕೆಯೇನು ಬಂತು! ಗುರುಗಳ ವಿಷಯದಲ್ಲಿ ನಮಗೆ ಮರ್ಯಾದೆಯಿರಲಿಲ್ಲವೆಂದಲ್ಲ. ಅವರ ನಿಷ್ಪಕ್ಷಪಾತವಾದ ಪಾಂಡಿತ್ಯ, ತಮ್ಮ ತಮ್ಮ ಶಾಸ್ತ್ರಗಳಲ್ಲಿ ಅವರು ಪಡೆದಿದ್ದ ಅಧಿಕಾರ, ಹುಚ್ಚು ಉತ್ಸಾಹದಿಂದ ಮುನ್ನುಗ್ಗಲೊಲ್ಲದ ವಿಚಾರಶೀಲತೆ—ಇವೆಲ್ಲಕ್ಕೂ ಅವರ ಬಾಹ್ಯವೇಷ ಒಪ್ಪ ಕೊಡುವಂತಿತ್ತು. ಅವರು ಬೆನ್ನ ಮೇಲೆ ಕೈಯಿಟ್ಟು ಒಂದು ವಿಶ್ವಾಸದ ಮಾತಾಡಿದರೆ ನಮಗೆ ಸ್ವರ್ಗ ಸಿಕ್ಕಿದಂತೆ. ಇಷ್ಟಾದರೂ ಹಿಂದಿನ ಪದ್ಧತಿಗಳ ಮೇಲೆ ನಾವು ದಂಗೆಯೇಳುವುದು ತಪ್ಪಲಿಲ್ಲ. ವಿದ್ಯಾರ್ಥಿದೆಸೆಯಲ್ಲಿದ್ದಾಗ ನಮಗೆ ಅಭ್ಯಾಸವಾದ ಒಂದು ಬಗೆಯ ದೌಷ್ಟ್ಯರಹಿತವಾದ 'ಬೊಹೀಮಿಯನ್' ಮನೋವೃತ್ತಿ ಅಳಿದಿರಲಿಲ್ಲ. ನಾವು ತರಗತಿಯಲ್ಲಿ ಡೆಸ್ಕಿನ ಮುಂದೆ ಕುಳಿತಿರುವ ಬದಲು ವೇದಿಕೆಯ ಮೇಲೆ ನಿಂತ ಮಾತ್ರಕ್ಕೆ ಅದರ ಸವಿಯನ್ನು ಚಪ್ಪರಿಸಬಾರದೇನು! ನಮಗಿಂತ ಸ್ವಲ್ಪ ಕಿರಿಯರಾದವರು, ಮೊನ್ನೆ ತಾನೆ ನಮ್ಮೊಡನೆ ನೂರೆಂಟು ಚೇಷ್ಟೆಗಳಲ್ಲಿ ಭಾಗವಹಿಸಿದವರು, ತರಗತಿಯಲ್ಲಿ ನಮ್ಮೊಡನೆ ಬಳಪದಾಟ ಆಡಿದವರು, ಇನ್ನೂ ವಿದ್ಯಾರ್ಥಿದೆಸೆಯಲ್ಲೇ ಇದ್ದರು. ಅವರೆದುರಿಗೆ ನಾವು ಗಾಂಭೀರ್ಯದ ಸೋಗು ಹಾಕಿದರೆ ಸುಮ್ಮನೆ ಬಿಟ್ಟಾರೆ? ನಾನು ಟ್ಯೂಟರ್ ಆದ ತರುಣದಲ್ಲೇ ಒಂದು ದಿನ ಯೂನಿಯನ್ ರೆಸ್ಟೊರಾಂಟಿಗೆ ಹೋದೆ—ಅಧ್ಯಾಪಕರು ರೆಸ್ಟೊರಾಂಟಿಗೆ ಹೋಗುವುದು ಆ ಕಾಲದ ಮರ್ಯಾದೆಗೆ ವಿರೋಧ. ಇನ್ನೂ ಎಂ.ಎ. ತರಗತಿಯಲ್ಲಿದ್ದ ನನ್ನ ಸ್ನೇಹಿತನೊಬ್ಬ ಅಲ್ಲಿ ಕುಳಿತಿದ್ದ. ಸ್ಥೂಲ ದೇಹಿಗಳಿಗೆ ಸಹಜವಾದ ನಗುಮುಖದ ಸೌಹಾರ್ದದಿಂದ ಆತ

ನನ್ನನ್ನು ಕಂಡೊಡನೆ "ಏನೋ, ಹೋಟಲಿಗೆ ಇಳಿದುಬಿಟ್ಟೆ ? ರುಮಾಲು ಹಾಕಬೇಡವೇನೊ, ದ್ರಾಬೆ ? ಹೋಗಲಿ ಬಾ. ಇವೊತ್ತಿನ ಕಾಫಿ ನಿನ್ನ ಲೆಕ್ಕಕ್ಕೇ ತಾನೆ ?" ಎನ್ನುತ್ತಾ ನನ್ನನ್ನು ಸ್ವಾಗತಿಸಿದ. ನಾನು—ಆಗ ತಾನೆ ಅಧ್ಯಾಪಕಪಟ್ಟಕ್ಕೆ ಏರಿದ್ದವನು—ಸ್ವಲ್ಪ ಸೆಟೆದು ನಿಂತು, ಗಂಭೀರ ಮುದ್ರೆಯನ್ನು ತಾಳಿ, ಷೇಕ್ಸ್‌ಪಿಯರನ ನಾಟಕದಲ್ಲಿ ಐದನೇ ಹೆನ್ರಿ ಫಾಲ್‌ಸ್ಟಾಫಿಗೆ ಹೇಳಿದ ಮಾತುಗಳನ್ನು ಸಂದರ್ಭಾನುಸಾರ ಬದಲಾಯಿಸಿ ನನ್ನ ಕೈಲಾದಷ್ಟು ನಾಟಕೀಯವಾಗಿ ಗಮಕಿಸಿದೆ :

ನೀನಾರು, ಓ ಮುದಿಯ ? ನಿನ್ನ ನಾನರಿಯೆ.
ತೆಗೆದೆಣಿಸು ಜಪಸರವ, ಸ್ತೋತ್ರಗಳನುಚ್ಚರಿಸು.
ಮತಿಗೇಡಿ ! ಜರೆ ಮುಸುಕಿ ನರೆತಿಹುದು ನಿನ್ನ ತಲೆ—
ವೃದ್ಧನಿಗೆ ಸಲ್ಲದೀ ಕೋಡಂಗಿಯಾಟ.
ಹಿಂದೆ ನಿನ್ನೊಡನಲೆದ ಮೂಢ ಮತಿ ನಾನೆಂದು
ಭ್ರಮಿಸಿಹೆಯ, ಎಲೆ ಮರುಳೆ ?

ನನ್ನ ಸ್ನೇಹಿತ ಇದಕ್ಕೆ ಕೊಟ್ಟ ಉತ್ತರವನ್ನೂ ಹಾಕಿದ ಶಾಪಗಳನ್ನೂ ಇಲ್ಲಿ ಕಾಣಿಸುವುದು ಉಚಿತವಲ್ಲ.

ಚಿಕ್ಕ ಮಕ್ಕಳು ಒಬ್ಬರನ್ನೊಬ್ಬರು ಮೊದಲ ಬಾರಿಗೆ ಪರಿಚಯ ಮಾಡಿಕೊಳ್ಳುವಾಗ ಹೊಸಬನನ್ನು ಆಪಾದಮಸ್ತಕ ನೋಡಿ, ಈ ಹೊಸ ವ್ಯಕ್ತಿ ಏನು ಚೇಷ್ಟೆ ಮಾಡುತ್ತದೆಯೋ ಎಂದು ಶಂಕಿಸಿ, ಅದಕ್ಕೆ ಪೂರ್ವ ಸಿದ್ಧತೆ ಮಾಡಿಕೊಳ್ಳುವಂತೆ ನಿಂತಿರುತ್ತವೆ. ಕಾಲೇಜಿನಲ್ಲಿ ನಮ್ಮ ಹಿರಿಯ ಗುರುಗಳ ನಡತೆ ಸ್ವಲ್ಪಮಟ್ಟಿಗೆ ಇದೇ ರೀತಿಯದು. ಅವರು ಸ್ನೇಹಕ್ಕೆ ಸಿದ್ಧ, ಆದರೆ ತಾವಾಗಿ ಮುಂದೆ ಬರುವವರಲ್ಲ. ಅವರು ಈ ಭೂಮಿಯನ್ನು ಎಂಟು ಮೂಲೆಗಳಲ್ಲೂ ಹೊತ್ತು ನಿಂತಿರುವ ಅಷ್ಟ ದಿಗ್ಗಜಗಳಂತೆ ; ತಮ್ಮ ತಮ್ಮ ಸ್ಥಾನಗಳನ್ನು ಬಿಟ್ಟು ಅಲೆಯುವವರಲ್ಲ. ನಿಂತಲ್ಲಿಂದಲೇ ಕುತೂಹಲದಿಂದ ಮತ್ತೊಬ್ಬರನ್ನು ನೋಡಿಯಾರು, ಮುಗುಳುನಗೆ ನಕ್ಕಾರು. ಒಬ್ಬೊಬ್ಬರಿಗೂ ಬೇರೆ ಬೇರೆ ಕೊಠಡಿಗಳಿದ್ದುದರಿಂದ ಅವೇ ಅವರ ಕಾರಾಗಾರಗಳಾಗಿ ಪರಿಣಮಿಸಿದವು. ನಮಗಾದರೋ ಎಲ್ಲರಿಗೂ ಸೇರಿ ಒಂದೆ ಕೊಠಡಿ. ಇಷ್ಟವಿರಲಿ, ಇಲ್ಲದಿರಲಿ, ನಾವೆಲ್ಲರೂ ಅಲ್ಲಿ ಸೇರದೆ ಬೇರೆ ಮಾರ್ಗವೇ ಇಲ್ಲ. ಅಲ್ಲಿಯ ಸಾಮಾಜಿಕ ಜೀವನದಲ್ಲಿ ಬೆಳೆದುಬಂದಿದ್ದ ಕೆಲವು ಅರ್ಥವಿಲ್ಲದ ವಿಧಿ ನಿಷೇಧಗಳನ್ನು ನಾವು ಮೂಲೆಗೆ ತಳ್ಳಿದೆವು.

ಹೊಸಬನೊಬ್ಬ ಅಧ್ಯಾಪಕವರ್ಗಕ್ಕೆ ಸೇರಿ ಕಾಮನ್ ರೂಮಿಗೆ ಬಂದರೆ ಹಳಬರು ಅವನನ್ನು ಬಾಚಿ ತಬ್ಬುವರು; ಅವನಿಗೆ ಕಾಫಿ ತಿಂಡಿಗಳನ್ನು ತರಿಸಿ ಕೊಟ್ಟು ಅವನ ರೂಪ, ಬಟ್ಟೆ ಬರೆಗಳು, ನಡಗೆಯ ವೈಖರಿ, ಎಲ್ಲದರ ಮೇಲೂ ಮನ ಬಂದಂತೆ ಹಾಸ್ಯದ ಟೀಕೆ ಮಾಡಿ, ಅವನ ಹಿಂಜರಿಕೆ ಸಂಕೋಚಗಳನ್ನು ಹೋಗಲಾಡಿಸಿ ಕಾಮನ್ ರೂಮಿನ ಆವರಣಕ್ಕೆ ತಕ್ಕಂತೆ ಅವನನ್ನು ಪಳಗಿಸುತ್ತಿದ್ದರು. ಅಲ್ಲಿ ದಿನವೂ ತರಿಸುತ್ತಿದ್ದ ಉಪಾಹಾರಗಳಿಗೆ ಹಣ ಯಾರು ಕೊಡಬೇಕೆಂಬುದು ತಿಳಿಯದು. ಅದರ ವಿಷಯವಾಗಿ ಪ್ರಣಯಕಲಹಗಳಾಗದೆ ಇದ್ದ ದಿನವೇ ಇಲ್ಲ. "ನಾನೇನು ಕುಬೇರನ ಮೊಮ್ಮಗನೆ? ಇವೊತ್ತು ನೀನೆ ಹಣ ಕಕ್ಕು" ಎಂದವನೇ ನಾಳೆ "ನೀನೇನು ಕುಬೇರನ ಮೊಮ್ಮಗನೋ? ಬಾಯಿ ಮುಚ್ಚು. ಇವೊತ್ತಿನ ಖರ್ಚು ನನ್ನದು" ಎನ್ನುವುದು ಸರ್ವಸಾಧಾರಣ.

ನಮಗೆ ಗುರುಗಳಾಗಿದ್ದವರು ಇನ್ನೂ ಕಾಲೇಜಿನಲ್ಲೇ ಇದ್ದರಷ್ಟೆ. ಆದ್ದರಿಂದ ಸಂಸ್ಥೆಯ ಶಿಷ್ಟಸಂಪ್ರದಾಯಗಳನ್ನು ನಡೆಸಿಕೊಂಡು ಬರುವ ಭಾರವನ್ನು ಅವರ ಮೇಲೆ ಹೊರಿಸಿ ನಿರಾಂತಕರಾಗಿ ಅಲ್ಲಿಯ ಜೀವನದ ಉಲ್ಲಾಸವನ್ನು ಸವಿಯುವುದೊಂದೇ ನಮ್ಮ ಕೆಲಸ. ಪ್ರಾಧ್ಯಾಪಕರೆನ್ನಿಸಿ ಕೊಂಡವರು ಕಾಮನ್ ರೂಮಿನ ಸದಸ್ಯರಾಗಿರಕೂಡದೆಂದು ಅನುಕ್ತವಾದ ನಿಯಮವಿತ್ತು. ನಮ್ಮ ಹುಚ್ಚು ಹುಡುಗಾಟದಲ್ಲಿ ಭಾಗಿಗಳಾಗುವುದು ಅವರಿಗೆ ಸಾಧ್ಯವಲ್ಲ; ರೂಮಿಗೆ ಬಂದರೆ ಭಾಗಿಗಳಾಗದಿರುವುದೂ ಸಾಧ್ಯವಲ್ಲ. ಆದ್ದರಿಂದ ಅವರು ದೂರದಲ್ಲೇ ನಿಂತು ತಮಗೆ ಈ ಸ್ವಾತಂತ್ರ್ಯನಲಿವುಗಳು ಇಲ್ಲವಾಯಿತಲ್ಲ ಎಂದು ಮತ್ಸರದ ದೃಷ್ಟಿಯನ್ನು ಬೀರಬೇಕು. ಆಗ ಕಾಮನ್ ರೂಮಿನಲ್ಲಿದ್ದವರಲ್ಲಿ ಸುಮಾರು ಹತ್ತು ಹದಿನೈದು ಜನ. ೨೫–೩೦ ವರ್ಷದವರು; ಸ್ವಲ್ಪ ಹೆಚ್ಚು ವಯಸ್ಸಾದವರು ಐದಾರು ಜನ. ನಾಗಾ ಲೋಟದಿಂದ ಓಡುವ ಯುವಕರ ಪ್ರವೃತ್ತಿಯನ್ನು ಕಡಿವಾಣ ಹಾಕಿ ಕಟ್ಟು ವುದು ಈ ಹಿರಿಯರ ಕರ್ತವ್ಯ. ಅದನ್ನು ಪಾಲಿಸಲು ಅವರೇನೋ ಪ್ರಾಮಾಣಿಕರಂತೆ ಪ್ರಯತ್ನ ಮಾಡಿದರು. ಆದರೆ ಸೋಲನ್ನೊಪ್ಪಿ ಅವರೂ ನಮ್ಮ ಗುಂಪಿಗೇ ಸೇರಬೇಕಾಯಿತು. ನಮ್ಮಲ್ಲಿ ಕೆಲವರೇನೋ ತಮ್ಮ ತಮ್ಮ ಶಾಖೆಯ ಪ್ರಾಧ್ಯಾಪಕರ ಗತ್ತನ್ನು ಅನುಕರಿಸುವ ಪ್ರಯತ್ನ ಮಾಡಿ ದರು. ಎನ್. ಎಸ್. ಸುಬ್ಬರಾಯರಂತೆ ಷರ್ಟಿನ ತುದಿಯಲ್ಲಿ ಕರವಸ್ತ್ರ ಇಟ್ಟುಕೊಳ್ಳುವವರು, ವಾಡಿಯಾ ಅವರಂತೆ ವಾಕಿಂಗ್ ಸ್ಟಿಕ್ಕನ್ನು ಮೆರಸು ವವರು, ಒಬ್ಬರಿಬ್ಬರಿದ್ದರೂ ಅವರನ್ನು ಒಂದೆರಡು ತಿಂಗಳಲ್ಲೇ ಹದಕ್ಕೆ

ತಂದೆವು. ತೀರ ಅಂದವಾಗಿ ಕ್ರಾಪು ಬಾಚಿಕೊಂಡು ಬಂದರೆ ಅದನ್ನು ಕೆದರಿಸುವುದಕ್ಕೆ ಯಾರಾದರೂ ಕಾದು ನಿಂತಿರುತ್ತಿದ್ದರು; ಟೈ ಕಟ್ಟಿದ್ದು ತೀರ 'ಸಭ್ಯ'ವಾಗಿ ಕಂಡರೆ ಅದನ್ನು ಬಲಾತ್ಕಾರವಾಗಿ ಕಿತ್ತು ಅದರ ಗರಿ ಮುರಿದು ಕೈಗೆ ಕೊಡುತ್ತಿದ್ದೆವು. ಇಷ್ಟಾದರೂ ಬಟ್ಟೆಬರೆಗಳ ಷೋಕಿಯ ವಿಷಯದಲ್ಲಿ ನಮಗೆ ಸಹಾನುಭೂತಿಯೇನೋ ಇತ್ತು. ಮೈಸೂರಿನ ದರ್ಜಿಗಳೆಷ್ಟೋ ಜನ ಫ್ಯಾಷನ್ ವಿಷಯದಲ್ಲಿ ನಮ್ಮಿಂದ ಶಿಕ್ಷಣ ಪಡೆದರು. ಆದರೆ ಅದು ಎಲ್ಲೆ ಮೀರಿ ಹೋಗಬಾರದೆಂಬ ನಿಯಮವಿತ್ತು. ಗೌನಿನ ಮೇಲೆ ನಾವು ಧಾಳಿಮಾಡುವ ಅಗತ್ಯ ಬರಲಿಲ್ಲ; ಅದು ತಾನಾಗಿಯೇ ಸತ್ತಿತ್ತು. ಪ್ರಾಧ್ಯಾಪಕರು ಕೂಡ ಅದನ್ನು ಕೈಬಿಟ್ಟಿದ್ದರು. ಮೈಸೂರು ರುಮಾಲು ವಿ. ಸೀ. ಯವರಿಂದ ಎಂಥ ಸರ್ಟಿಫಿಕೇಟು ಪಡೆದಿರಲಿ, ನಾವೇನೋ ಅದಕ್ಕೆ ಬಹಿಷ್ಕಾರ ಹಾಕಿದೆವು. ಕಾಮನ್ ರೂಮಿನಲ್ಲೆಲ್ಲಾ ಬಹುಮಟ್ಟಿಗೆ ಕ್ರಾಪು ತಲೆಯೇ. ಒಬ್ಬರು—ಕನ್ನಡ ಶಾಖೆಗೆ ಸೇರಿದವರು—ಕ್ರಾಪು ಬಿಡಲು ಹಿಂಜರಿದಾಗ ನಾಲ್ಕು ಜನ ಸದಸ್ಯರು ಅವರ ಕೈಕಾಲುಗಳನ್ನು ಕಟ್ಟಿ ಹಿಡಿದು ಐದನೆಯವರು ಅವರ ಜುಟ್ಟನ್ನು ಕತ್ತರಿಸಿದ ಪ್ರಸಂಗವೂ ನಡೆದದ್ದುಂಟು.

ಕಾಮನ್ ರೂಮಿನಲ್ಲಿ ನಮ್ಮಿಂದಾದ ಬದಲಾವಣೆ ಕೇವಲ ಉಡುಪಿಗೆ ಸಂಬಂಧಪಟ್ಟದ್ದಲ್ಲ. ಅಲ್ಲಿದ್ದವರಲ್ಲಿ ಬಹು ಮಂದಿ ಸ್ವಲ್ಪ ಹೆಚ್ಚು ಕಡಿಮೆ ಒಂದೇ ವಯಸ್ಸಿನವರು; ಸುತ್ತಿನ ಜನರ ಸ್ವಭಾವಕ್ಕೆ ಹೊಂದಿಕೊಳ್ಳುವಂತೆ, ಮತ್ತು ನಮ್ಮ ಓರೆಕೋರೆಗಳು ಎದ್ದು ಕಾಣದಂತೆ ಸ್ವಭಾವವನ್ನು ತಿದ್ದಿಕೊಳ್ಳುವ ಕಾಲ ಮೀರಿರಲಿಲ್ಲ; ನಮ್ಮ ಜೀವನ ಕ್ರಮ ಮೂರ್ಪಡಿಸಲಾಗದ ರೂಪವನ್ನು ತಳೆದಿರಲಿಲ್ಲ. ನಮ್ಮ ಗುಂಪು ಯಾರೊಬ್ಬರನ್ನೂ ಮರೆಯುವಷ್ಟು ದೊಡ್ಡದೂ ಅಲ್ಲ, ಯಾರೊಬ್ಬರು ಪ್ರಧಾನಪಾತ್ರ ವಹಿಸುವಷ್ಟು ಚಿಕ್ಕದೂ ಅಲ್ಲ. ಹೀಗಾಗಿ ಯಾರ ವ್ಯಕ್ತಿತ್ವಕ್ಕೂ ಲೋಪ ಬರದೆ ಕಾಮನ್ ರೂಮಿನ ಜೀವನ ಒಂದಾಗಿ ಪರಿಣಮಿಸುವುದು ಸಾಧ್ಯವಾಯಿತು. ನಮ್ಮ ವೃತ್ತಿಗೂ ವೈಯಕ್ತಿಕ ಆನಂದಗಳಿಗೂ ಎಂದೂ ಘರ್ಷಣೆ ಬಂದದ್ದಿಲ್ಲ. ಕರ್ತವ್ಯದೃಷ್ಟಿಯನ್ನು ದೊಡ್ಡದಾಗಿ ಮುಂದಿಟ್ಟುಕೊಳ್ಳದೆಯೇ ಕರ್ತವ್ಯದ ಸಾಧನೆಯಾಗುತ್ತಿತ್ತು. ಹತ್ತು ಜನ ಸೇರಿ ಪಾತ್ರಗಳನ್ನು ಹಂಚಿಕೊಂಡು ನಾಟಕವನ್ನೋದುವುದು, ಕುವೆಂಪು ಅವರಂಥ ತರುಣ ಕವಿಗಳ ಕವನಗಳನ್ನು ಓದಿಸಿ ಕೇಳುವುದು, ಸರ್ ಜೇಮ್ಸ್‌ಜೀನ್ಸನ *Mysterious Universe* ನಂಥ ಪುಸ್ತಕವನ್ನು ಪರಿಶೀಲಿಸುವುದು, ಕಾರ್ಲ್ ಮಾರ್ಕ್ಸನ

ವಾದವನ್ನು ಚರ್ಚಿಸುವುದು—ಇವೆಲ್ಲಾ ಕರ್ತವ್ಯವೋ ಆನಂದವೋ ?

ಯಾವ ವಿಷಯವಾಗಿ ಚರ್ಚೆ ನಡೆದರೂ ತೀವ್ರವಾದ ಆಸಕ್ತಿಯಿಂದಲೂ ಹುರುಪಿನಿಂದಲೂ ನಡೆಯುತ್ತಿತ್ತು. ಮಾತಿನಲ್ಲೇನಾದರೂ ಅಸಂಬದ್ಧತೆಯೋ ಅಂಧಶ್ರದ್ಧೆಯೋ ಸುಳಿದರೆ ಅದನ್ನು ಕತ್ತರಿಸಿಹಾಕಲು ಜನ ಕಾದು ಕುಳಿತಿದ್ದರು. ಮಾತು ಸ್ವತಂತ್ರವಾಗಿ ಹತ್ತು ದಿಕ್ಕಿಗೂ ಹೊರಳಿ ತಡೆಯಿಲ್ಲದೆ ಸಾಗುತ್ತಿತ್ತು. ಅದರ ಮತ್ತಿನಲ್ಲಿ ಮತ್ತೊಬ್ಬರ ಮನಸ್ಸನ್ನು ನೋಯಿಸಿಯೇವೆಂಬ ಶಂಕೆಗೆ ಕಾರಣವೇ ಇರಲಿಲ್ಲ. ವಾದದ ಮತ್ತು ಉತ್ತರದ ತೀಕ್ಷ್ಣತೆಯ ಹಿಂದೆ ಎಷ್ಟೊಂದು ಸ್ನೇಹವಿತ್ತೆಂದು ಎರಡು ಕಡೆಯವರೂ ಬಲ್ಲರು. ಅಲ್ಲಿ ಬಂದ ತೆಗಳಿಕೆ ತಿರಸ್ಕಾರವಲ್ಲ, ಹೊಗಳಿಕೆ ಮುಖಸ್ತುತಿಯಲ್ಲ. ಯೂನಿಯನ್ನಿನ ಚರ್ಚಾಕೂಟಗಳಲ್ಲಿ ಭಾಷಣ ಮಾಡಿದವನಿಗೆ ಒಳ್ಳೆಯ ಭಾಷಣ ಮಾಡಿದೆನೆಂಬ ಸಂತೋಷಕ್ಕಿಂತ ತನ್ನ ಮಿತ್ರರು ಅದನ್ನು ಸೀಳಿಹಾಕುವ ವೈಖರಿಯನ್ನು ನೋಡುವುದು ಹೆಚ್ಚಿನ ಸಂತೋಷ.

ಆಗ ಕಾಲೇಜಿನಲ್ಲಿ ಪ್ರದರ್ಶಿತವಾದ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದವರೂ ನಮ್ಮವರೇ. ಪ್ರದರ್ಶನಕ್ಕೆ ಹದಿನೈದು ದಿನ ಮುಂಚೆ, ಅದು ಮುಗಿದ ಮೇಲೆ ಹದಿನೈದು ದಿನ, ಅವರು ಮಾಡಿಲ್ಲದ, ಮಾಡಿದ, ಮಾಡಬಹುದಾಗಿದ್ದ, ಎಲ್ಲ ತಪ್ಪುಗಳನ್ನೂ ಲೆಕ್ಕಹಾಕಿ ಹಾಸ್ಯ ಸಾಗರದಲ್ಲಿ ಅದ್ದಿ ತೆಗೆಯುತ್ತಿದ್ದೆವು. ನಾಟಕದ ಪಾತ್ರರಚನೆ, ವಸ್ತುವಿನ್ಯಾಸ, ರಸ, ಮುಂತಾದುವನ್ನು ಕುರಿತ ಚರ್ಚೆಗಳಿಗಂತೂ ಕೊನೆಮೊದಲಿಲ್ಲ. ಈ ವಾಗ್ಯುದ್ಧಗಳಲ್ಲಿ ಉಪಯೋಗಿಸಿದ ಅಸ್ತ್ರಗಳು ಕಾಮನ್ ರೂಮಿನಲ್ಲಿ ಹುಸಿ ಕೋಪದ ಹೊಗೆಯನ್ನು ತುಂಬಿ, ನಗೆಯ ಕಿಡಿಯನ್ನು ಕಾರಿ ಮಿಂಚಿನ ವೇಗದಿಂದ ಹೊರಟು ಮಧ್ಯಮಾರ್ಗದಲ್ಲೇ ಪ್ರತ್ಯಸ್ತ್ರಗಳನ್ನು ಎದುರಿಸುತ್ತಿದ್ದುವು. ಅಸ್ತ್ರಗಳ ಉಪದೇಶವನ್ನು ನಾವು ಪಡೆದದ್ದು ಒಂದು ಕಡೆ ಭರತ ಋಷಿಗಳಿಂದ, ಮತ್ತೊಂದು ಕಡೆ ಗ್ರೀಕರ ಅರಿಸ್ಟೋಟಲಿನಿಂದ. ಅವುಗಳಿಗೆ ನಾವು ಧಾರೆಯೆರೆದ ಪುಣ್ಯವು ಷೇಕ್ಸ್‌ಪಿಯರ್, ಈಸ್ಕಿಲಸ್, ಕಾಳಿದಾಸ ಭವಭೂತಿ ಮೊದಲಾದವರನ್ನು ವ್ಯಾಸಂಗಮಾಡಿ ಪಡೆದದ್ದು. ಆ ಕವಿಶ್ರೇಷ್ಠರು ಅಂತರಿಕ್ಷದಲ್ಲಿ ನಿಂತು ಈ ಯುದ್ಧವನ್ನು ನೋಡಿ ಮಂದಹಾಸದ ವರ್ಷವನ್ನು ಕರೆದಿರಬೇಕು.

ನಾವು ಆಗ ಪಾಂಡಿತ್ಯವನ್ನು ಸಂಪಾದಿಸಿದ್ದರೆ ಅದು ಕಣ್ಣೀರಿನಲ್ಲಿ ಕೈತೊಳೆದು ಸಂಪಾದಿಸಿದ್ದಲ್ಲ. ಮಕ್ಕಳು ಆಟವಾಡುತ್ತಲೇ ಪ್ರಪಂಚದ

ಜ್ಞಾನವನ್ನು ಪಡೆಯುವಂತೆ ನಾವು ದಕ್ಕಿದಷ್ಟು ಪಾಂಡಿತ್ಯ ಪಡೆದೆವು. ಯಾರೋ ಒಬ್ಬ "ಸಂಸ್ಕೃತ ಸಾಹಿತ್ಯದಲ್ಲಿ ಸಂಪ್ರದಾಯದ ಕವಿಸಮಯಗಳನ್ನು ಬಿಟ್ಟರೆ ಮತ್ತೇನೂ ಸಿಕ್ಕದು; ಪ್ರತಿಭೆಗೆ ಅವಕಾಶವೇ ಇಲ್ಲ" ಎಂದು ಕೀಟಲೆಗಾಗಿ ವಾದ ಹೂಡುವುದು; ಹತ್ತು ಜನ ಕುಮಾರಸಂಭವ, ಶಾಕುಂತಲ, ಮೃಚ್ಛಕಟಿಕಗಳಿಂದ ಶ್ಲೋಕಗಳನ್ನು ಉದಾಹರಿಸಿ ಅವನನ್ನು ಧ್ವಂಸಮಾಡುವುದು; ಅವನು ಸೋತರೂ ಸೋಲನ್ನು ಹಾಸ್ಯದ ಹೊನಲಿನಲ್ಲಿ ತೇಲಿಸುವುದು. ಶ್ರೀ ಅನಂತಕೃಷ್ಣಶರ್ಮರವರು ನೂರು ವರ್ಷದ ಹಿಂದಿನ ಆರ್ಥಿಕ ಸಾಮಾಜಿಕ ವ್ಯವಸ್ಥೆಗಳನ್ನು ಹೊಗಳಿದರೆ ಅದನ್ನು ಹಳಿಯುವುದಕ್ಕೆ ಹತ್ತು ಜನ ತಾವು ಕಲಿತ ಶಾಸ್ತ್ರಗಳನ್ನೆಲ್ಲಾ ಪ್ರಯೋಗಿಸಿ ನಿಲ್ಲುವುದು. ಇಂಥ ಸಂದರ್ಭಗಳಲ್ಲಿ ನಮಗೆ ಯಾರಿಗೂ ಜಯಾಪಜಯಗಳು ಮುಖ್ಯವಲ್ಲ; ನಾವೆಲ್ಲರೂ ವಿಚಾರಸರಸ್ಸಿನಲ್ಲಿ ಕ್ರೀಡೆಯಾಡಿದ್ದು, ಒಬ್ಬರನ್ನೊಬ್ಬರು ಹಾಸ್ಯಮಾಡಿ ನಕ್ಕದ್ದು, ಯೂನಿಯನ್ ಹೋಟಲಿನವನು ಸರಬರಾಜು ಮಾಡಿದ ತಿಂಡಿ ತೀರ್ಥಗಳನ್ನು ಮುಗಿಸಿದ್ದು—ಇವೇ ಮುಖ್ಯ.

ಕಾಮನ್ ರೂಮಿಗೆ ತಾವೇನಾದರೂ ಪ್ರವೇಶಿಸಿದರೆ ಅದೇ ಒಂದು ಅನುಗ್ರಹವೆಂದು ಭಾವಿಸಿದ್ದ ಒಬ್ಬರಿಬ್ಬರು ಯುವಕ ಅಧ್ಯಾಪಕರು ನಮ್ಮನ್ನು ತಿಂಡಿಪೋತರು, ಜೇಜವಾಬ್ದಾರಿಯ ಲಫಂಗರು, ಮದ್ಯಪಾಯಿಗಳೆಂದರೂ ಎನ್ನಬಹುದು, ಎಂದು ಹಳಿಯುತ್ತಿದ್ದುದುಂಟು. ನಮ್ಮ ವಾರಾಂತ್ಯದ ವಿನೋದಕೂಟಗಳೆಂದರೆ ಅವರಿಗೆ ತಿರಸ್ಕಾರ. ಆದರೆ ಈ ಲಫಂಗರು ಹೊಸದಾಗಿ ಸಂಸ್ಕೃತ ಕಲಿತರು; ಭಾಷಾಶಾಸ್ತ್ರದ ವ್ಯಾಸಂಗ ಮಾಡಿದರು, ಕವಿತೆಗಳನ್ನು ಕಟ್ಟಿದರು. ಯೂನಿಯನ್ನಿನ ನಾಟಕಮಂಡಳಿಗಾಗಿ ನಾಟಕಗಳನ್ನು ಬರೆದರು, ಗದುಗಿನ ಭಾರತವನ್ನು ಶಾಸ್ತ್ರೀಯವಾಗಿ ಸಂಪಾದಿಸಿದರು, ಪುರಾತನ ಕಾಲದ ಹಸ್ತಪ್ರತಿಗಳನ್ನೂ ಓಲೆಗರಿಯ ಪುಸ್ತಕಗಳನ್ನೂ ಸಂಗ್ರಹಿಸಿದರು, ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಗೆ ಪುಸ್ತಕಗಳನ್ನು ಬರೆದರು. ಅವರು ತಿಂಡಿಪೋತರಲ್ಲವೆಂದಲ್ಲ. ಇವೆಲ್ಲಾ ಕೆಲಸಗಳ ಜೊತೆಗೆ ಅವರ ಹರಟೆಯೂ ತಿಂಡಿಪೋತತನವೂ ಅವ್ಯಾಹತವಾಗಿ ನಡೆದವು. ಅವರನ್ನು ಹೆಂಡಕುಡುಕರಿಗೆ ಹೋಲಿಸಿದವರ ಮಾತು ತೀರ ಅಸತ್ಯವಲ್ಲ. ಆದರೆ ಆ ಮದ್ಯ ವಿಶೇಷರೀತಿಯಲ್ಲಿ ತಯಾರಾದದ್ದು. ತ್ಯಾಗರಾಜರ ಮತ್ತು ದೀಕ್ಷಿತರ ಕೃತಿಗಳು, ಈಸ್ಕಿಲಸ್ಸನ ಮತ್ತು ಷೇಕ್ಸ್‌ಪಿಯರನ ನಾಟಕಗಳು, ರಸೆಲ್ಲನ ಸಂದೇಹವಾದ, ವರ್ಡ್ಸ್‌ವರ್ತನ

ಅನುಭಾವ—ಇಂಥ ಸರಕುಗಳನ್ನು ಸೇರಿಸಿ ಭಟ್ಟಿ ಇಳಿಸಿದ್ದು, ಆ ಮದ್ಯ. ಅದನ್ನು ಕುಡಿದು ಓಲಾಡುವ ಅಭ್ಯಾಸ ಇನ್ನೂ ನಮ್ಮಲ್ಲಿ ನಿಂತಿದೆ; ಅದರ ಅಮಲು ಕಾಲುಶತಮಾನ ಕಳೆದರೂ ಇಳಿದಿಲ್ಲ.

ಯಾವುದೋ ಒಂದು ದಿನ ಶುಭ ಲಗ್ನದಲ್ಲಿ ಕಾಮನ್ ರೂಮು ಪೊರೆ ಕಳೆದ ಹಾವಿನಂತೆ ತನ್ನ ಹಳೆಯ ಹೊದಿಕೆಯನ್ನು ಕಿತ್ತೊಗೆದು 'ಆರೆಂಜ್ ಕ್ಲಬ್' ಆಗಿ ಪರಿವರ್ತಿತವಾಯಿತು ಸಂಸ್ಥೆ ಹಿಂದಿನಿಂದ ಇದ್ದದ್ದೇ. 1930-31ರಲ್ಲಿ ಅದಕ್ಕೆ ಹೊಸದಾಗಿ ನಾಮಕರಣವಾಯಿತು, ಅಷ್ಟೇ. 'ಆರೆಂಜ್' ಎನ್ನುವುದು ರೂಪಕಾಲಂಕಾರವಲ್ಲ, ಕೇವಲ ವರ್ಣಸೂಚಕ ವಾದ ಪದವೂ ಅಲ್ಲ. ನಮ್ಮ ಕ್ಲಬ್ಬು ನಿಜವಾಗಿ ರಸವತ್ತಾದ ಕಿತ್ತಲೆ ಹಣ್ಣುಗಳಿಗೆ ಸಂಬಂಧಪಟ್ಟದ್ದು. ಈ ಕ್ಲಬ್ಬನ್ನು ಸ್ಥಾಪಿಸಬೇಕೆಂಬ ಸ್ಫೂರ್ತಿ ಮೊದಲು ಬಂದದ್ದು ಶ್ರೀ ಸಿ. ಆರ್. ನರಸಿಂಹಶಾಸ್ತ್ರಿಗಳಿಗೆ. ಅವರು ದೇವ ಭಾಷೆಯಾದ ಸಂಸ್ಕೃತದ ಅಧ್ಯಾಪಕರು; ಆದ್ದರಿಂದ ಅವರಿಗೆ ಈ ಭೌತ ಪ್ರಪಂಚದ ಸೌಖ್ಯದ ವಿಷಯದಲ್ಲಿ ಹೆಚ್ಚು ಆಸಕ್ತಿಯಿರಬಾರದು-—ಋಷಿ ಗಳು ಕಂದಮೂಲ ಫಲಾದಿಗಳಿಂದ ಜೀವಧಾರಣೆ ಮಾಡುತ್ತಿದ್ದರಷ್ಟೆ. ಯೂನಿಯನ್ ಹೋಟಲಿನವನು ಸರಬರಾಜು ಮಾಡುತ್ತಿದ್ದ ತಿಂಡಿಗಳಿಗಿಂತ ಕಿತ್ತಲೆಹಣ್ಣು ಋಷ್ಯಾಹಾರಕ್ಕೂ ಊರ್ಧ್ವಲೋಕಕ್ಕೂ ಹತ್ತಿರವೆಂದು ಅವರಿಗೆ ತೋರಿರಬೇಕು. ನಾವೇನೂ ಅವರ ಅಭಿಪ್ರಾಯವನ್ನು ವಿರೋ ಧಿಸಲಿಲ್ಲ. ಆದರೆ ಮರ್ತ್ಯಲೋಕದ ವಿಷಯದಲ್ಲಿ ಅಷ್ಟೊಂದು ತಾತ್ಸಾರವನ್ನು ತೋರಿಸುವುದು ನಮಗೆ ಸೂಕ್ತವಾಗಿ ಕಾಣಲಿಲ್ಲ. ಮನುಷ್ಯ ಬದುಕುವುದು ಬ್ರೆಡ್ಡಿನಿಂದ ಮಾತ್ರವಲ್ಲ ಎಂದು ಯೇಸುಕ್ರಿಸ್ತ ಹೇಳಿದನಲ್ಲವೆ ? ಇದು ಗಮ ನಿಸಬೇಕಾದ ಮಾತು. ಬ್ರೆಡ್ ಒಂದಾದರೆ ಸಾಲದು, ಬದುಕಬೇಕಾದರೆ ; ಬೆಣ್ಣೆ ಸಕ್ಕರೆಗಳೂ ಜೊತೆಗೆ ಬೇಕು. ಇದನ್ನು ನೆನೆದುಕೊಂಡು ನಾವು ಮನುಷ್ಯ ಬದುಕುವುದು ಕಿತ್ತಲೆಹಣ್ಣಿನಿಂದ ಮಾತ್ರವಲ್ಲ; ಅದರ ಜೊತೆಗೆ "ಮಣಿಡಲಿ, ಸಲ್ಲೆಣ್ಣೆ, ಮೊಳಹಾಯಿಪುಡಿ" ಇವೂ ಇರಬೇಕೆಂಬ ನಿರ್ಣ ಯಕ್ಕೆ ಬಂದೆವು.

ಆರೆಂಜ್ ಕ್ಲಬ್ಬಿನ ಆಧಾರತತ್ವವು, ಪ್ರಪಂಚದ ಎಲ್ಲಾ ಗಹನವಾದ ತತ್ವಗಳಂತೆ ತೀರ ಸರಳವಾದದ್ದು. ಕಿತ್ತಲೆಹಣ್ಣಿನ ಕಾಲದಲ್ಲಿ ಕ್ಲಬ್ಬಿನವರ ಉಪಯೋಗಕ್ಕಾಗಿ ಯಾವಾಗಲೂ ಆ ಹಣ್ಣುಗಳ ದಾಸ್ತಾನು ಇಟ್ಟಿರಬೇಕು. ಅವುಗಳನ್ನು ಶ್ರೀ ನರಸಿಂಹಶಾಸ್ತ್ರಿಗಳ ಬೀರುವಿನಲ್ಲಿಟ್ಟು ಎಲ್ಲರೂ ಕಾಮನ್ ರೂಮಿನಲ್ಲಿ ಸೇರುವ ವಿರಾಮಕಾಲದಲ್ಲಿ ಮಾತ್ರ ಅದರ ಬಾಗಿಲನ್ನು

ತೆರೆಯತಕ್ಕದ್ದು. ಹಣ್ಣುಗಳನ್ನು ಹಂಚುವುದು ಶಾಸ್ತ್ರಿಗಳ ಜವಾಬ್ದಾರಿ. ಅವರು ಸಂಯಮಿಗಳು ; ನಾವು....ಅಲ್ಲ. ಅಷ್ಟು ಮಾತ್ರವಲ್ಲದೆ ಕಿತ್ತಲೆ ಹಣ್ಣಿಗಾಗಿ ನಮ್ಮಿಂದ ಹಣ ವಸೂಲು ಮಾಡುವ ವಿಷಯದಲ್ಲಿ ಅವರಷ್ಟು ದಕ್ಷರಾದವರು ಮತ್ತೊಬ್ಬರಿಲ್ಲ. ಅವರ ಆಳ್ವಿಕೆ ಅಷ್ಟೇನೂ ಸುಸೂತ್ರವಾಗಿ ನಡೆಯುವಂಥದಲ್ಲ. ಕಿತ್ತಲೆ ಹಣ್ಣಿನ ಬೀರುವಿಗೆ ಕಳ್ಳ ಬೀಗದಕೈ ಮಾಡಿಸಲಾಗುವುದಿಲ್ಲವೆ ಎಂಬ ವಿಷಯವನ್ನು "ಪರ್ಯಾಲೋಚಿಸಿ ಸೂಕ್ತ ಕಾರ್ಯಕ್ರಮ"ಕೈಗೊಳ್ಳಲು ಒಂದು ಗುಪ್ತ ಸಮಿತಿ ಏರ್ಪಟ್ಟದ್ದುಂಟು. ಅಸಂತೋಷವನ್ನು ನಟಿಸದೆ ಹಣ್ಣಿಗಾಗಿ ಕೊಡಬೇಕಾದ ಹಣವನ್ನು ಎಂದೂ ಕೊಟ್ಟದ್ದಿಲ್ಲ. ಕಲೆಗಾರರೊಬ್ಬರು ಶಾಸ್ತ್ರಿಗಳ ರೇಖಾಚಿತ್ರವನ್ನು ಬರೆದು ಅದಕ್ಕೆ 'ನಕ್ಷತ್ರಿಕ' ಎಂಬ ಶೀರ್ಷಿಕೆಯನ್ನು ಕೊಟ್ಟರು.

ಇದೆಲ್ಲಾ ಹಾಸ್ಯದ ಮಾತು, ನಿಜ. ಆದರೂ ಒಂದೊಂದು ಹಣ್ಣಿಗೂ ಹಣ ಕೊಟ್ಟು ತಿನ್ನುವುದೆಂದರೆ ಯಾರ ಮನಸ್ಸಿಗೂ ಹಿತವಲ್ಲ. ತಿನ್ನುವವನಿಗೆ ಹಣ್ಣಿನ ರುಚಿ ಹಾಳಾಗಿ ಹೋಗುತ್ತದೆ. ಹಣ ಕೇಳುವವನಿಗೆ "ನಾನೇನು ಬನಿಯನಂತೆ ವರ್ತಿಸುತ್ತಿದ್ದೇನಲ್ಲ" ಎನ್ನಿಸುತ್ತದೆ. ಆದ್ದರಿಂದ ನಾವು ಕ್ಲಬ್ಬಿನ ನಿಯಮಗಳನ್ನು ಬದಲಾಯಿಸಿ ತಿಂಗಳ ಮೊದಲಲ್ಲಿಯೇ ಎಲ್ಲರೂ ಐದೈದು ರೂಪಾಯಿಗಳನ್ನು ಮುಂಗಡವಾಗಿ ಕೊಡಬೇಕೆಂದು ನಿರ್ಣಯಿಸಿದೆವು. ಒಂದಾಣೆ ಕೊಡಲು ಗೊಣಗುವುದು ಸರಿಯಲ್ಲ ; ಆದರೆ ಐದು ರೂಪಾಯಿ ಕೊಡುವ ಮುನ್ನ ತೃಪ್ತಿಯಾಗುವಷ್ಟು ಗೊಣಗಬಹುದು ....ಶಾಸ್ತ್ರಿಗಳನ್ನು ಬನಿಯ ಎಂದು ಕರೆದರೆ ಅವರೂ ಆಕ್ಷೇಪಿಸುವಂತಿಲ್ಲ. ಅಲ್ಲದೆ ತಿಂಗಳ ಮೊದಲಲ್ಲಿ ಹಣ ಕೊಟ್ಟದ್ದಾದಮೇಲೆ ದಿನವೂ ನಿಶ್ಚಿಂತೆಯಾಗಿ ಕಿತ್ತಲೆ ಹಣ್ಣಿಗೆ ಕೈ ಚಾಚಬಹುದು. ಶಾಸ್ತ್ರಿಗಳಿಗೆ ಕಿತ್ತಲೆ ಹಣ್ಣನ್ನು ಹಂಚುವುದೂ ಸುಲಭದ ಕೆಲಸವೆನಿಸಲಿಲ್ಲ. ದೇವಾಸುರರಿಗೆ ಅಮೃತ ಹಂಚುವುದು ಕಷ್ಟವಾದರೂ ಮೋಹಿನಿ ಅದನ್ನು ಸಮರ್ಪಕವಾಗಿ ನಿರ್ವಹಿಸಿದಳಂತೆ. ಅದೇ ಮೋಹಿನಿ ನಮ್ಮ ಕ್ಲಬ್ಬಿಗೆ ಬಂದಿದ್ದರೆ ಹಂಚುವ ಕೆಲಸ ತನ್ನಿಂದಾಗದೆಂದು ಹೆದರಿ ಓಡಿಹೋಗುತ್ತಿದ್ದಳೇನೊ.

ಕಿತ್ತಲೆ ಹಣ್ಣಿನ ಭಕ್ತರಲ್ಲಿ ಮೊದಲು ಶ್ರೀ ರಾ. ಅನಂತಕೃಷ್ಣಶರ್ಮರ ಹೆಸರು ಹೇಳಬೇಕು. ನೋಡುವುದಕ್ಕೆ ತಕ್ಕ ಮಟ್ಟಿಗೆ ಎತ್ತರದ ಆಳು, ಕೃಶವಾದ ದೇಹ, ಗೌರವರ್ಣ—ಅವರನ್ನು ನೋಡಿದರೆ ಯಾರೋ ಸಾಧು ಸಂತರನ್ನು ಕಂಡಂತಾಗುತ್ತದೆ. ನಮ್ಮೆಲ್ಲರಲ್ಲೂ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ—ಈ ಪಂಚಭೂತಗಳಿವೆಯಂತೆ. ಶರ್ಮರ ದೇಹದಲ್ಲಿ

ಆಕಾಶದ ಭಾಗ ಸ್ವಲ್ಪ ಹೆಚ್ಚಾಗಿರಬೇಕು. ಅವರು ಸಾಧಾರಣವಾಗಿ ಧರಿಸುವುದು ನಿಲುವಂಗಿ; ಅವರ ರುಮಾಲು ಈಷತ್ತು ಕಂದು ಬಣ್ಣದ ರೇಷ್ಮೆಯದು; ಈಚೆಗೆ ಯಾವ ಕಾರಣದಿಂದಲೋ ರೇಷ್ಮೆ ತಪ್ಪಿಹೋಗಿ ಸಾದಾ ಬಿಳಿಯ ರುಮಾಲು ಬಂದಿದೆ. ಅವರು ಸಂಸ್ಕೃತದಲ್ಲೂ ಪ್ರಾಕೃತದಲ್ಲೂ ಉದ್ದಾಮ ಪಂಡಿತರು; ಚೆನ್ನಾಗಿ ಇಂಗ್ಲಿಷ್ ಬಲ್ಲವರು; ತೆಲುಗಿನಲ್ಲಂತೂ ಪ್ರಸಿದ್ಧರಾದ ಸಾಹಿತಿ; ಶಾಸ್ತ್ರೀಯವಾಗಿ ಸಂಗೀತವನ್ನು ಅಭ್ಯಾಸಮಾಡಿ ಪರಿಣತಿ ಪಡೆದವರು. ತಮ್ಮ ವಯಸ್ಸನ್ನೂ ವಿದ್ವತ್ತನ್ನೂ ಮರೆತು ಯುವಕರೊಡನೆ ಯುವಕರಾಗಿ ನಮ್ಮ ಹುಚ್ಚಾಟಗಳೆಲ್ಲದರಲ್ಲಿಯೂ ಭಾಗವಹಿಸಬಲ್ಲರು. ಅವರು ಏನೇ ಕೆಲಸಮಾಡಲಿ, ಅದರಲ್ಲಿ ಕಲೆಗಾರನ ಕೈವಾಡ ಕಾಣುತ್ತದೆ. ಅವರ ಮನೆಗೆ ಹೋದರೆ ಕಾಫಿಗೆ ಬದಲಾಗಿ ಬಾದಾಮಿ, ಕೇಸರಿ, ಏಲಕ್ಕಿ ಮೊದಲಾದುವುಗಳಿಂದ ಸಂಸ್ಕಾರ ಪಡೆದಿರುವ ಹಾಲು ಕೊಡುತ್ತಾರೆ. ಅವರು ಕಿತ್ತಲೆ ಹಣ್ಣನ್ನು ಬಿಡಿಸುವುದೇ ಒಂದು ಕಲೆ. ಅದರಮೇಲೆ ಸಣ್ಣದೊಂದು ಬಿರುಕುಮಾಡಿ ಸಿಪ್ಪೆಯನ್ನು ಸುರುಳಿಸುರುಳಿಯಾಗಿ ಬಿಡಿಸಿ ಅಖಂಡವಾಗಿ ತೆಗೆಯುತ್ತಾರೆ. ಆ ಸುರುಳಿಯ ಕೊನೆಯಲ್ಲಿ ಬಟ್ಟಲಿನಂತೆ ಒಂದು ಭಾಗ ನಿಲ್ಲಬೇಕು. ಹಣ್ಣು ಆ ಬಟ್ಟಲಿನಲ್ಲಿ ನೆಲೆಸಿರಬೇಕು. ಕೋಮಲವರ್ಣದ ಆ ಚೆಂಡು ಪುಟವಿಕ್ಕಿದ ಚಿನ್ನದಂತಿರುವ ಆ ಬಟ್ಟಲಿನಲ್ಲಿರುವುದೇ ಒಂದು ಸೊಬಗು. ಶರ್ಮರು ಆ ಬಣ್ಣದ ಸೊಬಗನ್ನು ಕ್ಷಣ ಕಾಲ ಹಾಗೆಯೇ ಸವಿಯುವರು; ಅನಂತರ ಮುಂದಿನ ಕೆಲಸ. ಹಣ್ಣಿನ ಸೇವನೆಗೆ ಬೇಕಾದ ಈ ಪೂರ್ವಸಿದ್ಧತೆ ನಡೆಯುತ್ತಿರುವಾಗ ಅವರು ಯಾವುದೋ ಪ್ರಾಕೃತ ಪದದ ವಿಷಯವಾಗಿಯೋ ಗಾಥಾಸಪ್ತಶತಿಯ ಶ್ಲೋಕವೊಂದರ ವಿಷಯವಾಗಿಯೋ ವ್ಯಾಖ್ಯಾನ ಮಾಡುತ್ತಿರುತ್ತಾರೆ.

ಕಾಮನ್ ರೂಮಿನ ಈಶಾನ್ಯ ಮೂಲೆಯಲ್ಲಿರುವ ಪೀಠವು ಎಚ್. ಎಸ್. ನಂಜುಂಡಯ್ಯನವರ ನೆನಪಿಗೆ ಮೀಸಲು. ಅವರು ವಯಸ್ಸಿನಲ್ಲಿ ನಮ್ಮೆಲ್ಲರಿಗಿಂತ ಹಿರಿಯರು. ಕೊಠಡಿಯ ಮಧ್ಯಭಾಗದಲ್ಲಿ ನಾವು ನಡಸುತ್ತಿದ್ದ ಉದ್ವೇಗಪೂರಿತವಾದ ಚರ್ಚೆಗಳಲ್ಲಿ ಸಾಮಾನ್ಯವಾಗಿ ಅವರು ಭಾಗವಹಿಸುತ್ತಿರಲಿಲ್ಲ. ಆದರೆ ಹಸನ್ಮುಖರಾಗಿ ನಮ್ಮ ಮಾತಿನ ಏರಿಳಿತಗಳನ್ನು ಗಮನಿಸುತ್ತಿರುವರು. ಅವರು ಇಂಗ್ಲಿಷ್ ಸಾಹಿತ್ಯದ ಅಧ್ಯಾಪಕರಾದರೂ ಪರ್ಷಿಯನ್ ಮತ್ತು ಉರ್ದು ಸಾಹಿತ್ಯಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿದ್ದರು. ನಮ್ಮ ಕೂಗಾಟ, ನಗೆ, ಕುಚೋದ್ಯಗಳು ಅವರ

ಅಧ್ಯಯನಕ್ಕೆ ಎಷ್ಟು ಭಂಗ ತಂದಿದ್ದವೋ. ಒಂದೊಂದು ವೇಳೆ ನಮ್ಮ ಐಲು ಮಾತಿಗೆ ತಡೆಹಾಕಬೇಕೆಂದು ತೋರಿದಾಗ ತಾವೇ ಸ್ವಂತವಾಗಿ ತಯಾರಿಸಿದ ನೆಸ್ಯದ ಚುಟಿಕೆಯನ್ನು ಕೈಯಲ್ಲಿ ಹಿಡಿದು ವಾಗ್ಬಾಣವೊಂದನ್ನು ಎಸೆಯುವರು. ಅವರ ಮಾತು ಸಾವಧಾನವಾಗಿ ಹೊರಡುವುದು, ತೂಕವುಳ್ಳದ್ದು. ಅದನ್ನು ಕೇಳಿದ ಮೇಲೆ ನಾವು ಸೋತು ಹಿಮ್ಮೆಟ್ಟದೆ ಬೇರೆ ಮಾರ್ಗವಿಲ್ಲ. ಅವರು ಕೊಠಡಿಯಲ್ಲಿದ್ದರೆ ನಮಗೊಂದು ಹರಕೆಯಿದ್ದಂತೆ.

ಈಗ ವಿಶ್ರಾಂತಿ ಸುಖವನ್ನನುಭವಿಸುತ್ತಿರುವ ಎಸ್.ವಿ. ಕೃಷ್ಣಸ್ವಾಮಿ ಅಯ್ಯಂಗಾರ್ಯರ ಪೂರ್ಣನಾಮವನ್ನು ಬಹುಶಃ ಕಾಲೇಜಿನಲ್ಲಿ ಯಾರೂ ಉಪಯೋಗಿಸುತ್ತಿರಲಿಲ್ಲ. ಎಲ್ಲರಿಗೂ ಅವರು "ಎಸ್.ವಿ.ಕೆ." ಅಪರೂಪಕ್ಕೆ ಒಂದೊಂದು ವೇಳೆ, ಕಾಲೇಜಿನಲ್ಲಿ ಏನಾದರೂ ದೊಡ್ಡ ಉತ್ಸವ ನಡೆದ ದಿನ, ಅವರು ಒಂದು ಬಗೆಯ ನೀಲಿಯ ಜ್ಯೋತಿಯನ್ನು ಪಸರಿಸುವ ಪೋಷಾಕು ಹಾಕಿಕೊಂಡು ಬರುವುದುಂಟು—ಆಗಿನ ಕಾಲದಲ್ಲಿ 'ನೇವಿ ಬ್ಲೂ' ಸೂಟಿಗೆ ವಿಶೇಷ ಪ್ರಾಶಸ್ತ್ಯ ; ಮದುವೆಯ ಸಮಯದಲ್ಲಿ ವರನಿಗೆ ಹೊಲಿಸುತ್ತಿದ್ದದ್ದು 'ನೇವಿ ಬ್ಲೂ' ಎಂದಮೇಲೆ ಇದಕ್ಕೆ ಬೇರೆ ಸಮರ್ಥನೆ ಬೇಕಿಲ್ಲ. ಆದರೆ ಸಾಮಾನ್ಯವಾಗಿ ಎಸ್.ವಿ.ಕೆ. ಧರಿಸುತ್ತಿದ್ದದ್ದು ಬಿಸ್ಕಟ್ ಬಣ್ಣದ ಸೂಟು. ಅವರ ಬಟ್ಟೆಗಳು ಮಾಸಲಾಗಿದ್ದುದನ್ನು ಯಾರೂ ಕಾಣರು ; ಸೂಟು ಎಂದೂ ಗರಿಮುರಿದದ್ದಿಲ್ಲ; ಟೈ ಯಾವಾಗಲೂ ತನ್ನ ಸ್ಥಾನವನ್ನು ಬಿಟ್ಟು ಕದಲಿದ್ದಿಲ್ಲ; ರುಮಾಲಿನ ಆಕೃತಿ ವಿರೂಪವಾದದ್ದಿಲ್ಲ. ಅದರ ಜರಿ ಒಂದು ನೂಲೆಳೆ ಅಷ್ಟಾದರೂ ದೊಡ್ಡದೆನಿಸುತ್ತಿರಲಿಲ್ಲ. ಕಾಮನ್ ರೂಮಿನಲ್ಲಿ, ಉಪನ್ಯಾಸ ಶಿಬಿರಗಳಲ್ಲಿ, ಸ್ಕೌಟ್ ಶಿಬಿರಗಳಲ್ಲಿ—ಎಲ್ಲಿ ಹೋದರೂ ನಮ್ಮ ಜೀವನ ಚಕ್ರ ಅವರ ಸುತ್ತ ತಿರುಗಬೇಕು. ವಿದ್ಯಾರ್ಥಿಗಳ ಮೇಲೆ ಅಷ್ಟೊಂದು ಪ್ರಭುತ್ವವನ್ನು ಅವರು ಹೇಗೆ ಸಂಪಾದಿಸಿದರೋ ಯಾರಿಗೂ ತಿಳಿಯದು. ಅವರೇನು ಎಲ್ಲ ತರಗತಿಗಳಿಗೂ ಪಾಠ ಹೇಳುವವರಲ್ಲ. ಆದರೂ ಯುವಕರ ಹದ್ದು ಮೀರಿದ ಉತ್ಸಾಹ, ಅಸಹನೆ, ತಿಳಿಗೇಡಿತನ, ಎಷ್ಟೋ ವೇಳೆ ಕೇಡಿಗತನ–ಇವೆಷ್ಟಿದ್ದರೂ ಕೃಷ್ಣಸ್ವಾಮಿ ಅಯ್ಯಂಗಾರ್ಯರು ಒಂದು ಮಾತಿನಲ್ಲಿ ಅದನ್ನು ದಮನಮಾಡಬಲ್ಲರು.

ಒಂದು ದಿನ ಏಳು ಘಂಟೆಗೆ ನಾಟಕವೊಂದು ಪ್ರಾರಂಭವಾಗಬೇಕಾಗಿತ್ತು. ನೇಪಥ್ಯದಲ್ಲಿ ನಿಂತು ಎಲ್ಲರಿಗೂ ಬಣ್ಣಹಾಕಿ ರಂಗಸ್ಥಳಕ್ಕೆ ಕಳಿಸುವುದು ಅಯ್ಯಂಗಾರ್ಯರ ಕೆಲಸ. ಅವತ್ತು ನಾಯಕಿಯ ಪಾತ್ರ

ವಹಿಸಬೇಕಾಗಿದ್ದವನು ನೇಪಥ್ಯಕ್ಕೆ ಬರುವುದೇ ತಡವಾಯಿತು. ಇತ್ತ ಪ್ರೇಕ್ಷಕಾಂಗಣದಲ್ಲಿ ಕಾದು ಕಾದು ಬೇಸರಗೊಂಡಿದ್ದ ಹುಡುಗರ ಗಲಭೆ ಅಸಾಧ್ಯವಾಯಿತು. "ಆರ್ಯೆ, ಅಲಂಕಾರವು ಪೂರ್ತಿಯಾಗಿದ್ದರೆ ಇತ್ತ ಬಾ" ಎಂದು ನಾಟಕೀಯವಾಗಿ ಕಿರಿಚುವುದು, ಸರ್ಪದಂತೆ ಬುಸುಗುಟ್ಟುವುದು, ನರಳುವುದು, ಗೂಬೆಯ ಕೂಗನ್ನು ಅನುಕರಿಸುವುದು, ಪ್ಯಾಟು ಪದಗಳನ್ನು ವಿಕಾರವಾಗಿ ಹಾಡುವುದು, ತಾಳಕ್ಕೆ ಸರಿಯಾಗಿ ಬೆಂಚಿನ ಮೇಲೆ ಕುಟ್ಟುವುದು—ಇದೆಲ್ಲಾ ಪದ್ಧತಿಯಂತೆ ವಿಧ್ಯುಕ್ತವಾಗಿ ನಡೆಯಿತು. ಕೊನೆಗೆ ಕಿಟಕಿಗಳ ಗಾಜನ್ನು ಒಡೆದರು, ಬೆಂಚುಗಳನ್ನು ಕೆಡವಿದರು. ಪ್ರೇಕ್ಷಕಾಂಗಣ ರಣಭೂಮಿಯಂತೆ ಕಾಣುತ್ತಿತ್ತು. ಆಗ ಆ ಭಯಂಕರ ಕೋಲಾಹಲವನ್ನು ಮೆಟ್ಟಿ ಕೀರಲು ದನಿಯೊಂದು ಪ್ರೇಕ್ಷಕಾಂಗಣದಲ್ಲಿ ಮೊಳಗಿತು. ಎಸ್.ವಿ.ಕೆ. ಅವರ ಕೀರಲು ದನಿ ಕಾಲೇಜಿನಲ್ಲಿ ಪ್ರಸಿದ್ಧವಾದದ್ದು. ಸುಮಾರು ಐದು ನಿಮಿಷಕಾಲ ಎಸ್.ವಿ.ಕೆ. ಉಸಿರೆಳೆದುಕೊಳ್ಳಲೂ ಬಿಡುವಿಲ್ಲದಂತೆ ತಿರಸ್ಕಾರದ ಮಳೆ ಕರೆದರು. ಇಂಥ ಸಂದರ್ಭದಲ್ಲಿ ಅವರ ಕೋಪಕ್ಕೆ ತಡೆಯಿಲ್ಲ; ಒಂದೊಂದು ಮಾತೂ ಕೂರಲಗಿನ ಬಾಣ. ಆಗಿನ ಹುಡುಗರೋ, ತುಂಟತನದಲ್ಲಿ ನಿಸ್ಸೀಮರು. ಅಂಥ ಮಾತುಗಳನ್ನು ಇತರರು ಯಾರು ಆಡಿದ್ದರೂ ಅವರು ಸಹಿಸುತ್ತಿರಲಿಲ್ಲ. ಆದರೆ ಎಸ್.ವಿ.ಕೆ. ಹೇಳಿದ್ದೆಲ್ಲವನ್ನೂ ಕುರಿಗಳಂತೆ ಕೇಳಿ ತೆಪ್ಪಗಾದರು.

ಇಷ್ಟೊಂದು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಎಸ್.ವಿ.ಕೆ. ತಮ್ಮ ಶಾಸ್ತ್ರದ (ಅವರು ರಾಜ್ಯಶಾಸ್ತ್ರದ ಅಧ್ಯಾಪಕರು) ಅಧ್ಯಯನಕ್ಕೆ ಯಾವ ಕಾಲವನ್ನು ಮೀಸಲಾಗಿಟ್ಟಿದ್ದರೋ ತಿಳಿಯದು. ಅಧ್ಯಯನ ನಡೆಯುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. ಹೊಸದೊಂದು ಪುಸ್ತಕದ ಮಾತು ಬಂದರೆ ನಾಲ್ಕು ನಿಷ್ಕೃಷ್ಟವಾದ ವಾಕ್ಯಗಳಲ್ಲಿ ಅದರ ಸಾರಾಂಶವನ್ನು ಹೇಳಿಬಿಡುವರು. ಅವರ ನಿಃಸ್ವಾರ್ಥ ಸೇವೆಯನ್ನೂ ಕಿರಿಯರ ವಿಷಯದಲ್ಲಿ ಅವರಿಗಿದ್ದ ಅವ್ಯಾಜಪ್ರೇಮವನ್ನೂ ನಾವು ಎಂದಿಗೂ ಮರೆಯುವಂತಿಲ್ಲ.

ಪ್ರೊಫೆಸರ್ ಟಿ. ಎಸ್. ವೆಂಕಣ್ಣಯ್ಯನವರು ನಮ್ಮೆಲ್ಲರಿಗಿಂತಲೂ ವಯಸ್ಸಿನಲ್ಲಿ ಹಿರಿಯರು; ಅಲ್ಲದೆ ಪ್ರಾಧ್ಯಾಪಕವರ್ಗಕ್ಕೆ ಸೇರಿದವರು. ಆದ್ದರಿಂದ ಕಾಮನ್ ರೂಮಿನ ಸದಸ್ಯರಾಗಲು ಅವರಿಗೆ ಯಾವ ಹಕ್ಕೂ ಇರಲಿಲ್ಲ. ಆದರೂ ಅವರು ಸದಸ್ಯತ್ವ ಪಡೆದರು. ಅವರು ಯಾವಾಗ ಈ ಹಕ್ಕನ್ನು ಸಂಪಾದಿಸಿದರೋ ಯಾರಿಗೂ ತಿಳಿಯದು. ಮೊದಲಿಂದಲೂ ಅವರು ನಮ್ಮೊಡನೆ ಇದ್ದಂತೆ ತೋರಿತು; ಅದರಲ್ಲಿ ಅಸ್ವಾಭಾವಿಕತೆಯೇ

ಕಾಣಲಿಲ್ಲ. ಅವರು ಸದಸ್ಯರಾದದ್ದು ಮಾತ್ರವಲ್ಲ, ಗುಪ್ತವಾಗಿ ಕ್ರಾಂತಿಯೊಂದನ್ನೆಬ್ಬಿಸಿ ಇಡೀ ಆರೆಂಜ್ ಕ್ಲಬ್ಬನ್ನು ತಮ್ಮ ಕೈವಶಮಾಡಿಕೊಂಡು ಅದನ್ನು ತಮ್ಮ ಉದ್ದೇಶಸಾಧನೆಗಾಗಿ ಉಪಯೋಗಿಸಿಕೊಂಡರು. ಈ ಒಳಸಂಚು ಪ್ರಾರಂಭವಾದದ್ದರ ಅರಿವೂ ನಮಗಿಲ್ಲ. ಎಂದೋ ಒಂದು ದಿನ ಕಣ್ಣು ಬಿಟ್ಟು ನೋಡಿದರೆ ನಾವು ಅವರ ಬಂದಿಗಳಾಗಿದ್ದೆವು. ಆ ಹಿಡಿತದಿಂದ ಬಿಡಿಸಿಕೊಳ್ಳುವ ಹಂಬಲವೂ ಯಾರಿಗೂ ಇರಲಿಲ್ಲ. ಆಗ ಕನ್ನಡ ದಿಗ್ವಿಜಯಕ್ಕೆ ಹೊರಟ ಕಾಲ. ಪ್ರೊ. ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಬಾವುಟವನ್ನು ಹಿಡಿದು ಕನ್ನಡದ ಶತ್ರುಗಳ ಮೇಲೆ ಯುದ್ಧ ಹೂಡಿದ್ದರು. ಮಾಡಬೇಕಾದ ಪ್ರಚಾರವನ್ನೆಲ್ಲಾ ಅವರು ಮಾಡಿದರು ; ಜನರ ಅಭಿಮಾನವನ್ನು ಕೆರಳಿಸಿದರು ; ಇಂಗ್ಲಿಷಿನ ಮತ್ತು ಸಂಸ್ಕೃತದ ವ್ಯಾಮೋಹದಲ್ಲಿ ಕನ್ನಡವನ್ನು ಮರೆತ ಅಥವಾ ಅದರ ವಿಷಯದಲ್ಲಿ ಉದಾಸೀನರಾದ ಜನರ ವಿಷಯದಲ್ಲಿ ಆಗ ತೋರಿಸಬೇಕಾಗಿದ್ದ ಕಾಠಿನ್ಯವನ್ನು ತೋರಿಸಿದರು; ಶತ್ರುಗಳ ಪ್ರತಿಭಾಳಿಯ ಬಿರುಸನ್ನು ತಡೆದುಕೊಂಡರು. ಆದರೆ ಪ್ರೊ. ವೆಂಕಣ್ಣಯ್ಯನವರ ಯುದ್ಧತಂತ್ರ ಚಾಕಚಕ್ಯಗಳೇ ಬೇರೆ. 'ಪುಷ್‌ಬಟನ್' ಯುದ್ಧವನ್ನು ಅವರು ಆಗಲೇ ಕಂಡುಹಿಡಿದಿದ್ದರು. ಅವರು ಧನುರ್ಬಾಣಗಳನ್ನು ಹಿಡಿದವರೇ ಅಲ್ಲ. 'ಶಾಪೇನಾಪಿ ಶರಾದಪಿ' ಎಂಬ ಮಾತೂ ಅವರ ವಿಷಯದಲ್ಲಿ ಸಲ್ಲದು. ಅವರ ತಪಶ್ಯಕ್ತಿ ಎಂದೂ ಶಾಪದಲ್ಲಿ ವ್ಯಯವಾಗಲಿಲ್ಲ. ಕಾಮನ್ ರೂಮಿನ ಯುವಕರಿಗೆ ಕನ್ನಡ ಯೋಧರ ಘೋಷಣೆ ಅಷ್ಟಾಗಿ ಸರಿಬೀಳಲಿಲ್ಲ. "ನಮಗೆ ಪ್ರಿಯವಾಗಲಿ ಅಪ್ರಿಯವಾಗಲಿ, ಪ್ರಪಂಚದ ಜ್ಞಾನಭಂಡಾರಕ್ಕೆಲ್ಲಾ ಇಂಗ್ಲಿಷು ಕೀಲಿ ಕೈಯಾಗಿ ಪರಿಣಮಿಸಿದೆ. ಭಾರತದ ಪುರಾತನ ಸಂಸ್ಕೃತಿಯೇನಿದ್ದರೂ ಅದು ದೊರೆಯುವುದು ಸಂಸ್ಕೃತದಲ್ಲಿ. ಇವೆರಡು ಭಾಷೆಗಳೂ ಕನ್ನಡದ ಶತ್ರುಗಳೆಂದರೆ ನಾವು ಒಪ್ಪುವುದಿಲ್ಲ. ಶ್ರೀಕಂಠಯ್ಯನವರು ಹಾಗೇನೂ ಹೇಳುವುದಿಲ್ಲವೆನ್ನಬಹುದು; ಆದರೆ ಜನ ಅವರ ಅಭಿಪ್ರಾಯವನ್ನು ಹಾಗೇ ಅರ್ಥಮಾಡಿಕೊಂಡಿದ್ದಾರೆ. ಅದು ಹೇಗಾದರೂ ಆಗಲಿ, ಈ ಕನ್ನಡ ಪ್ರಚಾರದಲ್ಲಿ ಮಿತಿಮೀರಿದ ಭಾವೋದ್ರೇಕ ಕಾಣುತ್ತದೆ; ಅದು ನಮಗೆ ಹಿಡಿಸದು. ನಿಮ್ಮ ಯುದ್ಧ ನೀವು ಮಾಡಿಕೊಳ್ಳಿ. ನಾವು ತಟಸ್ಥರಾಗಿ ನಿಲ್ಲುತ್ತೇವೆ."—ಇದು ಬಹುಮಟ್ಟಿಗೆ ಕಾಮನ್ ರೂಮಿನ ನಿಲುವು.

ನಾವು ಮಂಡಿಸಿದ ಈ ವಾದ ಗಾಳಿಯನ್ನು ಗುದ್ದಿ ಮೈನೋಯಿಸಿಕೊಂಡಂತಾಯಿತು. ಅವರು ನಮ್ಮ ತರ್ಕವನ್ನು ಪ್ರತಿಭಟಿಸಲೇ ಇಲ್ಲ.

ಅದಕ್ಕೆ ಬದಲಾಗಿ ಆಗಿಂದಾಗ ನಮ್ಮನ್ನು ಊಟಕ್ಕೆ ಕರೆಯುತ್ತಿದ್ದರು; ಟೀಪಾರ್ಟಿಗಳನ್ನು ಮಾಡಿಸುತ್ತಿದ್ದರು; ಜೊತೆಗೆ ಮತ್ತೇನೋ ಮಾಯ ಮಂತ್ರ ಮಾಡಿರಬೇಕು—ಅದೇನೆಂದು ವರ್ಣಿಸಲಾಗುವುದಿಲ್ಲ. ಅದರ ಫಲವಾಗಿ ನಾವು ಕನ್ನಡದಲ್ಲಿ ಭಾಷಣಮಾಡಲು ಪ್ರಾರಂಭಿಸಿದೆವು; ಕನ್ನಡದಲ್ಲಿ ಲೇಖನಗಳನ್ನು ಬರೆದೆವು; ಕನ್ನಡದ ಸ್ಥಾನಮಾನಗಳನ್ನು ಹೆಚ್ಚಿಸುವುದಕ್ಕಾಗಿ ಸಭೆಗಳನ್ನೇರ್ಪಡಿಸಿದೆವು; ಕೊನೆಗೆ ಕನ್ನಡದ ಜೊತೆಗೆ ಇಂಗ್ಲಿಷ್ ಪದಗಳನ್ನು ಬೆರೆಸಿದ್ದಕ್ಕಾಗಿ ನಮಗೆ ನಾವೇ ಜುಲ್ಮಾನೆ ಹಾಕಿಕೊಂಡೆವು. ಇವೆಲ್ಲದರ ಜೊತೆಗೆ ಕನ್ನಡ ಚಳುವಳಿಯನ್ನು ಗೇಲಿಮಾಡುವ ಕೆಲಸವೂ ಅವ್ಯಾಹತವಾಗಿ ನಡೆಯಿತು. ಮನಸ್ಸು ತೃಪ್ತಿಯಾಗುವವರೆಗೂ ಮಾತಾಡಿಕೊಳ್ಳಲೆಂದು ವೆಂಕಣ್ಣಯ್ಯನವರು ನಮಗೆ ಸ್ವಾತಂತ್ರ್ಯ ಕೊಟ್ಟರು.

ನಮ್ಮ ಆರೆಂಜ್ ಕ್ಲಬ್ಬೋ ಕಾಮನ್ ರೂಮೋ—ಅದನ್ನು ಹೇಗೆ ಬೇಕಾದರೂ ಕರೆಯಿರಿ—ಘಳಿಗೆಗೊಂದು ರೂಪ ತಾಳುತ್ತಿತ್ತು. ಘಳಿಗೆಗೊಂದು ಹೊಸ ಕಾರ್ಯಕ್ರಮವನ್ನು ಕೈಗೊಂಡು ಪೂರೈಸುತ್ತಿತ್ತು. ಅವುಗಳಲ್ಲಿ ಮುಖ್ಯವಾಗಿ ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್ನಿನ ಹೆಸರನ್ನು ಇಲ್ಲಿ ಕಾಣಿಸಬೇಕು. ಅದರ ಹೆಸರಿನ ಪ್ರಥಮಾಕ್ಷರಗಳಾದ U.T.A ಮೂರನ್ನೂ ಸೇರಿಸಿ ಯಾರೋ ಅದಕ್ಕೆ 'ಊಟ' ಎಂಬ ಬಿರುದು ಕೊಟ್ಟರು. ಈ ಸಂಘವನ್ನು ಸ್ಥಾಪಿಸಿದವರು ಜಿ. ಹನುಮಂತರಾಯರು; ಅದರ ಮೂಲಸದಸ್ಯರು ಎಂದಿನಂತೆ ಆರೆಂಜ್ ಕ್ಲಬ್ಬಿನವರೇ. ಹನುಮಂತರಾಯರು ಪ್ರಾಧ್ಯಾಪಕರ ವಿಷಯದಲ್ಲಿ ಔದಾರ್ಯ ತೋರಿ, ಇಷ್ಟವಿದ್ದರೆ ಅವರೂ ಸದಸ್ಯರಾಗಬಹುದೆಂಬ ಅನುಮತಿ ಕೊಟ್ಟರು. ಪ್ರಾಧ್ಯಾಪಕರಿಗೆ ಇಷ್ಟವಿದ್ದೇ ಇತ್ತು; ಕರೆದರೆ ಸಾಕು ಎಂದು ಕಾದಿದ್ದರೇನೊ. ಅವರು ಸದಸ್ಯರಾದೊಡನೆ "ನೀವು ಈ ಕೆಲಸ ಮಾಡಬೇಕು, ಆ ಕೆಲಸ ಮಾಡಬಾರದು" ಎಂದು ಬುದ್ಧಿ ಹೇಳಲಾರಂಭಿಸಿದರು. ಅವರ ದೃಷ್ಟಿಯಲ್ಲಿ ಅಧ್ಯಾಪಕಸಂಘದ ಉದ್ದೇಶವೆಂದರೆ ಕಾಲೇಜಿನ ಕೆಲಸದಿಂದಾದ ಬೇಸರವನ್ನು ಕಳೆಯುವುದು; ಕ್ಷಣಕಾಲ ನಮ್ಮ ಸ್ಥಾನಮಾನಗಳನ್ನೂ ಗತ್ತು ಗಾಂಭೀರ್ಯಗಳನ್ನೂ ಮರೆತು ನಿಶ್ಚಿಂತೆಯಾಗಿ ಹರಟುವುದಕ್ಕೆ ಅವಕಾಶ ಕಲ್ಪಿಸಿಕೊಳ್ಳುವುದು. ಈ ಮಾತನ್ನು ಕೇಳಿ ನಮಗೆ ನಗು. ಬೇಸರವೆಂಬುದೇನೋ ನಾವು ಎಂದೂ ಕಾಣೆವು; ಸ್ಥಾನಮಾನ ಗತ್ತು ಗಾಂಭೀರ್ಯಗಳ ಯೋಚನೆ ಎಂದೂ ನಮ್ಮ ಮನಸ್ಸಿಗೆ ಬಂದಿರಲಿಲ್ಲ. ಇನ್ನು ಮನಸ್ಸಿಟ್ಟು ಹರಟುವುದಕ್ಕೆ ನಮಗೆ ವಿಶೇಷ ಪರವಾನಗಿಯೊಂದು

ಬೇಕೆ! ಕಾಮನ್ ರೂಮಿನ ಭಯಂಕರ ಗಲಭೆ ಎಷ್ಟೋ ವೇಳೆ ಮಹಡಿಯ ಮೆಟ್ಟಲುಗಳನ್ನು ಹತ್ತಿ ಪ್ರಿನ್ಸಿಪಲ್ ರಾಲೋ ಅವರ ಕೊಠಡಿಯನ್ನು ನಡುಗಿಸಿತ್ತು. ಅವರಿಗೆ ಈ ಕೋಲಾಹಲವನ್ನು ತಡೆಯಲು ಇಷ್ಟವಿಲ್ಲ, ತಡೆಯದೆ ವಿಧಿಯಿಲ್ಲ. ಜವಾಬ್ದಾರಿಯುಳ್ಳ ಅಧ್ಯಾಪಕರೇ ಹೀಗೆ ಗಲಭೆ ಮಾಡಿದರೆ ನಾಳೆ ಹುಡುಗರು ಮತ್ತೇನು ಮಾಡಲೊಲ್ಲರು! ವಾರಕ್ಕೆ ಎರಡು ಸಾರಿಯಾದರೂ ರಾಲೋ ಅವರಿಂದ ನಮಗೆ ಚೀಟಿ ಬರುತ್ತಿತ್ತು. ಅದನ್ನು ಬರೆಯುವುದು ರಾಲೋ ಅವರಿಗೆ ಬಹಳ ಕಷ್ಟವಾಗಿದ್ದಿರಬೇಕು. ಕರ್ತವ್ಯದೃಷ್ಟಿಯಿಂದ ಅವರು "ಇದೇನು ಸಂತೆಯೋ ಕಾಲೇಜೊ?" ಎಂದು ಬರೆಯಬೇಕು. ಆದರೆ ಲೇಖನಿಯನ್ನು ಕೈಗೆ ತೆಗೆದುಕೊಂಡರೆ ಹೇಗೋ ವಿಶ್ವಾಸವೂ ನಗೆಯೂ ಅದರಲ್ಲಿ ಬಂದು ಸೇರುತ್ತಿದ್ದವು. ಅಂತ ರಂಗದಲ್ಲಿ ಅವರೂ ಕಾಮನ್ ರೂಮಿನವರೇ.

'ಊಟ'ದ ಮುಖ್ಯೋದ್ದೇಶದ ವಿಷಯದಲ್ಲಿ ಹನುಮಂತರಾಯರ ಕಲ್ಪನೆಯೇ ಬೇರೆ. ಅದು ಜ್ಞಾನಜ್ಯೋತಿಯನ್ನು ಎತ್ತಿ ಹಿಡಿದು ದೇಶದ ಮೂಲೆ ಮೂಲೆಗಳಲ್ಲೂ ಬೆಳಗಬೇಕು; ಎಲ್ಲ ಕಡೆಗಳಲ್ಲಿಯೂ ಚಿಕ್ಕ ಚಿಕ್ಕ ನಂದಾದೀಪಗಳನ್ನು ಹೊತ್ತಿಸಿ ಬರಬೇಕು—ಇದು ನಮ್ಮ ಸಂಘದ ಉದ್ದೇಶ. ನವರಾತ್ರಿ, ಕ್ರಿಸ್‌ಮಸ್, ಮತ್ತು ಬೇಸಗೆಯ ರಜಾದಿನಗಳಲ್ಲಿ ಸಂಸ್ಥಾನದ ಒಳಭಾಗದ ಊರುಗಳಲ್ಲಿ ಉಪನ್ಯಾಸ ಸಪ್ತಾಹಗಳು ಏರ್ಪಟ್ಟವು. ಅಧ್ಯಾಪಕರು ರಾತ್ರಿಯೆಲ್ಲಾ ನಿದ್ದೆಗೆಟ್ಟು ತಮ್ಮ ಯೋಚನೆಗಳನ್ನು ಕನ್ನಡದಲ್ಲಿ ವ್ಯಕ್ತಪಡಿಸುವುದಕ್ಕೆ ತಕ್ಕ ಪದಗಳನ್ನು ಹುಡುಕಿದರು. (ಸರ್ವದಾ ಇಂಗ್ಲಿಷಿನಲ್ಲೇ ಮಾತಾಡುತ್ತಿದ್ದ ಪ್ರಾಣಿಶಾಸ್ತ್ರಾಧ್ಯಾಪಕರೊಬ್ಬರಿಗೆ—ಅವರು ಹುಟ್ಟುಕನ್ನಡಿಗರು—ಏನು ಮಾಡಿದರೂ 'ಬಾಲ' ಎಂಬ ಪದ ನೆನಪಿಗೆ ಬರದೆ "The tail, you know, the tail" ಎಂದು ಹೇಳಬೇಕಾಯಿತು!) ಈ ಉಪನ್ಯಾಸಗಳ ಫಲವಾಗಿ ಜ್ಞಾನ ಪ್ರಸಾರ ಎಷ್ಟು ಸಮರ್ಕವಾಗಿ ನಡೆಯಿತೋ ಏನೋ, ಅದರಿಂದ ನಮ್ಮ ತಿಳಿವಳಿಕೆಯಂತೂ ತಕ್ಕಮಟ್ಟಿಗೆ ಸಿಷ್ಪುಷ್ಟವಾಯಿತು.

ಉಪನ್ಯಾಸ ಶಿಬಿರಗಳ ವಾತಾವರಣಕ್ಕೂ ಕಾಮನ್ ರೂಮಿನದಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲ. ಯಾವ ತಡೆ ಶಂಕೆ ಸಂದೇಹಗಳೂ ಇಲ್ಲದೆ ಸಂಭಾಷಣೆ ಹರಿಯುತ್ತಿತ್ತು. ಆಯಾ ದಿನ ನಡೆದ ಭಾಷಣಗಳನ್ನು ನಿರ್ದಯರಾಗಿ ಟೀಕಿಸುತ್ತಿದ್ದೆವು. ಮಗುವನ್ನು ಪ್ರೀತಿಯಿಂದ ಚಿವುಟಿ ಕೆನ್ನೆಯನ್ನು ತಿವಿದು ಕೂಡಲೆ ಎದೆಗೆ ಅಪ್ಪಿಕೊಳ್ಳುವ ತಾಯಿಯ ತೋಳು

ಗಳಂತೆ ಹೊಗಳಿಕೆ ತೆಗಳಿಕೆಗಳೆರಡೂ ಹತ್ತು ಕಡೆಯಿಂದ ಬಂದು ನಮ್ಮನ್ನು ಅಪ್ಪಿದವು. ಸಂಜೆಯ ಉಪನ್ಯಾಸಗಳನ್ನು ಮುಗಿಸಿ ಬಂದು ವಿಮರ್ಶೆಗೂ ಹಾಸ್ಯಕ್ಕೂ ಕುಳಿತೆವೆಂದರೆ ನಮಗೆ ಕಾಲದ ಅರಿವೇ ಇರುತ್ತಿರಲಿಲ್ಲ. ನಮ್ಮ ಮಾತಲ್ಲ ಮುಗಿದದ್ದು, "ರಾತ್ರಿರೇವ ವ್ಯರಂಸೀತ್." ಒಂದೊಂದುವೇಳೆ ನಮ್ಮ ಆರೋಗ್ಯ ರಕ್ಷಣೆಯ ಭಾರವನ್ನು ಹೊತ್ತ ಹನುಮಂತರಾಯರು ಎಲ್ಲರಿಗೂ ಒಂದೊಂದು ಕ್ವಿನೀನು ಮಾತ್ರೆಯನ್ನು ನುಂಗಿಸಿ "ಇನ್ನು ನಿದ್ರೆ ಮಾಡುತ್ತೀರೋ, ಇಲ್ಲ ತಲೆಯಮೇಲೆ ತಣ್ಣೀರು ಸುರಿಯಲೋ ?" ಎಂದು ಗದರಿಸುವರು. 'ನನ್ನ ಸರ್ಕಸ್ಸಿನ ಮೃಗಗಳು ಖಾಯಿಲೆ ಮಲಗಿದರೆ ಸರ್ಕಸ್ಸು ನಡೆಯುವುದು ಹೇಗೆ ?' ಎಂದು ಅವರ ಚಿಂತೆ. ಅವರ ಅಪ್ಪಣೆಯನ್ನು ಪಾಲಿಸದಿದ್ದರೆ ಅವರು ಬಲಪ್ರಯೋಗಕ್ಕೂ ಸಿದ್ಧ. ಅವರ ಅಪ್ಪಣೆಯಂತೆ ನಡೆಯುವುದು ನಮಗೆ ಹಿತವೂ ಹೌದು. "ಊಟವಾದ ಮೇಲೆ ಎರಡು ಮಾವಿನ ಹಣ್ಣು ತಿನ್ನಲೇಬೇಕು" ಎಂದು ಅಪ್ಪಣೆಯಾದರೆ ಅದನ್ನು ವಿರೋಧಿಸುವುದಕ್ಕೆ ನಾವು ಯಾರು !

'ಊಟ'ದ ಉಪನ್ಯಾಸಗಳನ್ನು ಕೆಲವು ಕಾಲದ ಮೇಲೆ ಅಚ್ಚು ಮಾಡಿ ಪ್ರಕಟಿಸಿದರು. ಅಂಥ ಪುಸ್ತಕಗಳು ಐವತ್ತಕ್ಕಿಂತ ಹೆಚ್ಚಾಗಿ ಹೊರ ಬಿದ್ದವು ; ಲಕ್ಷಗಟ್ಟಲೆ ಪ್ರತಿಗಳು ಮಾರಾಟವಾದವು. ಈ ಉಪನ್ಯಾಸ ಸಪ್ತಾಹಗಳ ಕೀರ್ತಿ ಯೂರೋಪಿಗೆ ಸಹ ಹಬ್ಬಿತು.

ಇದುವರೆಗೂ ಆರೆಂಜ್ ಕ್ಲಬ್ಬಿನಲ್ಲಿ ನನಗೆ ಹಿರಿಯರಾಗಿದ್ದವರ ವಿಷಯ ಮಾತ್ರ ಬರೆದಿದ್ದೇನೆ. ನನ್ನ ಸಮವಯಸ್ಕರನ್ನೂ ನನಗಿಂತ ಸ್ವಲ್ಪ ಕಿರಿಯರಾದವರನ್ನೂ ಕುರಿತು ಬರೆಯೋಣವೆಂದರೆ ಯಾರ ಹೆಸರು ಹೇಳಲಿ, ಯಾರ ಹೆಸರು ಬಿಡಲಿ ! ಕಾಮನ್ ರೂಮನ್ನು ನಿಜವಾಗಿ ಸೃಷ್ಟಿಸಿದವರು ಈ ಯುವಕರು. ಅದರ ಚರಿತ್ರೆಯಲ್ಲಿ ಅವರದ್ದೇ ಮುಖ್ಯ ಪಾತ್ರ. ನನ್ನ ಮಾನಸಿಕ ಜೀವನ ಮತ್ತು ಭಾವಜೀವನ ಹೆಜ್ಜೆಹೆಜ್ಜೆಗೂ ಅವರ ಜೀವನದೊಡನೆ ಸಾಗಿದೆ. ಉತ್ಸಾಹ, ಬೇಸರ, ಆನಂದ, ಸಂಕಟ —ಎಲ್ಲದರಲ್ಲೂ ಅವರು ಭಾಗಿಗಳಾಗಿದ್ದಾರೆ. ಎಷ್ಟೋ ವೇಳೆ ಸತ್ವಪರೀಕ್ಷೆಯ ಕಾಲ ಬಂದಾಗ, ಮನಸ್ಸು ಕೀಳುದಾರಿಯ ಕಡೆಗೆ ಒಲೆದಾಗ, ನನ್ನ ಮಿತ್ರರೇನೆಂದು ಕೊಂಡಾರು ಎಂಬ ಯೋಚನೆ ನನಗೆ ರಕ್ಷೆಯಾಗಿ ಪರಿಣಮಿಸಿದೆ. ಕೆಲವು ದಿವ್ಯೌಷಧಗಳನ್ನು ಒಂದು ಬಾರಿ ಸೇವಿಸಿದರೆ ಅವು ಜೀವಮಾನವೆಲ್ಲಾ ಶರೀರಕ್ಕೆ ಇಂಬುಗೊಡುತ್ತವೆಯೆಂದು ಹೇಳುತ್ತಾರೆ. ನನ್ನ ಗುರುಗಳ, ಹಿರಿಯರ, ಮತ್ತು ಮಿತ್ರರ ಪ್ರಭಾವವೂ ಇಂಥ ದಿವ್ಯೌಷಧ. ಕಾಮನ್

ರೂಮಿನಲ್ಲಿದ್ದವರು ಒಬ್ಬೊಬ್ಬರೂ ಇತರರೆಲ್ಲರ ಜೀವನವನ್ನು ರೂಪಿಸಿದವರು. ಅವರಲ್ಲಿ ಯಾರೊಬ್ಬರು ತಮ್ಮ ಆತ್ಮಕಥೆಯನ್ನು ಬರೆದರೂ ಇತರರೆಲ್ಲರ ಕಥೆಯನ್ನೂ ಬರೆಯದೆ ವಿಧಿಯಿಲ್ಲ.

1940ನೆಯ ಇಸವಿ ಬಂತು; ಸಂಸ್ಥಾನದ ಮೂಲೆಮೂಲೆಗಳಲ್ಲೂ ಇಂಟರ್ಮೀಡಿಯೆಟ್ ಕಾಲೇಜುಗಳು ಹುಟ್ಟಿ ಮೈಸೂರು ಬೆಂಗಳೂರಿನಿಂದ ಅಧ್ಯಾಪಕರುಗಳನ್ನು ಸೆಳೆದುಕೊಂಡವು. ಆರೆಂಜ್‌ಕ್ಲಬ್ಬಿನ ಸದಸ್ಯರು ಚೆದರಿಹೋದರು. ಕ್ಲಬ್ಬು ಮಾತ್ರ ಜೀವಂತವಾಗಿಯೇ ಇದೆ. ಈಗ ಅದರ ವಾಸಸ್ಥಾನ ಮಹಾರಾಜಾ ಕಾಲೇಜಿನ ಕಾಮನ್ ರೂಮ್ ಅಲ್ಲ—ನಮ್ಮೆಲ್ಲರ ಮನಸ್ಸು. ಅದರ ಸದಸ್ಯರು ಎಲ್ಲೇ ಇರಲಿ, ಜೊತೆಯುವನೊಬ್ಬ ಕಣ್ಣಿಗೆ ಬಿದ್ದರೆ ಕ್ಲಬ್ಬು ಅಲ್ಲೇ ಮತ್ತೆ ಯೌವನ ಪಡೆಯುತ್ತದೆ. ಇಂದೂ ಯಾರೊಬ್ಬರ ಅಪ್ಪಣೆಯಾದರೂ ಸರಿಯೆ, ಇತರ ಸದಸ್ಯರು ಅದನ್ನು ಪಾಲಿಸುತ್ತಾರೆ. ಅದಕ್ಕೆ ಉದಾಹರಣೆಯೆಂದರೆ ನನಗೂ ನಮ್ಮ ಎಚ್. ಕೃಷ್ಣರಾಯರಿಗೂ ನಡೆದಿರುವ ಪತ್ರವ್ಯವಹಾರ. ಈಗ ಎರಡು ತಿಂಗಳಿನಿಂದ ನನ್ನ ಬೆನ್ನು ಹತ್ತಿ, ಸ್ನೇಹಾನುನಯಗಳಿಂದ ಹಿಡಿದು ಕೋಪ ತಿರಸ್ಕಾರ ಜುಗುಪ್ಸೆಗಳವರೆಗೆ ಎಲ್ಲಾ ಭಾವಗಳನ್ನೂ ಹೊರಸೂಸುವ ಕಾಗದಗಳನ್ನು ಡಜನ್‌ಗಟ್ಟಲೆ ಬರೆದು, ನನ್ನಂಥ ಹುಟ್ಟು ಸೋಮಾರಿಯಿಂದಲೂ ಈ ಲೇಖನವನ್ನು ಹೊರಡಿಸಿದ್ದಾರೆ!

ನಮ್ಮ ಗುಂಪು ಕೆಲವು ವೇಳೆ ಅಕಸ್ಮಾತ್ತಾಗಿ ತನ್ನ ತವರೂರಾದ ಮೈಸೂರಿನಲ್ಲಿ ಸೇರುವುದುಂಟು. ಅಂಥ ಸಂದರ್ಭಗಳಲ್ಲಿ ನಮ್ಮ ಹುಚ್ಚು ವರ್ತನೆಯನ್ನು ನೋಡಿ ಈಗಿನ ಕಿರಿಯ ಅಧ್ಯಾಪಕರು ಏನೆಂದುಕೊಳ್ಳುತ್ತಾರೋ ಕಾಣೆ. ಮಹಾರಾಜಾ ಕಾಲೇಜಿನಲ್ಲಿ ಇಂಥದೇ ಹೊಸ ಕ್ಲಬ್ಬು ಹುಟ್ಟಿಕೊಂಡಿದ್ದರೂ ಇರಬಹುದು. ನಮ್ಮ ಹನುಮಂತರಾಯರ ಮಿತಿಯಿಲ್ಲದ ಉತ್ಸಾಹದ ಫಲವಾಗಿ ಮೈಸೂರಿನಲ್ಲಿರುವ ಆರೆಂಜ್ ಕ್ಲಬ್ಬಿನವರೇ ಹೊಸದೊಂದು "ಸೂಯಿಸೈಡ್ ಕ್ಲಬ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಾರೆಂದು ಬಲ್ಲೆ. ಇದು ಕಾಮನ್ ರೂಮಿನ ನಾಲ್ಕನೆಯ ಅವತಾರ. ಈ ಕ್ಲಬ್ಬಿನವರು ವಾರಕ್ಕೊಂದು ಸಾರಿ ಸದಸ್ಯರೊಬ್ಬರ ಮನೆಯಲ್ಲಿ ಭೋಜನಕ್ಕಾಗಿ ಸೇರುತ್ತಾರೆ. ಹದ ಮರೆತು ಊಟಮಾಡಿ, ಆ ಮೂಲಕ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ರುಚಿಯಾಗಿರಬೇಕು, ಅಂದು ಒದಗಿಸುವ ಭಕ್ಷ್ಯಭೋಜ್ಯಗಳು—ಇದೇ ಕ್ಲಬ್ಬಿನ ಮುಖ್ಯ ನಿಯಮ. ಕ್ಲಬ್ಬಿನ ಈ ಆದರ್ಶವನ್ನು ಇದುವರೆಗೆ ಯಾರೂ ಸಾಧಿಸಿಲ್ಲವೆನ್ನುವುದು ಸಂತೋಷದ

ವಿಷಯ. ನಲವತ್ತು ವರ್ಷವಾದ ಕೂಡಲೆ ಎಲ್ಲರೂ ಆತ್ಮಹತ್ಯೆ ಮಾಡಿಕೊಳ್ಳಬೇಕು ಎಂಬ ಠರಾವನ್ನು ನಾನೇ ಒಂದು ಸಾರಿ ಯೂನಿಯನ್ನಿನ ಚರ್ಚಾಕೂಟದಲ್ಲಿ ಮಂಡಿಸಿದ ನೆನಪಿದೆ. ಆದರೆ ಹದಿನೆಂಟು ವರ್ಷದ ಹಿಂದಿನ ಅಭಿಪ್ರಾಯಕ್ಕೆ ಇಂದೂ ಮನ್ನಣೆ ಕೊಡಬೇಕಾದ ಅಗತ್ಯವೇನಿದೆ.!

## ಟೆಲಿಫೋನ್

ನಿಮ್ಮ ಮನೆಗೆ ಟೆಲಿಫೋನ್ ಸಂಬಂಧವಿಟ್ಟುಕೊಳ್ಳುವ ಗೊಡವೆಗೆ ಹೋಗಬೇಡಿ. ಇದು ನನ್ನ ಅನುಭವದಿಂದ ಹೇಳುವ ಮಾತು, ನಿಮ್ಮ ಹಿತಚಿಂತಕನಾಗಿ ಹೇಳುವ ಮಾತು. "ತನಗೆ ಟೆಲಿಫೋನ್ ಇಟ್ಟುಕೊಳ್ಳುವ ಯೋಗ್ಯತೆಯಿಲ್ಲ. ನಾವು ಇಟ್ಟುಕೊಂಡರೆ ಸಹಿಸಲಾರ," ಎಂದುಕೊಂಡು ಬಾಲವಿಲ್ಲದ ನರಿಯ ಕಥೆಯನ್ನು ನೆನಪಿಗೆ ತಂದುಕೊಳ್ಳಬೇಡಿ. ನಾನೂ ಒಂದಾನೊಂದು ಕಾಲದಲ್ಲಿ ಟೆಲಿಫೋನ್ ಹೊಂದಿದ್ದವನೇ. ಆದರೆ ಆ ಯಂತ್ರ ಮನೆಗೆ ಬಂದ ದಿನದ ಸಂತೋಷಕ್ಕಿಂತ ಅದು ಹೋದ ದಿನ ಅನು ಭವಿಸಿದ ಶಾಂತಿ ನೂರು ಪಾಲು ಹೆಚ್ಚಿನದು. ಇದೇನೋ ಯಂತ್ರೋಪ ಕರಣಗಳ ಯುಗ. ಈಗ ಮಾನವನು ಪ್ರಕೃತಿಯ ಕತ್ತಿನ ಮೇಲೆ ನೊಗ ವಿಟ್ಟು ಅದನ್ನು ತನ್ನ ಊಳಿಗಕ್ಕೆ ಹೂಡಿಕೊಂಡಿದ್ದಾನೆ. ಇದನ್ನು ನೆನೆದು ನಾವು ಭುಜ ತಟ್ಟಿಕೊಳ್ಳದ ದಿನವಿಲ್ಲ. ರೈಲು, ಮೋಟಾರು, ವಿಮಾನ ಮೊದಲಾದವುಗಳಂತೆ ಟೆಲಿಫೋನ್ ಕೂಡ ಪ್ರಕೃತಿಯ ದಾಸ್ಯದ ಚಿಹ್ನೆ, ಮಾನವನ ಸಾಮ್ರಾಜ್ಯಮಕುಟದಲ್ಲಿ ಹೊಳೆಯುವ ರತ್ನ—ಎಂದು ಮುಂತಾಗಿ ವಿಜ್ಞಾನಿಗಳು ಸಾವಿರ ಮಾತು ಹೇಳಬಹುದು. ಆದರೆ ಚಕ್ರ ವರ್ತಿಗೆ ತನ್ನ ವೈಭವವೇ ಒಂದು ಸಂಕಲೆಯಾಗಿ ಪರಿಣಮಿಸುತ್ತದೆಯಲ್ಲವೆ? ಕಣ್ಣು ತೆರೆದು ನೋಡಿ: ನಮ್ಮ ವಿಜಯರಥಕ್ಕೆ ಕಟ್ಟಿ ಎಳೆತಂದ ಈ ತೊತ್ತು, ಯಂತ್ರರೂಪಿಯಾದ ಈ ಪ್ರಕೃತಿಶಕ್ತಿ, ಯಾವುದೋ ಮಾಯದಲ್ಲಿ ರಥದೊಳಗೆ ಬಂದು ಒಡತಿಯ ಸ್ಥಾನದಲ್ಲಿ ಕುಳಿತಿದ್ದಾಳೆ. ನಮಗೆ ಮಂಕು ಬೂದಿ ಎರಚಿ ಸೂತ್ರದ ಬೊಂಬೆಗಳಂತೆ ನಮ್ಮನ್ನು ಕುಣಿಸುತ್ತಿದ್ದಾಳೆ. ಈಗ ಬಂದಿಗಳಾಗಿರುವವರು ನಾವು, ಪ್ರಕೃತಿಯಲ್ಲ. ನಮ್ಮ ಸಂಕಲೆಗಳು ಚಿನ್ನದವಿರಬಹುದು ; ಬಿಗಿದಿರುವ ಹಗ್ಗ ನಯವಾದ ರೇಷ್ಮೆಯದಿರಬಹುದು. ಆದರೆ ಬಿಗಿತದ ಸಂಕಟವೇನೂ ತಪ್ಪುವಂತಿಲ್ಲ. ನನ್ನ ಮನೆಗೆ ಟೆಲಿಫೋನ್ ಬಂದ ಮೇಲೆ ಇದು ಚೆನ್ನಾಗಿ ಮನದಟ್ಟಾಯಿತು.

ನಾನೇನೂ ಅದಕ್ಕೆ ಆಹ್ವಾನಕೊಡಲಿಲ್ಲ. ವಿಧಿಯ ಚಕ್ರ ತಾನಾಗಿಯೇ ಒಂದು ಬಾರಿ ಉರುಳಿ, ಕೇವಲ ಉಪಾಧ್ಯಾಯನಾಗಿದ್ದವನನ್ನು ಸಂಸ್ಥೆ ಯೊಂದರ ವ್ಯವಸ್ಥಾಪಕನನ್ನಾಗಿ ಮಾರ್ಪಡಿಸಿತು. ಆ ಹೊಸ ಸನ್ನಿವೇಶಕ್ಕೆ ಹೊಂದಿಕೊಳ್ಳುವ ಮೊದಲೇ ಅದರ ಅಂಗವಾಗಿ ಈ ಟೆಲಿಫೋನೂ ಬಂದಿತು.

ಬಂದಾಗಲೇನೋ ನಮ್ರವಾಗಿ "ನನಗೊಂದು ಸ್ಥಾನವುಂಟೆ ?" ಎಂದು ಕೇಳಿಕೊಂಡು ನಾನು ತೋರಿಸಿದ ಮೂಲೆಯಲ್ಲಿ ಕುಳಿತಿತು.

ಅದರ ವಿಷಯ ಏನೇ ಹೇಳಲಿ, ಅದು ಮನೆಗೆ ಅಲಂಕಾರವೆಂದು ಒಪ್ಪಲೇಬೇಕು. ಟೆಲಿಫೋನ್ ಇಟ್ಟುಕೊಳ್ಳುವುದು ದೊಡ್ಡ ಮನುಷ್ಯರ ಮನೆಯ ಚೆಲುವೆಯನ್ನು ಮದುವೆಯಾದಂತೆ. ಆಕೆಯ ಚೆಲುವೂ ಸಮಾಜದಲ್ಲಿ ಆಕೆಗಿರುವ ಅಂತಸ್ತೂ ನಮ್ಮ ಮನೆಗೆ ಭೂಷಣ. ನಮಗೆ ವ್ಯಕ್ತಿಶಃ ದೊರಕದ ಗೌರವ ಅವಳಿಂದ ದೊರಕುತ್ತದೆ. ಹೆಣ್ಣೊಪ್ಪಿಸಿ ಕೊಡುವ ಕಾಲವಲ್ಲಿ ಆಕೆ ನಮ್ರಳಾಗಿ ತಲೆತಗ್ಗಿಸಿಯೇ ಇರುತ್ತಾಳೆ. ಮನೆಗೆ ಬಂದು ಪ್ರತಿಷ್ಠಿತಳಾದ ಮೇಲೆ ಅವಳ ಚೇಷ್ಟೆ, ದವಲತ್ತು, ಹೇಳತೀರದು. ಈ ಟೆಲಿಫೋನೂ ಹಾಗೆಯೇ. ಅದನ್ನು ಚೆಲುವೆಯೆನ್ನಬಹುದೋ ಇಲ್ಲವೋ ಕಾಣೆ—ಅದರದ್ದು ಕಾರ್ಗಪ್ಪಿನ ದೇಹ. ಆದರೇನು, ಷೀಬಾ ರಾಣಿಯೂ ಕ್ಲಿಯೋಪಾತ್ರಳೂ ಕರಿಯ ಜನಾಂಗದವರೇ ಅಲ್ಲವೇ ?

ತಾನೇ ಬಯಸಿ ಬಂದ ಈ ನಗುಮುಖದ ಶ್ಯಾಮಲೆ—ಮಿಂಚಿನಂತೆ ಹೊಳೆಯುವ ನಂಬರು ಪ್ಲೇಟನ್ನು ನೋಡಿದರೆ ನಗೆಮಲ್ಲಿಗೆಯ ನೆನಪಾಗುತ್ತದೆ—ನನ್ನ ಮನೆಯನ್ನು ಸೇರಿದ ದಿನ ನಾನು ಆನಂದದಿಂದ ಉಬ್ಬಿದೆನೆಂದು ಒಪ್ಪಲೇ ಬೇಕು. ಆದರೂ ಮೊದಲ ಬಾರಿ ಪರಿಚಯ ಮಾಡಿಕೊಳ್ಳಲು ಹೊರಟಾಗ (ಅದುವರೆಗೂ ನಾನು ಟೆಲಿಫೋನಿನಲ್ಲಿ ಮಾತಾಡಿದವನೇ ಅಲ್ಲ !) ಮನಸ್ಸಿಗೆ ಏನೋ ಒಂದು ಬಗೆಯ ಸಂಕೋಚ—ಇನ್ನೂ ಅಪರಿಚಿತಳಾದವಳೊಡನೆ ಸಲಿಗೆಯನ್ನು ಬೇಡುವಾಗ ಸ್ವಾಭಾವಿಕವಾಗಿ ತಲೆದೋರಬಹುದಾದ ಸಂಕೋಚ. ಆ ವ್ಯಕ್ತಿಯ ಕೈಹಿಡಿಯಲು ಹೆದರಿಕೆ, ನನ್ನ ನಡತೆ ಹಾಸ್ಯಾಸ್ಪದವಾಗಿ ಕಂಡೀತೆಂಬ ಶಂಕೆ. ಇಂಥ ಸಮಯದಲ್ಲಿ ನಮ್ಮ ತೊದಲು ಮಾತುಗಳನ್ನು ಕೇಳಿ ಹಾಸ್ಯಮಾಡಿ ನಗಬಹುದಾದವರು ಯಾರೂ ಹತ್ತಿರ ಇಲ್ಲದಿದ್ದರೆ ಒಳ್ಳೆಯದು. ಇಬ್ಬರಿದ್ದರೆ ಜೊತೆ, ಮೂವರಿದ್ದರೆ ಹಿಂಡು. ಆದರೆ ನಮ್ಮ ಮನೆಯಲ್ಲಿ ಈ ಹೊಸ ವ್ಯಕ್ತಿ ಇರುವ ಕಡೆ ಲಲಿತೆಯೂ ಇದ್ದೇ ಇರುತ್ತಾಳೆ. ಕಚೇರಿಯ ಫೋನಿನ ಬಳಿಯಂತೂ ಮೂರನೆಯವರಿಲ್ಲದ ಕಾಲವೇ ಇಲ್ಲ.

ಅನುಭವವಿಲ್ಲದವರು "ಇಲ್ಲಿ ಹಾಸ್ಯಕ್ಕೇನು ವಿಷಯ ?" ಎನ್ನಬಹುದು. ವಿಷಯ ಬೇಕಾದಷ್ಟಿದೆ. ಮೊಟ್ಟಮೊದಲೇ ಒಂದು ಸಮಸ್ಯೆ ಎದ್ದು ನಿಲ್ಲುತ್ತದೆ: ಫೋನಿನಲ್ಲಿ ಮಾತಾಡುವಾಗ ದನಿಯನ್ನು ಎಷ್ಟು ಮಟ್ಟಿಗೆ ಎತ್ತಬೇಕು ? ಎತ್ತಬೇಕಾಗಿಯೋ ಇಲ್ಲವೋ ಎಂದು ನಮಗೆ ಹೊಳೆಯುವುದಿಲ್ಲ. ನಿಮ್ಮ

ಮಾತು ಯಾರಿಗೆ ತಲಪಬೇಕೋ ಅವನು ಅಥವಾ ಅವಳು ಮೂರು ಮೈಲಿ ದೂರದಲ್ಲಿದ್ದರೂ ಸರಿಯೆ, ನೀವು ಎಷ್ಟು ಮೆಲ್ಲಗೆ ಮಾತನಾಡಿದರೂ ಸರಿಯೆ, ಅವರಿಗೆ ಕೇಳಿಸುತ್ತದೆಯೆಂದು ನೀವು ಬಲ್ಲಿರಿ—ಅದು 'ಥಿಯರಿ'ಯ ಭಾಗ. ಆದರೆ ಫೋನಿನ ಗ್ರಾಹಿ (Receiver)ಯನ್ನು ಕೈಗೆ ತೆಗೆದುಕೊಂಡು ಮಾತಾಡಹೊರಟಾಗ ಮಾತ್ರ ಥಿಯರಿ ಮರೆತುಹೋಗುತ್ತದೆ. "ಮೆಲ್ಲಗೆ ಮಾತಾಡಿದರೆ ಅಷ್ಟು ದೂರದಲ್ಲಿರುವವರಿಗೆ ಹೇಗೆ ಕೇಳಿಸಬೇಕು ? ದೇವರು ಗಂಟಲು ಕೊಟ್ಟಿರುವುದು ಏಕೆ ?" ಎಂದು ಒಳಗಿನಿಂದ ಯಾವುದೋ ಪ್ರೇರಣೆ ಬರುತ್ತದೆ. ಪ್ರಯಾಣ ಹೊರಟಿರುವ ನಿಮ್ಮ ಮಾತಿಗೆ ಪಾಥೇಯವಾಗಿ ಮೂರು ಮೈಲಿ ದೂರಕ್ಕೂ ಸಾಕಾಗುವಷ್ಟು ಶಬ್ದಶಕ್ತಿಯನ್ನು ಕೊಟ್ಟು ಕಳಿಸುವಂತಾಗುತ್ತದೆ. ಇದು ಮೂಢತನವೆಂದು ನಮ್ಮ ವಿಚಾರ ಶಕ್ತಿ ಎಷ್ಟು ಬುದ್ಧಿ ಹೇಳಿದರೂ ಗಂಟಲು ಅದನ್ನು ಒಪ್ಪುವುದಿಲ್ಲ.

ಟೆಲಿಫೋನಿನ ಅಭ್ಯಾಸವಿರುವವರಿಗೆ ಇದು ವಿಚಿತ್ರವಾಗಿ ಕಾಣುತ್ತದೆ. ನನ್ನ ಕಚೇರಿಯ ಗುಮಾಸ್ತರು ದಿನಕ್ಕೆ ನೂರುಸಾರಿ ಫೋನಿನಲ್ಲಿ ಮಾತಾಡುವವರು. ನನ್ನನ್ನು ಹೆದರಿಸುವ ಫೋನು ಅವರನ್ನು ಓಲೈಸುತ್ತದೆಯೋ ಏನೋ. ಅವರು ಕೈನೀಡಿದಾಗ ಫೋನಿನ ಗ್ರಾಹಿ ತಾನಾಗಿಯೇ ತನ್ನ ತೊಟ್ಟಿಲಿನಿಂದ ಚಿಮ್ಮಿ ಅವರ ಕೈ ಸೇರುವಂತೆ ತೋರುತ್ತದೆ. ಉಸಿರಾಡುವುದು ಎಷ್ಟು ಸ್ವಾಭಾವಿಕವೋ ಫೋನಿನಲ್ಲಿ ಮಾತಾಡುವುದೂ ಅವರಿಗೆ ಅಷ್ಟೇ ಸ್ವಾಭಾವಿಕ. ಅವರು ನನ್ನ ಕಿರಿಚಾಟದಿಂದಾದ ಬೇಸರವನ್ನು ಅದೆಷ್ಟು ಕಾಲ ಹಲ್ಲುಕಚ್ಚಿ ತಡೆದುಕೊಂಡಿದ್ದರೋ—ಕೊನೆಗೊಂದು ದಿನ "ಅದರ ಮೈಕ್ರೊಫೋನ್ ಬಹಳ ಸೂಕ್ಷ್ಮವಾದದ್ದು, ಸಾರ್; ಎಷ್ಟು ಮೆಲ್ಲಗೆ ಮಾತಾಡಿದರೂ ಕೇಳುತ್ತೆ" ಎಂದು ಯಂತ್ರದ ಹೊಗಳಿಕೆಯನ್ನು ಮುಂದುಮಾಡಿ, ನನ್ನ ಕಿರಿಚಾಟದ ತೆಗಳಿಕೆಯನ್ನು ಬಚ್ಚಿಟ್ಟು, ನಯವಾಗಿ ಸೂಚನೆ ಕೊಟ್ಟರು. ಇದರಿಂದ ನನ್ನ ದುರಭ್ಯಾಸವೇನೂ ತಪ್ಪಲಿಲ್ಲ. ಗುಮಾಸ್ತರೆದುರಿಗೆ ಮಾನ ಹೋಯಿತಲ್ಲ, ಎಂದು ಅಸಮಾಧಾನವಾಯಿತು.

ನಾವು ಮಾತಾಡುವುದು ಇಷ್ಟು ಲಕ್ಷಣವಾದರೆ ಇತರರ ಮಾತನ್ನು ಕೇಳಿ ಅರ್ಥಮಾಡಿಕೊಳ್ಳುವುದು ಮತ್ತೂ ಕಷ್ಟ. ಆ ಯಂತ್ರದಿಂದ ಹೊರಡುವ ಮಾತಿನಲ್ಲಿ ಮುಗ್ಧತೆಯ ಮಾಧುರ್ಯ ಇಲ್ಲದಿದ್ದರೂ ಅಸ್ಪಷ್ಟತೆಯಿದೆ. ಗ್ರಾಹಿಯನ್ನೆತ್ತಿದೊಡನೆಯೇ ನನಗೆ ಕೇಳುವುದು ಆಗ ತಾನೇ ಇಲಿಯನ್ನು ತಿಂದೋ ಹಾಲು ಕುಡಿದೋ ತೃಪ್ತಿಗೊಂಡಿರುವ ಬೆಕ್ಕು ಮಾಡಬಹುದಾದ ಶಬ್ದ. ಆದರೆ ಯಂತ್ರವನ್ನು ಉಪಯೋಗಿಸತೊಡಗಿದರೆ

ಸಾಕು, ಬೆಕ್ಕಾಗಿದ್ದದ್ದು ಹಸಿದ ಕರಡಿಯಾಗಿ ನಖಗಳನ್ನು ಮಸೆಯುತ್ತಿದೆಯೋ ಎನ್ನಿಸುತ್ತದೆ. ಈ ಟೆಲಿಫೋನು ಮುಟ್ಟುವವರೆಗೂ ನಾರಿ, ಮುಟ್ಟಿದರೆ ಮಾರಿ. ಅದು ಗುರುಗುಟ್ಟುವುದರ ಜೊತೆಗೆ ಸಣ್ಣ ಸಣ್ಣ ಆಸ್ಫೋಟನೆಗಳು ಬೇರೆ ಕೇಳುತ್ತವೆ. ನಿಮ್ಮೊಡನೆ ಮಾತಾಡುವವನ ಸ್ವರ ಈ ಶಬ್ದಗಳೊಡನೆ ಹೋರಾಡಿ ಗೆದ್ದ ಮೇಲೆ ನಿಮ್ಮ ಕಿವಿಯನ್ನು ಮುಟ್ಟಬೇಕು. ಈ ಗೊಂದಲದಲ್ಲಿ ಅವನ ಕಂಠಸ್ವರವನ್ನು ಗುರುತಿಸುವುದೇ ಕಷ್ಟವಾಗುತ್ತದೆ. ನಿಮ್ಮ ಪ್ರೇಯಸಿಯ ದನಿ ಇಂಪೆಂದು. ನೀವು ಭಾವಿಸಿರಬಹುದು ; ಗಂಧರ್ವಗಾನ, ಕೋಕಿಲಕಂಠ ಎಂದು ಮುಂತಾಗಿ ಅದನ್ನು ವರ್ಣಿಸಿ ಕವನಗಳನ್ನು ಕಟ್ಟಿರಬಹುದು. ಆದರೆ ಅದೇ ದನಿಯನ್ನು ಟೆಲಿಫೋನಿನಲ್ಲಿ ಕೇಳಿ—ನಿಮ್ಮ ಕವಿತೆಯ ಬುಗ್ಗೆ ಬತ್ತಿಹೋಗುತ್ತದೆ.

ದನಿಯ ಇಂಪು ಎಲ್ಲಾದರೂ ಹೋಗಲಿ, ಕೇಳಿದ ಮಾತು ಅರ್ಥವಾದರೂ ಆಗಬೇಡವೆ ? ನನಗೇನೋ ಅನೇಕ ವೇಳೆ ಈ ತೃಪ್ತಿ ಸಹ ದೊರೆತಿಲ್ಲ. ಕಚೇರಿಯಲ್ಲಿ ಕುಳಿತು ಮನೆಯವರೊಡನೆ ಮಾತಾಡುವಾಗ ಇದೊಂದು ದೊಡ್ಡ ಕೊರತೆಯೆನಿಸುವುದಿಲ್ಲ. ಟೈಪ್‌ರೈಟರಿನ ಕರ್ಕಶ ಶಬ್ದಕ್ಕೆ ಬದಲಾಗಿ ನಿಮ್ಮ ಹೆಂಡತಿಯ ಅಥವಾ ಮಗುವಿನ ದನಿ ತಂತಿಯ ಮೇಲೆ ಹರಿದು ಬಂದರೆ ಅದು ಹೇಗಿದ್ದರೂ ಪ್ರಿಯವಾಗುತ್ತದೆ. ಆ ಕಂಠಸ್ವರದ ಬಾಗು ತಿರುವುಗಳೆಲ್ಲ ನಮಗೆ ಪರಿಚಿತ ಮತ್ತು ಪ್ರಿಯವಾದ್ದರಿಂದ ಅರ್ಥವಾಗುವುದು ಕಷ್ಟವೂ ಅಲ್ಲ. ಅಲ್ಲದೆ ಆಗ ಮಾತಿನ ಅರ್ಥ ಅಷ್ಟು ಮುಖ್ಯವಲ್ಲ. ಮಾತಾಡುವ ವ್ಯಕ್ತಿ ಮುಖ್ಯ. ಆದರೆ ಇತರರೊಡನೆ ಮಾತಾಡುವಾಗ ಪರಿಸ್ಥಿತಿ ಬೇರೆ. ಅವರು ಹೇಳುವುದು ನಿಮಗೆ ತಿಳಿಯದಿದ್ದರೆ, "ಇವನು ಟೆಲಿಫೋನ್ ಕಂಡವನೇ ಅಲ್ಲ, ಶುದ್ಧ ಹಳ್ಳಿಯವ, ಅನಾಗರಿಕ" ಎಂದುಕೊಳ್ಳುತ್ತಾರೆ.

ನನ್ನ ಮಿತ್ರ ಶಾಸ್ತ್ರಿಗಳ—ಅದು ಅವರ ನಿಜವಾದ ಹೆಸರಲ್ಲ—ಕಚೇರಿಗೆ ಆಗಿಂದಾಗ ಏನೋ ಕೆಲಸಕ್ಕಾಗಿ ಒಬ್ಬಾಕೆ ಬರುತ್ತಿದ್ದಳು. ಆಕೆ ನವನಾಗರಿಕತೆಯ ಪ್ರತೀಕ ; ಮಹಾ ಥಳಕುಗಾತಿ ; ಇಂಗ್ಲಿಷ್ ಹೊರತು ಬೇರೆ ಭಾಷೆಯಲ್ಲಿ ಮಾತಾಡುತ್ತಿರಲಿಲ್ಲ. ಕನ್ನಡ ಬಂದರೂ ಬರುವುದಿಲ್ಲವೆಂದು ಹೇಳಿಕೊಳ್ಳುವುದು ಆಕೆಗೊಂದು ಹೆಮ್ಮೆ, ಇಂಗ್ಲಿಷಿನಲ್ಲಿ ತಾನು ಪ್ರವೀಣೆಯೆಂಬ ಭ್ರಮೆ ಬೇರೆ. ಇಂಗ್ಲಿಷಿನ ವಿಷಯದಲ್ಲಿ ಶಾಸ್ತ್ರಿಗಳಿಗೆ ವಿಶೇಷ ಅಭಿಮಾನ. ಆದರೆ ಆ ಭಾಷೆಯನ್ನು ಇಂಗ್ಲಿಷರು ಆಡಿದಂತೆಯೇ ಆಡಿದರೆ ಚೆನ್ನ ; ಅಥವಾ ಸುಸಂಸ್ಕೃತರಾದ ಭಾರತೀಯರು ಆಡುವಂತೆ ಆಡಿದರೂ

ಚೆನ್ನ—ಏನಿಲ್ಲವೆಂದರೂ ಅರ್ಥವಾದರೂ ಆಗುತ್ತದೆ. ಆಕೆ ಇವೆರಡು ರೀತಿಗಳನ್ನೂ, ಜೊತೆಗೆ ಇತರ ಅಂಶಗಳನ್ನೂ ಬೆರಸಿ ತನ್ನದೇ ಒಂದು ವಿಚಿತ್ರ ರೀತಿಯ ಉಚ್ಚಾರಣೆಯನ್ನು ಅಭ್ಯಾಸಮಾಡಿಕೊಂಡಿದ್ದಳು. ಆಕೆಯ ನಾಲಗೆ ಹದಿನಾರಾಣೆ ಭಾರತೀಯ ನಾಲಗೆ; ಅದರಲ್ಲಿ ಆಂಗ್ಲರ 'ಆ್ಯಕ್ಸೆಂಟ್', ಬಟ್ಲರ್ ಜನದ ಮತ್ತು ಆಂಗ್ಲೋ ಇಂಡಿಯನ್ನರ ಉಚ್ಚಾರಣೆಯ ವೈಖರಿ, ಇದನ್ನೆಲ್ಲಾ ಹೊರಡಿಸಬೇಕೆಂದರೆ ಹೇಗೆ! ಶಾಸ್ತ್ರಿಗಳ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಆಕೆಯ ಸಹಕಾರ ಅವಶ್ಯಕವಾದ್ದರಿಂದ ಅವಳ ಮೇಲೆ ರೇಗಿ, "ನಿನಗೆ ಇಂಗ್ಲಿಷ್ ಬರದು, ಕನ್ನಡದಲ್ಲೇ ಕಿರಲು" ಎನ್ನುವಂತಿಲ್ಲ.

ಉಚ್ಚಾರಣೆಯ ಅಸಹಜತೆಯ ಜೊತೆಗೆ ಇನ್ನೂ ಒಂದು ಕಷ್ಟವಿತ್ತು: ಆಕೆ ಉಪಯೋಗಿಸುತ್ತಿದ್ದ ಕೆನ್ನೆಗೆಂಪೂ ತುಟಿಗೆಂಪೂ ಎಷ್ಟು ಸ್ಪಷ್ಟವಾಗಿದ್ದವೋ ಮಾತು ಅಷ್ಟು ಸ್ಪಷ್ಟವಲ್ಲ. ಅಲ್ಲದೆ ಕಣ್ಣೆದುರಿಗಿದ್ದಾಗ ಎಷ್ಟೊಂದು ವೈಯಾರಬಿನ್ನಾಣಗಳನ್ನು ಪ್ರಯೋಗಿಸುತ್ತಿದ್ದಳೋ ಅಷ್ಟನ್ನೂ ಟೆಲಿಫೋನ್ ಮೂಲಕವೂ ಪ್ರಯೋಗಿಸಬೇಕೆಂದು ಆಕೆಯ ಪ್ರಯತ್ನ. ಹುಬ್ಬಿನ ವಕ್ರತೆ, ಕಣ್ಣಿನ ಹೊಳಪು ಚಾಂಚಲ್ಯಗಳು, ನಡಗೆಯ ವಿಲಾಸ, ಇವೆಲ್ಲವನ್ನೂ ಕೊರಳ ದನಿಯೊಂದರಲ್ಲಿ ತೋರಿಸಬೇಕೆಂದರೆ ಅರ್ಥಕ್ಕೂ ಸ್ಪಷ್ಟತೆಗೂ ಸ್ಥಾನವೆಲ್ಲಿ ಉಳಿದೀತು! ವಸ್ತುತಃ ಆಕೆಗೆ ಸ್ಪಷ್ಟತೆ ಮುಖ್ಯವಲ್ಲ; ತಮಗೆ ವೈಯಾರ ಮುಖ್ಯವಲ್ಲವೆಂದು ನನ್ನ ಮಿತ್ರರ ಹೇಳಿಕೆ. ಆಕೆ ಫೋನಿನಲ್ಲಿ ಆಡಿದ ಮಾತೊಂದೂ ಅವರಿಗೆ ಅರ್ಥವಾಗದು. "ಸರಿ ಸರಿ, ಒಳ್ಳೇದು, ಅದಕ್ಕೇನು, ವಿಚಾರ ಮಾಡತಕ್ಕ ವಿಷಯ"—ಇಂಥ ಸರ್ವಸಂದರ್ಭೋಚಿತವಾದ ಉತ್ತರಗಳನ್ನು ಕೊಟ್ಟು ಎಷ್ಟು ಕಾಲ ವ್ಯವಹರಿಸಲಾದೀತು! "ಇಲ್ಲಿಗೇ ಬಂದರೆ ಮುಖತಃ ಮಾತಾಡಬಹುದು" ಎಂದು ಹೇಳಿ ಒಂದೆರಡು ಸಲ ಪಾರಾದರು. ಆದರೆ ಪದೇ ಪದೇ ಆಕೆಯನ್ನು ಬರಮಾಡಿಕೊಳ್ಳುವುದು ಯಾವ ದೃಷ್ಟಿಯಿಂದಲೂ ಉಚಿತವಲ್ಲ. ಒಂದು ಬಾರಿ "ಆಕೆಯನ್ನು ಬರಹೇಳಿ" ಎಂದು ಗುಮಾಸ್ತರಿಗೆ ಹೇಳಿದಾಗ ಅವರು ಪ್ರಯತ್ನಪೂರ್ವಕವಾಗಿ ಮುಸಿನಗೆಯನ್ನು ತಡೆದುಕೊಂಡಂತೆ ತೋರಿತು. ಅವರಿಗೆ ಬೇಕಾಗಿದ್ದುದು ಆಕೆಯ ಸ್ವರದ ಸಾಮೀಪ್ಯ ಮಾತ್ರವೆಂದು ಗುಮಾಸ್ತರಿಗೆ ಹೇಗೆ ತಿಳಿಯಬೇಕು! ಕೊನೆಗೆ ಶಾಸ್ತ್ರಿಗಳು ಸ್ವಾಭಿಮಾನವನ್ನು ತೊರೆದು, "ನೋಡಿ, ನನಗೆ ಟೆಲಿಫೋನ್ ಹೊಸದು. ಆಕೆ ಮಾತಾಡುವುದೊಂದೂ ಅರ್ಥವಾಗುವುದಿಲ್ಲ. ಇನ್ನು ಮೇಲೆ ಅವಳೇನು ಹೇಳಿದರೂ ನೀವೇ ಬರೆದುಕೊಂಡು ತಿಳಿಸಿ" ಎಂದು ಹೇಳಬೇಕಾಯಿತು. ಇದಾದ ಮೇಲೆ ಆಕೆ "ಶಾಸ್ತ್ರಿ

ಗಳಿಗೆ ಫೋನ್ ಮಾಡಿದರೆ ಅವರು ಯಾವಾಗಲೂ ಮಾತಾಡುವುದೇ ಇಲ್ಲ; ಗುಮಾಸ್ತರೇ ಉತ್ತರ ಕೊಡುತ್ತಾರೆ" ಎಂದು ಸರ್ಕಾರಕ್ಕೆ ದೂರು ಕೊಟ್ಟಳಂತೆ.

ಇದೆಲ್ಲಾ ಅಭ್ಯಾಸಬಲದಿಂದ ವಾಯವಾಗುವ ಸಂಕಟಗಳೆನ್ನಿ. ಇವು ಕಳೆದರೂ ಬೇರೆ ಕಷ್ಟಗಳಿವೆ. ಈ ಟೆಲಿಫೋನ್ ಯಂತ್ರ ಮರೆಮೋಸ ಕೊಂಕುಗಳನ್ನರಿಯದಂತೆ ಕುಳಿತಿರುವುದನ್ನು ನೋಡಿದರೆ "ಎಂಥ ಸಾಧು! ಎಷ್ಟು ಕಷ್ಟಪಡಿಸಿದರೂ ತಡೆದುಕೊಳ್ಳುತ್ತದೆ" ಎನ್ನುವಂತಾಗುತ್ತದೆ. ಆದರೆ ವಸ್ತುತಃ ಅದು ಸುಮ್ಮನೆ ಕುಳಿತಿಲ್ಲ; ಮನಸ್ಸಿನಲ್ಲೇ ಕೀಟಲೆ ಕುಚೋದ್ಯಗಳ ಏರ್ಪಾಟು ಮಾಡುತ್ತಿರುತ್ತದೆ. ಅದರ ವಕ್ರಬುದ್ಧಿ ಯಾವಾಗ ಕಾರ್ಯ ಕ್ಷೇತ್ರಕ್ಕೆ ಬರುತ್ತದೆಯೆಂದು ಮುನ್ನೆಚ್ಚರಿಕೆ ಕೊಡಬಲ್ಲವರು ಯಾರೂ ಇಲ್ಲ. ಹೊತ್ತಿಸುವ ಬೆಂಕಿಯನ್ನು ಯಾರಿಗೂ ತಿಳಿಯದಂತೆ ಹೊತ್ತಿಸಿ ಅದು ತಮಾಷೆ ನೋಡುತ್ತ ಕುಳಿತಿರುತ್ತದೆ. ಒಂದು ದಿನ ಬೆಳಗ್ಗೆ ನನ್ನ ಮೇಲಧಿಕಾರಿ 'ರಿಂಗ್' ಮಾಡುವ ನಿರೀಕ್ಷೆಯಿತ್ತು. ನಿರೀಕ್ಷಿಸಿದಂತೆಯೆ ಘಂಟೆ ಹೊಡೆಯಿತು. ಆದರೆ ಗ್ರಾಹಿಯನ್ನು ಕಿವಿಗಿಟ್ಟುಕೊಂಡಾಗ ಕೇಳಿ ಬಂದದ್ದು ಯಾವುದೋ ಅಪರಿಚಿತ ಧ್ವನಿ. ಆ ಕೊನೆಯಲ್ಲಿದ್ದ ಪ್ರಾಣಿಗೆ "ನೀವು ಯಾರು?" ಎಂದು ಕೇಳುವಷ್ಟು ತಾಳ್ಮೆಯಿಲ್ಲ.

"ನೋಡ್ರೀ, ಮಗ್ಗುಲ ಅಂಗಡಿಯಿಂದ, ಮಾತಾಡುತಾ ಇರೋದು" ಎಂದು ಪ್ರಾರಂಭಿಸಿದ.

"ನಮ್ಮ ಮನೆಯ ಮಗ್ಗುಲಲ್ಲಿ ಅಂಗಡಿಗಳಿಲ್ಲ" ಎಂದೆ. ಅವನಿಗೆ ನನ್ನ ಮಾತಿನ ಕಡೆ ಲಕ್ಷ್ಯವೇ ಇಲ್ಲ.

"ಮೂರು ಕಪ್ಪು ಕಾಫಿ ಕಳಿಸಿ, ಇಲ್ಲಿಗೆ" ಎಂದ.

"ಸ್ವಾಮಿ, ಇದು ರೇಷನ್ ಕಾಲ. ನಾವು ಕಾಫಿ ಮಾಡಿಕೊಂಡು ಕುಡಿಯೋದೇ ಕಷ್ಟ. ಇನ್ನು ನಿಮಗೆಲ್ಲಿ ತರೋಣ!"

"ಏನ್ರಿ ಹೀಗಂತೀರ? ಹೋಟಲು...."

"ಅಲ್ಲ."

"ಅಲ್ಲ ಅಂದರೆ?"

"ಹೋಟಲಲ್ಲ."

'ಆನಂದ ಭವನ...."

"ಅಲ್ಲ."

"ಹಾಗಾದರೆ ನೀವು ಆನಂದಭವನವಲ್ಲವೆ?"

"ಅಲ್ಲ, ಸಾವಿರಬಾರಿ ಅಲ್ಲ, ನಾನು ಹಿಂದೆಂದೂ ಆನಂದಭವನವಾಗಿರಲಿಲ್ಲ, ಮುಂದೂ ಆಗುವುದಿಲ್ಲ, ತಿಳಿಯಿತೆ ?"

"ಅಲ್ರೀ, ನಿಮ್ಮ ನಂಬರು...."

ಇಷ್ಟು ಹೊತ್ತಿಗೆ ನನ್ನ ಮಂದಬುದ್ಧಿಗೂ ಹೊಳೆಯಿತು, ಗ್ರಾಹಿಯನ್ನು ಕೆಳಗಿಟ್ಟು ಈ ಕೋಟಲೆಯಿಂದ ತಪ್ಪಿಸಿಕೊಳ್ಳಬಹುದೆಂದು. ಆದರೆ ಇಂಥ ಸಮಯಗಳಲ್ಲಿ ಕಥೆ ಅಲ್ಲಿಗೇ ಮುಗಿಯುವುದಿಲ್ಲ. ಆ ಕಾಫಿ ಕುಡುಕ ಮತ್ತೆ ಆನಂದಭವನಕ್ಕೆ ಫೋನು ಮಾಡುತ್ತಾನೆ. ಯಂತ್ರವು ಆ ಪ್ರಾರ್ಥನೆಯನ್ನು ಮತ್ತೆ ನಿಮಗೇ ತಲಪಿಸುತ್ತದೆ. "ಆನಂದಭವನವೇನ್ರಿ ?" ಎಂಬ ಪ್ರಶ್ನೆ ಬಂದೊಡನೆ ನೀವು ರೇಗಿ "ನಿಮ್ಮಪ್ಪ ಆನಂದಭವನ, ನಿಮ್ಮ ತಾತ !" ಎಂದು ಕಿರಿಚಿ ಗ್ರಾಹಿಯನ್ನು ಕೆಳಕ್ಕೆ ಬಡಿಯುತ್ತೀರಿ. ಮತ್ತೆ ರಿಂಗ್ ಬಂದಾಗ ಉತ್ತರ ಕೊಡುವುದಿಲ್ಲ. ಆದರೆ....ಈ ಮೂರನೆಯಸಾರಿ ಫೋನ್ ಮಾಡಿದವನು ಅಂಗಡಿಯವನಲ್ಲ, ನಿಮ್ಮ ಮೇಲಿನ ಅಧಿಕಾರಿ !

ನನ್ನ ಮಿತ್ರರೊಬ್ಬರಿಗೆ ಇದಕ್ಕಿಂತ ಕ್ಲೇಶಕರವಾದ ಅನುಭವವಾಯಿತು, ಅವರು ದೊಡ್ಡದೊಂದು ಉತ್ಸವದ ಕಾರ್ಯನಿರ್ವಾಹಕರಾಗಿದ್ದರು. ತಮ್ಮ ಅಸಿಸ್ಟೆಂಟರಿಗೆ ಏನೋ ಹೇಳಬೇಕಾಗಿದ್ದುದನ್ನು ಕೊನೆಯ ಘಳಿಗೆಯವರೆಗೂ ಮರೆತಿದ್ದು ಆಗ ಆತುರದಲ್ಲಿ ನಂಬರು ತಿರುಗಿಸಿದರು. ಫೋನಿನಲ್ಲಿ 'ಎಂಗೇಜ್' ಆಗಿರುವ ಸದ್ದು ಕೇಳಿತು. ಹೀಗೆ ಮೂರು ನಾಲ್ಕು ಸಾರಿ ಫಲವಿಲ್ಲದೆ ತಿರುಗಿಸಿ ಅವರಿಗೆ ಜೇಸರವಾಯಿತು. ಮನಸ್ಸಿನಲ್ಲಿ ಕಾವು ಏರಿ, ಅಸಿಸ್ಟೆಂಟರ ಮೇಲೆ ರೇಗುವುದಕ್ಕೆ ಬೇಕಾದ ಪೂರ್ವಸಿದ್ಧತೆಯೆಲ್ಲಾ ನಡೆದಿತ್ತು. ಮತ್ತೆ ನಂಬರು ತಿರುಗಿಸಿದಾಗ ಸರಿಯಾಗಿ 'ರಿಂಗ್' ಕೇಳಿಸಿತು. ವಾಡಿಕೆಯಂತೆ "ಹಲ್ಲೊ ಹಲ್ಲೊ" ಪೀಠಿಕೆ ಮುಗಿದ ಮೇಲೆ ಸಂಭಾಷಣೆ ಹೆಚ್ಚು ಕಡಿಮೆ ಈ ರೀತಿ ನಡೆಯಿತು :

"ಯಾರರಿ ಮಾತಾಡೋದು ?"—ಪ್ರಶ್ನೆ ಕೇಳಿದವರು ನನ್ನ ಮಿತ್ರರು.

"....ರಾವ್."

"ಆ, ಏನಂದಿರಿ ?"

"....ರಾವ್."

"ಯಾವ ರಾವ್‌ರಿ ? ಗಟ್ಟಿಯಾಗಿ ಮಾತಾಡುವುದಕ್ಕೇನು ಬಂದಿದೆ? ಗಂಟಲು ಕೂತುಹೋಗಿದೆಯೆ ? ಬಿಸಿಬಿಸಿಯಾಗಿ ಬಾದಾಮಿಹಾಲು ಕುಡಿಯಿರಿ. ಮೆಣಸಿನ ಕಷಾಯ ತಗೊಳ್ಳಿ. ಯಾವ ರಾವ್‌ರಿ ?"

"ಮೈಸೂರಿನ ದಿವಾನ್....ರಾವ್."

ಗ್ರಾಹಿ ನನ್ನ ಮಿತ್ರರ ಕೈಯಿಂದ ಜಾರಿ ತನ್ನ ತೊಟ್ಟಿಲೊಳಕ್ಕೆ ಬಿತ್ತು. ಮುಖವೆಲ್ಲಾ ಬಿಳುಪೇರಿತು. ತುಟಿ ನಡುಗುತ್ತಿತ್ತು. ಒಂದೆರಡು ನಿಮಿಷ ಮೌನವಾಗಿದ್ದು ಸುಧಾರಿಸಿಕೊಂಡಮೇಲೆ "ಏನ್ರೀ, ಟೆಲಿಫೋನ್ ಮಾಡಿದವನು ನಾನು ಅಂತ ದಿವಾನರಿಗೆ ಪತ್ತೆಯಾದರೇನು ಗತಿ! ಹಾಗೆ ಪತ್ತೆ ಮಾಡುವುದು ಸಾಧ್ಯವೇನ್ರಿ?" ಎಂದು ನನ್ನನ್ನು ಕೇಳಿದರು. "ಅದು ಹೇಗೆ ಸಾಧ್ಯ? ನೀವು ಏನೂ ಹೆದರಬೇಕಾದ್ದಿಲ್ಲ" ಎಂದು ನಾನು ಸಮಾಧಾನಪಡಿಸಬೇಕಾಯಿತು. ನ ಬ್ರೂಯಾತ್ ಸತ್ಯಮಪ್ರಿಯಂ. ಇಂಥ ಸುಳ್ಳು ಚಿತ್ರಗುಪ್ತನ ಲೆಕ್ಕಕ್ಕೆ ಸೇರುವುದಿಲ್ಲ.

ಮೇಲೆ ವರ್ಣಿಸಿರುವ ಕುಚೇಷ್ಟೆಗಳಿಗೆಲ್ಲಾ ಜವಾಬ್ದಾರಿ ಹೊರಬೇಕಾದವರು ಯಾರು? ಎಕ್ಸ್‌ಛೇಂಜಿನವನಲ್ಲ—ಇದು ಆಟೋಮ್ಯಾಟಿಕ್ ಟೆಲಿಫೋನ್. ನನ್ನ ಮಿತ್ರರಂತೂ ಖಂಡಿತ ಅಲ್ಲ: ದಿವಾನರನ್ನು ಆ ರೀತಿ ಮಾತಾಡಿಸುವುದಕ್ಕೆ ಅವರೇನು ದಟ್ಟಿ ಹುಚ್ಚರೇ! ಅತ್ತ ಕಡೆ ದಿವಾನರ ಜವಾಬ್ದಾರಿಯೂ ಇಲ್ಲ. ಇನ್ನು ಉಳಿದದ್ದು ಆ ಯಂತ್ರವೊಂದೇ ತಾನೆ? ನನ್ನ ಮಿತ್ರರ ಮೇಲೆ ಅದೇನು ಮತ್ಸರವಿತ್ತೋ, ಅದನ್ನು ಈ ರೀತಿ ತೀರಿಸಿಕೊಂಡಿತು.

ಮನೆಗೆ ಟೆಲಿಫೋನ್ ತರಬೇಕೆನ್ನುವವರು ಒಂದು ವಿಷಯವನ್ನು ಮರೆಯಬಾರದು: ಆ ಯಂತ್ರವಿದ್ದರೆ ನೀವು ಇತರರೊಡನೆ ಯಾವಾಗ ಬೇಕಾದರೂ ಮಾತಾಡಬಹುದು—ಇದು ಸೌಕರ್ಯವೇನೋ ಹೌದು. ಆದರೆ—ಇತರರೂ ಯಾವಾಗಲೆಂದರೆ ಆವಾಗ ನಿಮ್ಮೊಡನೆ ಮಾತಾಡಬಹುದು. ಇದು ಸೌಕರ್ಯವಾದರೂ ಆಗಬಹುದು, ಪೀಡೆಯಾದರೂ ಆಗಬಹುದು. ಎಷ್ಟೋ ವೇಳೆ ನಮಗೆ ಯಾರೊಡನೆಯೂ ಮಾತು ಬೇಕಾಗುವುದಿಲ್ಲ. ಯಾರಾದರೂ ಮಾತಾಡಿಸಿದರೆ—ಹೆಂಡತಿಯಾದರೂ ಆಗಲಿ, ಪ್ರೀತಿಯ ಮಗುವಾದರೂ ಆಗಲಿ.... ಪರಚಿಬಿಡೋಣ ಎನ್ನಿಸುತ್ತದೆ. ಒಂದು ವೇಳೆ ಯಾರೊಡನೆಯಾದರೂ ಮಾತಾಡೋಣವೆನ್ನಿಸಿದರೂ ನಿಮ್ಮನ್ನು ಟೆಲಿಫೋನಿಗೆ ಕರೆಯುವವನು ನಿಮಗೆ ಇಷ್ಟವಾದವನೆಂದು ಭರವಸೆಯೇನುಂಟು? ಅವನು ನಿಮಗೆ ಸಾಲ ಕೊಟ್ಟವನಿರಬಹುದು; ನಿಮ್ಮಿಂದ ಸಾಲ ಬೇಡುವವನಿರಬಹುದು, ಯಾವುದೋ ಸಭೆಗೆ ಅಧ್ಯಕ್ಷತೆ ವಹಿಸಿ ಎಂದೋ, ಭಾಷಣ ಕೊಡಿ ಎಂದೋ ಪೀಡಿಸುವ ಕಾರ್ಯದರ್ಶಿಯಿರಬಹುದು: ಮನೆಗಂದಾಯದವನಿರಬಹುದು; ಚಂಧಾ ಕೇಳುವವನಿರಬಹುದು.... ಸಮಾಜದಲ್ಲಿರುವ ನೂರೆಂಟು ಹಿಂಸಕರಲ್ಲಿ ಯಾರು ಬೇಕಾದರೂ

ನಿಮ್ಮನ್ನು ಫೋನಿಗೆ ಎಳೆಯಬಹುದು. ಇಂಥವರು ಹುಡುಕಿಕೊಂಡು ಮನೆಗೆ ಬಂದರೆ ಕಿಟಕಿಯಿಂದಲೇ ಅವರನ್ನು ಗುರುತಿಸಿ ರಾಯರು ಮನೆಯಲ್ಲಿಲ್ಲವೆಂದೋ ಊರಲ್ಲಿಲ್ಲವೆಂದೋ ಸಂದರ್ಭೋಚಿತವಾಗಿ ಉತ್ತರ ಹೇಳಿಸಬಹುದು. ಟೆಲಿಫೋನ್ ವ್ಯವಹಾರವಾದರೆ, ಅವರೊಡನೆ ಮಾತಾಡುವವರೆಗೂ ಅವರು ಯಾರೆಂದು ಪತ್ತೆಯಾಗುವುದಿಲ್ಲ.

ಸಾಧಾರಣವಾಗಿ ಕಚೇರಿಯಿಂದ ಮನೆಗೆ ಹೋದಮೇಲೆ ನೀವು ಸ್ವತಂತ್ರರು. ಮತ್ತೆ ಕಚೇರಿಗೆ ಹೋಗುವವರೆಗೂ ಯಾರೂ ನಿಮ್ಮನ್ನು ಕಾಡುವುದಿಲ್ಲ. ಕೆಳಗಿನವರಾಗಲಿ ಮೇಲಿನವರಾಗಲಿ, ನಿಮಗೆ ವರ್ತಮಾನ ಕೊಡಬೇಕಾದರೆ ಚೀಟಿ ಬರೆದುಕೊಟ್ಟು ಯಾರನ್ನಾದರೂ ಓಡಿಸಬೇಕಾಗುತ್ತದೆ. ಅವರಿಗೆ ಅಷ್ಟೊಂದು ಚಟುವಟಿಕೆ ಇರುವುದಿಲ್ಲ—ಅವರ ಸೋಮಾರಿತನ ನಿಮಗೆ ರಕ್ಷೆಯಾಗಿರುತ್ತದೆ. ಆದರೆ ನಿಮ್ಮ ಮನೆಗೆ ಫೋನ್ ಬಂದೊಡನೆ ಈ ಸ್ವಾತಂತ್ರ್ಯ ನಾಶವಾಗುತ್ತದೆ. ನಿಮ್ಮ ಅಸಿಸ್ಟೆಂಟರು ತಾವೇ ನಿರ್ವಹಿಸಬಹುದಾದ ಕೆಲಸದ ವಿಷಯದಲ್ಲೂ ನಿಮ್ಮ ಸಲಹೆ ಕೇಳಿ ಅದರ ಜವಾಬ್ದಾರಿಯನ್ನು ನಿಮ್ಮ ಮೇಲೆ ಹೊರಿಸುತ್ತಾರೆ. "ಹೀಗೇಕೆ ಮಾಡಿದಿರಿ ?" ಎಂದು ನಾಳೆ ಆಕ್ಷೇಪಿಸುವ ಹಕ್ಕು ನಿಮಗೆ ಉಳಿಯುವುದಿಲ್ಲ. ಇತ್ತ ನಿಮ್ಮ ಮೇಲಿನ ಅಧಿಕಾರಿಗಳು ಯಾವಾಗ ಏನು ನೆನಪಿಗೆ ಬಂದರೂ ಆ ಘಳಿಗೆಯಲ್ಲೇ ಟೆಲಿಫೋನಿನಲ್ಲಿ ಆಜ್ಞೆ ಹೊರಡಿಸುತ್ತಾರೆ. ಅರ್ಜೆಂಟ್ ಅಲ್ಲದ ವಿಷಯ, ನಾಳೆ ಮರೆತೇಹೋಗಬಹುದಾದ ವಿಷಯ—ಎಲ್ಲಾ ಅರ್ಜೆಂಟಾಗಿ ಪರಿಣಮಿಸುತ್ತವೆ. ನೀವು ಕಣ್ಣುಮುಚ್ಚಿ ಹಗಲುಗನಸು ಕಾಣುತ್ತಿರಬಹುದು, ಪತ್ತೆದಾರಿ ಕಾದಂಬರಿಯಲ್ಲಿ ಮಗ್ನರಾಗಿರಬಹುದು, ನಲ್ಲೆಯೊಡನೆ ಸಲ್ಲಾಪದಲ್ಲಿರಬಹುದು, ಮಗುವನ್ನು ಆಡಿಸುತ್ತಿರಬಹುದು—ಟೆಲಿಫೋನಿಗೆ ಕರುಣೆಯಿಲ್ಲ. ಒಂದೇ ಸ್ಥಾಯಿಯಲ್ಲಿ, ಒಂದೇ ತಾಳದಲ್ಲಿ, ಹೊರಡುವ ಆ ಎರಡೆರಡು ಮಾತ್ರೆಗಳ ಘೋಷದಲ್ಲಿ ಅಸಹ್ಯವಾದೊಂದು ನಿರ್ಘೃಣತೆಯಿದೆ.

ನಿಮ್ಮ ಆಫೀಸರು ಫೋನ್ ಮಾಡಿದಾಗಲಂತೂ ಘಂಟೆಯ ಧ್ವನಿಯಲ್ಲಿ ಹೊಸದೊಂದು ದರ್ಪವಿದ್ದಂತೆ ತೋರುತ್ತದೆ....ಅದು ಕಲೀಫ ತನ್ನ ಜಾಫರನನ್ನು ಕರೆಯುವ ಧ್ವನಿ. ನೀವು ಕಚೇರಿಯನ್ನು ಬಿಟ್ಟು ಮನೆಗೆ ಬಂದಮೇಲೂ ಗುಲಾಮರಾಗಿಯೇ ಉಳಿಯುತ್ತೀರಿ. ಅಧಿಕಾರಿ, ದೂರದಲ್ಲಿದ್ದ ಮಾತ್ರಕ್ಕೆ ನಿಮ್ಮ "ದೀನ ನಾನು" ಭಾವಕ್ಕೇನೂ ವಿರಾಮ ದೊರೆಯುವುದಿಲ್ಲ. ನನ್ನ ಗುರುತಿನವರೊಬ್ಬರು ತಮ್ಮ ಆಫೀಸರೊಡನೆ ಫೋನಿ

ನಲ್ಲಿ ಮಾತಾಡುವುದನ್ನು ನೋಡಿದ್ದೇನೆ. ಆಗ ಅವರು ಕುಳಿತುಕೊಳ್ಳುವುದು ಕುರ್ಚಿಯ ತುದಿಯಲ್ಲಿ. ಒಂದು ಕೈ ಗ್ರಾಹಿಯನ್ನು ಹಿಡಿದಿದ್ದರೂ ಇನ್ನೊಂದು ಕೈ ತನ್ನನ್ನು ತಾನೇ ಹೊಸಕಿಕೊಳ್ಳುತ್ತಿರುತ್ತದೆ. ಜಿಪುಣ ಹನಿಗಳುಳ್ಳ ಮುಖದಮೇಲೆ ದೇಶಾವಾರದ ನಗೆ ಸುಳಿಯುತ್ತಿರುತ್ತದೆ. ಮಾತು ಮುಗಿದ ಮೇಲೆ ಆಫೀಸರು ತಮ್ಮೆದುರಿಗಿಲ್ಲವೆಂಬುದನ್ನು ಮರೆತು ಆ ಟೆಲಿಫೋನಿಗೇ ಸಲಾಮು ಹೊಡೆಯುತ್ತಾರೆ! ಸ್ವಂತ ಮನೆಯಲ್ಲಿದ್ದರೂ "ಇಲ್ಲಿ ನಾನು ಯಜಮಾನ" ಎಂದುಕೊಳ್ಳುವ ಧೈರ್ಯವಿಲ್ಲ, ಈ ಹಾಳು ಟೆಲಿಫೋನ್ ಮನೆಯಲ್ಲಿದ್ದರೆ.

ಈ ಯಂತ್ರದಿಂದಾಗಬಹುದಾದ ಅನಾಹುತಕ್ಕೆ ಇನ್ನೊಂದು ನಿದರ್ಶನ ಕೊಟ್ಟು ಈ ಮಾತನ್ನು ಮುಗಿಸುತ್ತೇನೆ. ಮುಂದೆ ಹೇಳುವ ಪ್ರಸಂಗ ನಮ್ಮಲ್ಲಿ ಟೆಲಿಫೋನ್ ಯುಗವು ಪ್ರಾರಂಭವಾಗುವುದಕ್ಕಿಂತ ಹಿಂದೆ ನಡೆಯುವುದು ಸಾಧ್ಯವಿರಲಿಲ್ಲ. ಆ ಹಿಂದಿನ ಕಾಲದಲ್ಲಿ ನಮ್ಮ ಹೆಣ್ಣುಮಕ್ಕಳು ಜನಾನಾ ಆವರಣದಿಂದ ಹೊರಗೆ ಬಂದಿರಲಿಲ್ಲ. ಕಾಲೇಜಿನಲ್ಲಿ ಓದಿ 'ಮಧ್ಯಮ ಯುಗ'ದ ರೊಮಾನ್ಸ್ ಕಥೆಗಳ ಪರಿಚಯ ಮಾಡಿಕೊಂಡಿರಲಿಲ್ಲ. ಕನ್ನಡದಲ್ಲಿ ಕಾದಂಬರಿಯ ಬೆಳೆಯೂ ಬಂದಿರಲಿಲ್ಲ. ಆದ್ದರಿಂದ ಗಂಡಸರು ಹೆಂಗಸರ ದಾಸಾನುದಾಸರಾಗಿರಬೇಕು ಎಂಬುದನ್ನು ಇನ್ನೂ ಅರಿಯರು—ಅವರ ವಿದ್ಯಾಭ್ಯಾಸ ತೀರ ಅಪೂರ್ಣವಾಗಿತ್ತು. ಗಂಡನ ತಲೆಯ ಮೇಲೆ ಧಾರೆಯ ದಿನ ಜೀರಿಗೆ ಬೆಲ್ಲವನ್ನು ಸುರಿಯುವವರೆಗೂ ಆತನ ದರ್ಶನವೇ ಆಗುತ್ತಿರಲಿಲ್ಲ. ನಾನು ಹೇಳುವುದು ಈ ಟೆಲಿಫೋನ್—ಪೂರ್ವದ ಮಾತಲ್ಲ, ಸುಮಾರು ೧೯೪೫ರ ಮಾತು.

ನನ್ನ ವಿದ್ಯಾರ್ಥಿಯಾಗಿದ್ದವನೊಬ್ಬ ಯುವಕ ಡಿಗ್ರಿ ಪಡೆದ ಮೇಲೆ ನನ್ನ ಕಚೇರಿಯಲ್ಲೇ ಕೆಲಸಕ್ಕೆ ಸೇರಿದ. ಅವನು ಕಾಲೇಜಿನಲ್ಲಿದ್ದಾಗಲೇ ವಿದ್ಯಾರ್ಥಿನಿಯೊಬ್ಬಳ ಸ್ನೇಹ ಬೆಳೆಸಿದ್ದ. ಆ ಹುಡುಗಿ ಅನುಕೂಲಸ್ಥರ ಮನೆಯವಳು; ತಂದೆ ತಾಯಿಗಳು ನಾಗರಿಕರು; ಇವರಿಬ್ಬರ ಮದುವೆ ಹೆಚ್ಚು ಕಡಿಮೆ ನಿಶ್ಚಯವಾಗಿದ್ದುದರಿಂದ ಅವರು ಸಲಿಗೆಯಿಂದ ವರ್ತಿಸಿದರೆ ಆಕ್ಷೇಪಿಸುತ್ತಿರಲಿಲ್ಲ. ಹುಡುಗಿ ರಮ್ಯ ಕಥೆಗಳನ್ನೂ ಕಾದಂಬರಿಗಳನ್ನೂ ಅರೆದು ಹೊಯ್ದುಕೊಂಡಿದ್ದಳಾದ್ದರಿಂದ ಸರಸಸಲ್ಲಾಪಗಳಲ್ಲಿ ಸಾಕಾದಷ್ಟು ತರಬಿಯತ್ತು ಪಡೆದಿದ್ದಳು. ಮನೆಯಲ್ಲಿ ಫೋನ್ ಇತ್ತು—ಸರಿ, ತನ್ನ ಪ್ರೇಮಿ ಎಲ್ಲಿದ್ದರೆ ಅಲ್ಲಿಗೆ ಫೋನ್ ಮಾಡುವ ಅಭ್ಯಾಸ ಮಾಡಿಕೊಂಡಳು. ಯುವಕನಿಗೂ ಮೊದಮೊದಲು ಇದು ಹಿತವಾಗಿಯೇ ಇದ್ದಿರಬೇಕು. ಆದರೆ

ಯಾವ ಕೆಲಸವೂ ಇಲ್ಲದೆ ದಿನಕ್ಕೆ ಹತ್ತು ಬಾರಿ

"ಹಲ್ಲೊ, ಇಲ್ಲಿ ಮಾತಾಡುವವರು ಯಾರು ಗೊತ್ತಾಯಿತೆ ?"

"............"

"ಹೇಗೆ ಗೊತ್ತಾಗುತ್ತೆ ಹೇಳಿ, ನಾನು ಕಣ್ಣೆದುರಿಗಿಲ್ಲದಿದ್ದರೆ ನನ್ನ ಮರೆತು ಬಿಡುತ್ತೀರಿ, ಗೊತ್ತು."

"............"

"ತಮಾಷೆಯೂ ಇಲ್ಲ, ಏನೂ ಇಲ್ಲ. ನನ್ನ ದನಿ ಪತ್ತೆಯಾಗಲಿಲ್ಲ ನಿಮಗೆ. ನನ್ನ ಮೇಲೆ ಪ್ರೀತಿಯಿದ್ದರಲ್ಲವೆ, ಪತ್ತೆಯಾಗುವುದು !"

"............"

"ನ್ನೋ ಡಾರ್ಲಿಂಗ್, ನ್ನೊ. ನಾನೂ ತಮಾಷೆಗೆ ಹೇಳಿದೆ." ಇತ್ಯಾದಿ ಮಾತುಗಳನ್ನು ಎಲ್ಲರೆದುರಿಗೆ ಕೇಳುವುದು ಕಷ್ಟ. ಆಫೀಸಿನಲ್ಲಿ ಇರುವ ಇತರರಿಗೆ ವಿಷಯ ತಿಳಿಯದಂತೆ ಮಗುಂ ಆಗಿ ಉತ್ತರ ಕೊಡುವುದು ಮತ್ತೂ ಕಷ್ಟ.

ಆಕೆಯೇನೋ ಮನೆಯಿಂದ ಫೋನ್ ಮಾಡುತ್ತಿದ್ದಳು, ಯಾರೂ ಇಲ್ಲದ ಸಮಯವನ್ನು ನೋಡಿ ಮಾತಾಡಬಹುದು. ಒಂದು ವೇಳೆ ತನ್ನ ತಮ್ಮ ಎದುರಿಗಿದ್ದರೂ ಅವನನ್ನು ಅಂಗಡಿಗೆ ಓಡಿಸಬಹುದು. ಆಫೀಸಿನಲ್ಲಿರುವ ಯುವಕನಿಗೆ ಈ ಸೌಲಭ್ಯವೆಲ್ಲಿ ಬಂತು ! ಅವನು ಬಹಳ ಸವಿಯಾದ ಪೀಠಿಕೆ ಹಾಕಿ "ಆಫೀಸಿನಲ್ಲಿರುವಾಗ ಫೋನ್ ಮಾಡಬೇಡ. ನಮ್ಮ ಆಫೀಸರು ಏನಾದರೂ ತಿಳಿದುಕೊಂಡಾರು" ಎಂದು ಸೂಚನೆ ಕೊಟ್ಟ. ಈ ಮಾತು ಅವಳಿಗೆ ರುಚಿಸಲಿಲ್ಲ. ಅವನಿಗೆ ಫೋನ್ ಮಾಡಲು ತನಗಲ್ಲದೆ ಮತ್ತಾರಿಗೆ ಹಕ್ಕು ? ತಾನು, ಮಹಾರಾಣಿ, ಫೋನ್ ಮಾಡಿದಾಗ ಅವನು ಆನಂದತುಂದಿಲನಾಗಿ ಕೃತಜ್ಞತೆ ತೋರಿಸುವ ಬದಲು, 'ಮಾತಾಡಬೇಡ' ಎಂದು ವಿಧಿಸುವುದು ಯಾವ ನ್ಯಾಯ ? ಹಿಂದಿನ ರಮ್ಯಕಥೆಗಳಲ್ಲಿ ಬರುವ 'ನೈಟ್' ಗಳು ಹೀಗೆಯೇ ವರ್ತಿಸುತ್ತಿದ್ದರೆ ? ತಮ್ಮ ಪ್ರೇಯಸಿಯ ಕರವಸ್ತ್ರವನ್ನೋ ಕೈಚೀಲವನ್ನೋ (ಗ್ಲೌ) ಶಿರಸ್ತ್ರಾಣದಲ್ಲಿಟ್ಟುಕೊಂಡು ಅದಕ್ಕಾಗಿ ಪ್ರಾಣವನ್ನಾದರೂ ತೆರಲು ಸಿದ್ಧರಾಗಿದ್ದರಲ್ಲವೆ ? ಈಗಿನ ಕಾಲದ ಕಾದಂಬರಿಗಳ ನಾಯಕರೂ ಸಹ ನಾಯಿಕೆಯರ ಆಜ್ಞಾನುವರ್ತಿಗಳಾಗಿರುವರಲ್ಲವೆ ? ನನತಂಗಿ ಇವರ ಆಫೀಸರು ಹೆಚ್ಚೆ ?—ಹೀಗೆ ಅವಳ ತರ್ಕಸರಣಿ. "ನೀನು ಮಾತಾಡಿದಾಗ ನನ್ನ ಮುಖ ಕೆಂಪೇರುತ್ತೆ. ಆಫೀಸಿನಲ್ಲಿ ಅದನ್ನು ನೋಡಿ ಹಾಸ್ಯಮಾಡುವವರು ಹತ್ತು ಜನ ಇದ್ದಾರೆ, ಬೇಡ" ಎಂದು

ಎಷ್ಟು ಬಗೆ ಹೇಳಿದರೂ ಪ್ರಯೋಜನವಾಗಲಿಲ್ಲ.

ಅವನು ಉಪಯೋಗಿಸುವ ಮಾತುಗಳು ಬರಬರುತ್ತಾ ಕಠಿನ ವಾದವು. ಪದಗಳು ಪ್ರೇಮಸೂಚಕವೇ ಆದರೂ ಬೇಸರದ ಧ್ವನಿಯನ್ನು ಬಚ್ಚಿಡಲಾಗಲಿಲ್ಲ. ಆಕೆ ಒಂದೆರಡು ಬಾರಿ ತುಟಿ ಬಿರುಕಿಸಿದಳು; ಕಣ್ಣಿನಲ್ಲಿ ನೀರು ಮಿಸುಗಿಸಿದಳು; "ನನ್ನ ಮುಖ ಕಂಡರಾಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಡಬಾರಧೆ!" ಎಂದು ಆಕ್ಷೇಪಿಸಿದಳು. ಫೋನ್ ಮಾಡುವುದನ್ನು ಮಾತ್ರ ಬಿಡಲಿಲ್ಲ. ಯುವಕನ ತಾಳ್ಮೆ ತೀರ ಹದಗೆಟ್ಟಿತು. ಕೊನೆಗೊಂದು ದಿನ ಆಕೆಯಿಂದ ಫೋನಿಗೆ ಕರೆ ಬಂದಾಗ ರೊಚ್ಚಿಗೆದ್ದು ಕೊನೆಯ ಮಾತಾಗಿ "ಷಟ್‌ಅಪ್! ರಿಸೀವರ್ ಕೆಳಕ್ಕೆ ಬಡಿ!" ಎಂದು ಕಿರಿಚಿದ. ಮದುವೆಯಾದ ಮೇಲೆ ಇಂಥ ಮಾತು ಸಾಧ್ಯ; ಇಂಥ ಮಾತಾದ ಮೇಲೆ ಮದುವೆ ಸಾಧ್ಯವೆ! ಯುವಕನಿಗೆ "ಈ ಸಂಬಂಧ ಕಡಿದುಬಿತ್ತು" ಎನ್ನಿಸಿತು. ಆದರೂ 'ಷಿವಲ್ರಿ' ಆತನನ್ನು ಸುಮ್ಮನಿರಗೊಡಲಿಲ್ಲ. ತನ್ನ ನಡತೆ ತೀರ ಅನಾಗರಿಕವಾಯಿತೆಂದು ತೋರಿತು. ಮಾರನೆಯ ದಿನ ಕ್ಷಮಾಯಾಚನೆಯ ಭಾಷಣವನ್ನು ಸಿದ್ಧಮಾಡಿಕೊಂಡು ಆಕೆಯ ಮನೆಗೆ ಹೋಗಿ ತಾನು ಬಂದಿದ್ದೇನೆಂದು ಹೇಳಿಕಳಿಸಿದ. ಯುವತಿ ಮಹಡಿಯಿಂದ ಕೆಳಗಿಳಿಯಲೇ ಇಲ್ಲ. "ಅವನಿಗೆ ಎರಡಾಣೆ ಕೊಟ್ಟು ಕಳಿಸಿಬಿಡು; ನನಗೆ ಬೀದಿಯ ಭಿಕ್ಷುಕರನ್ನು ಕಂಡರೆ ಆಗದೆಂದು ಹೇಳು," ಎಂದು ಸೇವಕನಿಗೆ ಅಪ್ಪಣೆ ಮಾಡಿದಳು. ಯುವಕನೇನೋ ತಾತ್ಕಾಲಿಕವಾಗಿ ಅವಮಾನಗೊಂಡರೂ "ಕ್ಷಮೆಬೇಡುವ ಪ್ರಯತ್ನವನ್ನೂ ಮಾಡಿದ್ದಾಯಿತು, ಪೀಡೆಯೂ ಕಳೆಯಿತು" ಎಂದು ಸಂತೋಷಪಟ್ಟಿರಬಹುದು. ಆದರೆ ಈ ಸಮಸ್ಯೆಯನ್ನು ಯುವತಿಯ ದೃಷ್ಟಿಯಿಂದಲೂ ಪರಿಶೀಲಿಸಬೇಕಲ್ಲವೆ? ಯುವಕನಿಗೆ ಪ್ರೇಮವು ಜೀವನದ ನಾಲ್ಕೆಂಟು ಹವ್ಯಾಸಗಳಲ್ಲೊಂದು ಮಾತ್ರ; ಯುವತಿಗೆ ಜೀವನವೆಲ್ಲಾ ಅದೇ. ಆಕೆ ಒಂದು ತಿಂಗಳ ಪರ್ಯಂತ ಯಾರೊಡನೆಯೂ ಮಾತಾಡಲಿಲ್ಲವಂತೆ. ಅತ್ತು ಅತ್ತು ಕಣ್ಣೆಲ್ಲಾ ಗುಳಿಬಿದ್ದಿತಂತೆ.

ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಿಸಬೇಕೆಂದು ದೊಡ್ಡವರು ಹೇಳುತ್ತಾರೆ. ಈ ಟೆಲಿಫೋನ್ ಮಾಡಿದ ಕೆಲಸವನ್ನು ನೋಡಿ! ಅದು ಮನೆಯಲ್ಲಿಲ್ಲದಿದ್ದರೆ ಈ ಪ್ರೇಮಿಗಳಿಬ್ಬರೂ ಹಿರಿಯರ ಆಶೀರ್ವಾದ ಬಲದಿಂದ ಇಂದ್ರ ಇದ್ರಾಣಿಯರಂತೆ, ಆತ್ರಿ ಅನುಸೂಯೆಯರಂತೆ, ನೂರು ಕಾಲ ಸುಖವಾಗಿ ಬಾಳುತ್ತಿದ್ದರೋ ಏನೋ.

ಗಿಳಿಯನ್ನು ಸಾಕಿದರೆ ಅದು ಸಾಕಿದವರ ಹಾನಿಯನ್ನೇ ಕೋರುತ್ತ ದಂತೆ. ಟೆಲಿಫೋನ್ ಯಂತ್ರವನ್ನು ಸಾಕಿದರೂ ಹಾಗೆಯೇ. ಅದನ್ನು ಮನೆಗೆ ಸೇರಿಸಬೇಡಿ. ಎದುರು ಮನೆಯವರು ಅದನ್ನು ತಂದಿಟ್ಟುಕೊಳ್ಳು ವಂತೆ ಉತ್ತೇಜನ ಕೊಡಿ. ಅದರ ತೊಂದರೆಯೆಲ್ಲಾ ಅವರಿಗೆ ; ಪ್ರಯೋಜನ ಮಾತ್ರ ನಿಮಗೆ.

## ಸಾಹಿತಿಯ ಚಹರೆ

ಯಾರಾದರೂ ತರ್ಜನಿಯಿಂದ ನನ್ನನ್ನು ತಿವಿದು, "ನೀನು ಒಂದೆರಡು ಪುಸ್ತಕಗಳನ್ನು ಅಚ್ಚು ಹಾಕಿಸಿದ್ದುಂಟೋ ಇಲ್ಲವೊ ? ಸತ್ಯವಾಗಿ ಹೇಳು" ಎಂದು ಗದರಿಸಿದರೆ, "ಮಾಡಿದ್ದುಂಟು, ಅಪರಾಧವಾಯಿತು" ಎಂದು ಒಪ್ಪಬೇಕಾಗುತ್ತದೆ. ಆದರೂ ಸಾಹಿತಿ ಎಂಬ ಹೆಸರಿಗೆ ಬೇಕಾದ ಅರ್ಹತೆ ಅಧಿಕಾರಗಳನ್ನು ಪಡೆದಿದ್ದೇನೆಂದು ಹೇಳಲಾರೆ. ತೀರ ಹೆಚ್ಚೆಂದರೆ, ಸಾಹಿತಿಗಳು ಬರೆದ ಸೂತ್ರಗಳಿಗೆ ನಾನು ವ್ಯಾಖ್ಯಾನ ಹೇಳುವ ಪ್ರಾಣಿ ಎಂದುಕೊಳ್ಳಬಹುದೇನೊ—ಆ ವ್ಯಾಖ್ಯಾನಗಳನ್ನೂ ಬರೆದಿಡುವ ಸಾಹಸಕ್ಕೆ ಹೋದವನಲ್ಲ. ಸಾಹಿತ್ಯಕ್ಕೆ ಉಚಿತವಾದ ಆಲಂಕಾರಿಕ ಭಾಷೆಯನ್ನು ಉಪಯೋಗಿಸಬಹುದಾದರೆ, ನಾನು ಸರಸ್ವತೀಪುತ್ರರೆಂದು ಹೆಸರು ಪಡೆದಿರುವವರ ಹಿಂದೆ ಓಡಾಡುವ ಓಲೆಕಾರ ; ಸಾಹಿತ್ಯಕಲ್ಪವೃಕ್ಷದ ಮೇಲೆ ಆಶ್ರಯ ಪಡೆದು ಬೆಳೆಯುತ್ತಿರುವ ಬಂದಳಿಕೆ ; ಸಾಹಿತ್ಯ ಚಕ್ರವರ್ತಿಯ ಒಡ್ಡೋಲಗದ ದ್ವಾರಪ್ರದೇಶದಲ್ಲಿ ನಿಂತಿರುವ ಚಪ್ರಾಸಿ. ಈಗಲೇನೋ ನನಗೆ ಈ ನಮ್ರವಾದ ಸ್ಥಾನ ಅನುಕೂಲವಾಗಿಯೇ ಪರಿಣಮಿಸಿದೆ. ಯಾರಿಗೇ ಆಗಲಿ, ಆತ್ಮಪರೀಕ್ಷೆ ಕಷ್ಟಸಾಧ್ಯವಾದ ಕೆಲಸ. ಸಾಹಿತಿಗಳೂ ಈ ಮಾತಿಗೆ ಹೊರತಲ್ಲ. ಆದ್ದರಿಂದ ಸಾಹಿತಿಯ ವಿಷಯವಾಗಿ ಲೇಖನ ಬರೆಯುವವನು ಸ್ವತಃ ಸಾಹಿತಿಯಲ್ಲದಿದ್ದರೇ ಒಳ್ಳೆಯದು.

ಸಾಹಿತ್ಯೋದ್ಯೋಗದ ವಿಷಯವಾಗಿ ಬರೆಯಬೇಕೆಂದು ನನಗೆ ಆಜ್ಞಾಪಿಸಿರುವ ಜನರೇನೋ ನಾನು ಸಾಹಿತಿಯೆಂದೇ ತಿಳಿದಿರಬಹುದು. ಅಥವಾ ಸಾಹಿತಿಗೂ ಸಾಹಿತ್ಯೋದ್ಯೋಗಿಗೂ ಭೇದವನ್ನು ಕಲ್ಪಿಸಿ ನನ್ನನ್ನು ಆ ಎರಡನೆಯ ವರ್ಗಕ್ಕೆ ಸೇರಿಸಿರಬಹುದು. "ಸಾಹಿತ್ಯವೆನ್ನುವುದು ಇವನಿಗೊಂದು ವೃತ್ತಿ, ಇವನು ಕೇವಲ ಹಣದಾಸೆಗಾಗಿ, ಕುರುಡುಕಾಂಚಾಣಕ್ಕಾಗಿ, ಬರೆಯುವವನು" ಎಂಬ ತಿರಸ್ಕಾರ ಅವರ ಅಪ್ಪಣೆಯಲ್ಲಿ ಅಡಗಿರಬಹುದು. ನಾನಂತೂ ಅವಮಾನವಾದರೆ ಆಗಲೆಂದು ಅವರು ವಹಿಸಿದ ಕೆಲಸವನ್ನು ಒಪ್ಪಿಕೊಂಡಿದ್ದೇನೆ. ಈ ಲೇಖನಕ್ಕೆ ಪ್ರತಿಫಲವಾಗಿ ಅವರೇನಾದರೂ ಚೆಕ್ಕು ಕೊಟ್ಟರೆ ಅದನ್ನು ಸಂಕೋಚವೇನೂ ಇಲ್ಲದೆ ಜೇಬಿಗೆ ಹಾಕಿಕೊಳ್ಳುತ್ತೇನೆ.

ಹಣದ ಮಾತು ಮೊದಲೇ ಬಂದದ್ದು ಅಸಂಬದ್ಧವೇನಲ್ಲ. ಸಾಹಿತ್ಯ

ಹೊರಹೊಮ್ಮುವುದೆಂದರೆ ಜ್ವಾಲಾಮುಖಿಯಿಂದ ಲಾವಾ ಹೊರಡುವಂತೆ; ಚಿಲುಮೆಯಿಂದ ನೀರು ಚಿಗಿದಂತೆ; ಮೊಗ್ಗು ಅರಳಿ ಹೂವಾಗುವಂತೆ— ಇತ್ಯಾದಿ ನೂರು ಸಾಮ್ಯಗಳನ್ನು ನಾವು ದಿನ ದಿನವೂ ಕೇಳುತ್ತಿರುತ್ತೇವೆ. ಮೇಲೆ ಹೇಳಿದ ಕರ್ಮಗಳೊಂದೂ ಹಣಕ್ಕೋಸ್ಕರ ನಡೆಯುವುದಲ್ಲವಷ್ಟೆ. ಹಾಗೆಯೇ "ಸಾಹಿತಿಗಳು ಹಣವನ್ನು ನಿಕೃಷ್ಟವಾಗಿ ಕಾಣಬೇಕು; ತಮ್ಮ ಧ್ವಜದ ಮೇಲೆ ಭಿಕ್ಷಾಪಾತ್ರೆಯನ್ನು ಲಾಂಛನವಾಗಿಟ್ಟುಕೊಳ್ಳಬೇಕು" ಎಂಬ ಭಾವನೆ ಬಹು ದಿನಗಳಿಂದ ನಮ್ಮಲ್ಲಿ ಬೆಳೆದು ಬಂದಿದೆ. ಆ ಭಿಕ್ಷಾಪಾತ್ರೆಯೂ ದಿನದಿನದ ಅನ್ನಕ್ಕಾಗಿ ; ಅದಕ್ಕಿಂತ ಹೆಚ್ಚಿನದನ್ನು ಅವರು ಬೇಡಬಾರದು.

ಭೋಜರಾಜನ ಆಸ್ಥಾನಕ್ಕೆ ಅಕ್ಷರಲಕ್ಷದ ತಿರುಪೆಗಾಗಿ ಒಂದವರೆಲ್ಲಾ ಆಸೆಬಡಕರಾದ ಕವಿಗಳೇ ಅಲ್ಲವೆ, ಎನ್ನಬಹುದು. ನಿಜವಾಗಿ ನೋಡಿದರೆ, ಹೀಗೆ ಹಣದ ಆಸೆಯಿಟ್ಟುಕೊಂಡು ಬಂದವರು ತಾವು ಕವಿಗಳೆಂಬ ಸೋಗು ಹಾಕಿದವರೇ ಹೊರತು ವಾಸ್ತವವಾಗಿ ಕವಿಗಳಲ್ಲ. ಅವರು "ಭೋಜನಂ ದೇಹಿ ರಾಜೇಂದ್ರ, ಘೃತಸೂಪಸಮನ್ವಿತಂ". ಎಂದು ಮಾತ್ರ ಹೇಳಬಲ್ಲವರು. 'ಮಾಹಿಷಂಚ ಶರಚ್ಚಂದ್ರಚಂದ್ರಿಕಾಧವಳಂ ದಧಿ" ಎಂದು ಶ್ಲೋಕವನ್ನು ಪೂರ್ಣಮಾಡಬೇಕಾದರೆ ಕಾಳಿದಾಸನೇ ಬರಬೇಕು. ಕಾಳಿದಾಸನೂ ಅಕ್ಷರಲಕ್ಷವನ್ನು ಪಡೆದಿರಬಹುದು. ಆದರೆ ಅವನು ಆ ಹಣವನ್ನು ಬೇಡಿದನೆ ಎಂಬುದೇ ಇಲ್ಲಿ ಮುಖ್ಯವಾದ ಪ್ರಶ್ನೆ. ಬೇಡಿದನೆನ್ನುವುದಕ್ಕೆ ಯಾವ ಆಧಾರವೂ ದೊರೆತಿಲ್ಲ. ಹಣ, ಅದರಿಂದ ದೊರೆಯುವ ಭೋಗಜೀವನ, ರಾಜಾಸ್ಥಾನದ ವೈಭವ—ಇವುಗಳ ಗೀಳೇನೂ ಅವನಿಗೆ ಹಿಡಿದಿರಲಿಲ್ಲ. ಅವನು ಸೃಷ್ಟಿಸಿದ ವ್ಯಕ್ತಿಗಳ ಒಲವು ಆಶ್ರಮ ಜೀವನದ ಕಡೆಗೆ ಇದ್ದಂತೆ ತೋರುತ್ತದೆ. ದುಷ್ಯಂತನು ಕಣ್ವರ ಆಶ್ರಮದ ಹತ್ತಿರಕ್ಕೆ ಬಂದಾಗ "ಶಾಂತಮಿದಮಾಶ್ರಮಪದಂ" ಎನ್ನುತ್ತಾನೆ. ಶಾರ್ಙ್ಗರವನಿಗೆ ರಾಜಾಸ್ಥಾನ "ಹುತವಹಪರೀತಂ ಗೃಹಮಿವ" ಕಂಡಿತಂತೆ. ಇದನ್ನೆಲ್ಲಾ ನೋಡಿದರೆ ಕಾಳಿದಾಸನಿಗೆ ಹಣ ತಾನಾಗಿಯೇ ಬಂದಿತೇ ಹೊರತು ಅವನು ಅದಕ್ಕಾಗಿ ಹಾತೊರೆಯಲಿಲ್ಲ ಎನ್ನಬಹುದಲ್ಲವೆ ?

ಈ ಬಗೆಯ ವಾದವನ್ನೆಲ್ಲಾ ಒಪ್ಪೋಣ. ಆದರೆ ಕಾಳಿದಾಸ ಹಣವನ್ನೂ ರಾಜಾಸ್ಥಾನವನ್ನೂ ಬಿಟ್ಟುಕೊಟ್ಟು ಆಶ್ರಮಕ್ಕೆ ತೆರಳಿದಂತೆ ತೋರುವುದಿಲ್ಲ. "ಹಣವನ್ನು ಹುಡುಕಿಕೊಂಡು ಹೋಗಲಿಲ್ಲ" ಎಂದರೆ, "ಆಶ್ರಮವನ್ನೂ ಹುಡುಕಿಕೊಂಡು ಹೋಗಲಿಲ್ಲ" ಎಂಬ ಉತ್ತರ ಕೊಡಬಹುದು.

ಒಂದರಷ್ಟೇ ಮತ್ತೊಂದೂ ನಿಜ. ಅವನು ರಾಜಾಶ್ರಯದಲ್ಲಿ ಬೆಳೆದು 'ಚಂದ್ರಿಕಾಧೌತ ಹರ್ಮ್ಯ"ದಲ್ಲಿ ಹಂಸತೂಲಿಕಾತಲ್ಪದ ಮೇಲೆ ಮಲಗಿ ಸುಗಿಲುಗಳ ಆಟವನ್ನು ನೋಡುತ್ತಾ ಹಾಗೆಯೇ ನಿಮೀಲಿತನೇತ್ರನಾಗಿ ಆಶ್ರಮಗಳ ಕನಸು ಕಂಡಿರಬೇಕು. ಅದಕ್ಕೆ ಬದಲಾಗಿ ಆಶ್ರಮದಲ್ಲೇ ಬೆಳೆದು ದರ್ಭಾಸ್ತರಣದ ಮೇಲೆ ಮಲಗಬೇಕಾದ ಪ್ರಸಂಗ ಬಂದಿದ್ದರೆ ಬಹುಶಃ ಹಂಸತೂಲಿಕಾತಲ್ಪದ ಕನಸು ಕಾಣುತ್ತಿದ್ದನೇನೊ.

ನನಗೆ ತಿಳಿದ ಮಟ್ಟಿಗೆ ಸಾಹಿತಿಗಳು ಯಾರೂ ಹಣ ಬೇಡ ಎನ್ನುವುದಿಲ್ಲ. ಅವರ ಮೇಲೆ ಸುವರ್ಣವೃಷ್ಟಿಯಾಗಿ ಅದರಿಂದ ಅವರ ಸತ್ವಪರೀಕ್ಷೆಯಾಗುವ ಸಮಯ ಬಂದರೆ ಅದನ್ನು ಧೈರ್ಯದಿಂದ ಎದುರಿಸಲು ಸಿದ್ಧರಾಗಿದ್ದಾರೆ. ಅವರು ಕದನ್ನವೇ ಬೇಕೆಂದು ಹಟ ಹಿಡಿದಿಲ್ಲ. "ತಿನ್ನುವ ಹಾಗಿದ್ದರೆ ಮೃಷ್ಟಾನ್ನವನ್ನು ತಿನ್ನು, ಇಲ್ಲದಿದ್ದರೆ ತೊಲಗು" ಎಂದು ಹೇಳಿದರೆ ಹೇಗೋ ಸೇರಿಸಿಕೊಂಡು ಅದನ್ನೇ ತಿನ್ನುತ್ತಾರೆ. ಅವರ ಸಂಕಟ ಮೃಷ್ಟಾನ್ನವನ್ನು ತಿನ್ನುವುದು ಹೇಗೆ ಎಂದಲ್ಲ; ಕದನ್ನವೂ ಸಿಕ್ಕುವುದಿಲ್ಲವಲ್ಲ ಎಂದು. ದೈವದತ್ತವಾದ ಪ್ರತಿಭೆಯನ್ನು ಕುರುಡು ಕಾಂಚಾಣಕ್ಕಾಗಿ ಮಾರಿಕೊಳ್ಳಬಾರದೆಂದು ವೇದಾಂತ ಹೇಳುವವರು ಸಾಹಿತಿಗಳಲ್ಲ, ಇತರರು. ಅಥವಾ ಸಾಹಿತಿಗಳು ಹಾಗೆ ಹೇಳಿದರೂ ಅದು ಅಭಾವವೈರಾಗ್ಯ. ಬಾಕ್ಸ್ ಆಫೀಸಿನಲ್ಲಿ ಹಣ ಎಷ್ಟು ಕೂಡಿತೆಂದು ಷೇಕ್ಸ್‌ಪಿಯರ್ ಲೆಕ್ಕ ಇಡುತ್ತಿದ್ದನಂತೆ. ಹಣದ ಜೊತೆಗೆ ದೊಡ್ಡಸ್ತಿಕೆಯ ಲಾಂಛನದ ಮೇಲೂ ಅವನಿಗೆ ವ್ಯಾಮೋಹವಿತ್ತಂತೆ. ಡೆಮೋಕ್ರಸಿಯ ಭಕ್ತರಾದ ಇಂದಿನ ಜನ ಅವನಿಗೆ ಧಿಕ್ಕಾರ ಹಾಕಿದರೆ ಆಶ್ಚರ್ಯವೇನಿಲ್ಲ.

ಈ ಪ್ರಪಂಚವು ಸಾಹಿತಿಗೆ ಕನಕಾಭಿಷೇಕ ಮಾಡಲು ಧಾವಿಸಿ ಬಂದು ಕ್ಯೂ ನಿಲ್ಲುವುದಿಲ್ಲ. ಅವನು ಸಾಯುವವರೆಗೂ ಕಾದಿದ್ದು ಸತ್ತಮೇಲೆ ಅವನ ಗೋರಿಗೆ ಪುಷ್ಪಾಂಜಲಿಯನ್ನರ್ಪಿಸುತ್ತದೆ.

ಹೋಮರನು ಬದುಕಿದ್ದ—
ಐವತ್ತು ನಗರಗಳ ಬೀದಿಬೀದಿಗಳಲ್ಲಿ
ತಂಗೂಳ ತಿರಿದು ತಿಂದು.
ಹೋಮರನು ಸತ್ತಾಯ್ತು—
ಐವತ್ತು ನಗರಗಳು ಸ್ಪರ್ಧೆಯನು ಹೂಡಿದವು,
'ನಮ್ಮವನು ಹೋಮರ್' ಎಂದು*

* ಇಂಗ್ಲಿಷಿನ ದ್ವಿಪದಿಯೊಂದರ ಭಾವಾನುವಾದ. ದ್ವಿಪದಿಯನ್ನು ಬರೆದ ಕವಿಯ

ಬೆರ್ನಾರ್ಡ್‌ಷಾ ಲಕ್ಷಾಂತರ ಪೌಂಡುಗಳ ಆಸ್ತಿಯನ್ನು ಬಿಟ್ಟನಂತೆ. ಆದರೆ ಅಂಥವರು ಬಹಳ ವಿರಳ. ಲೇಖಕರಿಗೂ ಇತರ ಕಲೆಗಾರರಿಗೂ ಬಡತನ ತಲೆಗೆ ಕಟ್ಟಿದ್ದು.

ಆದರೆ ಅದೇನೂ ಅವರು ಆಸೆಪಟ್ಟು ಪಡೆದ ಬಡತನವಲ್ಲ. ಅದು ಅನಿವಾರ್ಯವೆಂದ ಮೇಲೆ ಅದನ್ನೇ ಒಂದು ಅಗ್ಗಳಿಕೆಯಾಗಿ ಮಾರ್ಪಡಿಸಿ ಕೊಳ್ಳುವುದು ಮಾನವನ ಸ್ವಭಾವಕ್ಕೆ ಬಂದದ್ದು. ಆದ್ದರಿಂದಲೇ ಕೆಲವು ಲೇಖಕರೂ ಚಿತ್ರಗಾರರೂ ಶಿಲ್ಪಿಗಳೂ ತಿಂಗಳಿಗೊಂದು ಸಾರಿ ಕ್ಷೌರಮಾಡಿ ಕೊಳ್ಳುತ್ತಾರೆ; ಇಲ್ಲವೆ ಗಡ್ಡವನ್ನು ಬೆಳಸುತ್ತಾರೆ; ಕಸಪೊರಕೆಯ ಪರಿಚಯವೇ ಇಲ್ಲದ ಕೊಠಡಿಗಳಲ್ಲಿ ವಾಸಮಾಡುತ್ತಾರೆ; ಮಲಿನ ವಸ್ತ್ರಗಳನ್ನು ಧರಿಸುತ್ತಾರೆ. ಈ ಬಗೆಯ ಜೀವನ ಕಲೆಗಾರಿಕೆಯ ಹೆಗ್ಗುರುತು ಎಂದು ಭಾವಿಸುವಂತಾಗಿದೆ. ನಿಜವಾಗಿ ನೋಡಿದರೆ ಈ ಅಭ್ಯಾಸಗಳು ಪ್ರಾರಂಭವಾದದ್ದು ಬಡತನದ ಪರಿಣಾಮವಾಗಿ. ಅಂತೂ ಸಾಹಿತಿಯು ಚಹರೆಪಟ್ಟಿ ಬರೆಯಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ.

ಇತರ ದೇಶಗಳಲ್ಲಿ ಎರಡು ಬಗೆಯ ಸಾಹಿತಿಗಳಿದ್ದಾರೆ. ಮೊದಲ ಬಗೆಯವರು ಜನರಿಗೆ ಜ್ಞಾನದಾನಮಾಡಲು ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಮುಂತಾದುವನ್ನು ಕುರಿತು ಬರೆಯುವವರು. ಇವರಿಗೆ ನಮ್ಮಲ್ಲಿ ಅಷ್ಟೇನೂ ಪುರಸ್ಕಾರ ದೊರೆತಿಲ್ಲ—ಸಾಹಿತಿಗಳೆಂಬ ಹೆಸರು ಅವರಿಗೆ ಸಲ್ಲುತ್ತದೆಯೇ ಎಂಬ ವಿಷಯವೂ ಇನ್ನೂ ಚರ್ಚಾಸ್ಪದವಾಗಿಯೇ ಉಳಿದಿದೆ. ಇನ್ನೊಂದು ಬಗೆಯವರು ಶುದ್ಧಸಾಹಿತ್ಯವನ್ನು, ಅಂದರೆ ಕಥೆ, ಕಾದಂಬರಿ, ಕವನ ಮುಂತಾದುವನ್ನು, ಬರೆಯುವವರು. ಇವರು ತಾವು ಬರೆದ ಕೃತಿಗಳನ್ನು ಕೇವಲ ಬರೆವಣಿಗೆಯೆಂದು ಭಾವಿಸುವುದಿಲ್ಲ; ಬ್ರಹ್ಮ ಸೃಷ್ಟಿಯಂತೆ ಅವೂ ಒಂದು ಬಗೆಯ ಸೃಷ್ಟಿಯೆನ್ನುತ್ತಾರೆ. (ವಿಚಾರ ಸಾಹಿತ್ಯವು ಶುಷ್ಕವಾದ ವಿಷಯನಿರೂಪಣೆ; ಇದಾದರೋ ಸೃಷ್ಟಿಸಾಹಿತ್ಯ. ನಮ್ಮ ಜನರಿಗೆ ವಿಚಾರಸಾಹಿತ್ಯದಲ್ಲಿ ಆಸಕ್ತಿಯಿಲ್ಲ.) ಇಲ್ಲಿಯ ಸಾಹಿತಿಗಳು ಜನಸಾಮಾನ್ಯದ ನಾಡಿ ಹಿಡಿದು ಅವರಿಗೆ ಪಥ್ಯವಾದದ್ದೇನು ಎಂದು ಕಂಡುಹಿಡಿದಿದ್ದಾರೆ. ಆದ್ದರಿಂದ ಅವರು ವಿಚಾರಸಾಹಿತ್ಯದ ಗೊಡವೆಗೇ ಹೋಗದೆ, ನೇರವಾಗಿ ಸೃಷ್ಟಿಸಾಹಿತ್ಯಕ್ಕೇ ಎರಗುತ್ತಾರೆ. (ಸಾಹಿತ್ಯ ಕ್ಷೇತ್ರ ವಲ್ಲಿ ಬಂಜರು ಬಿದ್ದಿರುವ ಪ್ರದೇಶಗಳನ್ನು ಉಳುಮೆ ಮಾಡಿ, ತಮ್ಮ ಕೃತಿಗಳನ್ನು ನೆಟ್ಟು, ಅದನ್ನು ನಂದನವನವನ್ನಾಗಿ ಮಾರ್ಪಡಿಸಲು ಹೊರಟ ಈ

ಹೆಸರು ನೆನಪಿಲ್ಲ. ಇಂಗ್ಲಿಷ್ ಕವನದ ಪದಗಳೂ ಚೆನ್ನಾಗಿ ನೆನಪಿಲ್ಲ.

ಜನರೆಲ್ಲರ ಚಹರೆಯೂ ಒಂದೇ ಎಂದು ಹೇಳಲಾಗುವುದಿಲ್ಲ.) ಅವರನ್ನು ಮೂರು ಪಂಗಡಗಳಾಗಿ ವಿಂಗಡಿಸಬಹುದು.

ಸುಮಾರು 60-70 ವರ್ಷಗಳ ಕೆಳಗೆ ಸಾಹಿತ್ಯ ಸಾಮ್ರಾಜ್ಯದಲ್ಲಿ ಏಕಾಧಿಪತ್ಯ ಮಾಡುತ್ತಿದ್ದ ಮೊದಲನೆಯ ಗುಂಪಿನವರನ್ನು ಶಾಲುಸಾಹಿತಿಗಳೆಂದು ಕರೆಯಬಹುದು. ಅವರ ವೇಷಭೂಷಣಗಳಲ್ಲಿ ಶಾಲೇ ಮುಖ್ಯವಾದ ಅಂಶ. ಅವರಿಗೆ ಆಗದವರು "ಶಾಲು ಹೊದ್ದವನು ಸಾಹಿತಿ ; ತಲೆಗೊಂದು ಶಾಲು ಸುತ್ತಿದವನು ಉದ್ದಾಮಸಾಹಿತಿ; ಶಾಲೂಮಾತ್ರೇಣ ಪಂಡಿತಃ" ಇತ್ಯಾದಿ ಕೊಂಕು ಮಾತುಗಳನ್ನಾಡಿ ಅವರನ್ನು ಹೀಯಾಳಿಸುವುದುಂಟು. ಎಲ್ಲ ಸಾಹಿತಿಗಳಂತೆ ಇವರೂ ಬಡವರೇ. ಆದರೆ ಬಡತನವೆಷ್ಟೇ ಇರಲಿ, ಹೊದ್ದ ಶಾಲು ಎಷ್ಟೇ ಹಳೆಯದಾಗಿರಲಿ, ನಸ್ಯದ ಡಬ್ಬಿ ಬಿಲ್ವದ ಬುರುಡೆಯೇ ಆಗಿರಲಿ, ಅವರು ವಸಿಷ್ಠವಿಶ್ವಾಮಿತ್ರರ, ಕಾಳಿದಾಸ ಭವಭೂತಿಗಳ ಕೀರ್ತಿಗೂ ಪ್ರತಿಷ್ಠೆಗೂ ಉತ್ತರಾಧಿಕಾರಿಗಳು. ಅಂದ ಮೇಲೆ ಅವರು ವಿಶ್ವಕ್ಕೇ ಆಶೀರ್ವಾದ ಮಾಡುವ ಹಕ್ಕುಳ್ಳವರು. ಈ ಸ್ಥಾನದ ಗೌರವವನ್ನು ಅವರು ದರ್ಪದಿಂದಲೂ ಆತ್ಮಾಭಿಮಾನದಿಂದಲೂ ಕಾಪಾಡಿಕೊಂಡು ಬಂದರು. ಇದನ್ನು ಮರೆತು ಅವಿನಯದಿಂದ ನಡೆದುಕೊಂಡ ಯುವಕರಿಗೆ, "ಇಲ್ಲಿ ಬಾ, ಪ್ರವರ ಹೇಳು. ನಮಸ್ಕಾರ ಮಾಡಿ ಆಶೀರ್ವಾದ ತೆಗೆದುಕೋ, ಶ್ರೇಯಸ್ಸನ್ನು ಕಳೆದುಕೊಳ್ಳಬೇಡ" ಎಂದು ಅವರೇ ಎಚ್ಚರಿಕೆ ಕೊಡುತ್ತಿದ್ದರು. ಅವರಲ್ಲೊಬ್ಬರು ಒಂದು ನಾಟಕ ಬರೆದು ಹಿಂದಿನ ನಾಟಕಗಳ ಗುಣವಿಶೇಷಗಳನ್ನೆಲ್ಲಾ ಗಂಟು ಕಟ್ಟಿ ಅದರಲ್ಲಿಟ್ಟಿದ್ದರಂತೆ. ಶಾಕುಂತಲವನ್ನು ಪಠ್ಯಪುಸ್ತಕವನ್ನಾಗಿ ಗೊತ್ತು ಮಾಡಿದ್ದರೂ ಇವರು ಅದಕ್ಕೆ ಬದಲಾಗಿ ತಮ್ಮ ನಾಟಕವನ್ನೇ ಪಾಠ ಹೇಳಿದರು. ನವರಸಗಳನ್ನೂ ಒಳಗೊಂಡ ತಮ್ಮ ನಾಟಕ ಎದುರಿಗಿರುವಾಗ ಒಂದೇ ಪ್ರಧಾನ ರಸವುಳ್ಳ ಶಾಕುಂತಲವನ್ನು ಬೋಧಿಸಿದರೆ ವಿದ್ಯಾರ್ಥಿಗಳಿಗೆ ನಷ್ಟ ಎಂದು ಅವರ ಪ್ರಾಮಾಣಿಕವಾದ ತರ್ಕ. ಇದು ಹೆಮ್ಮೆಯ ಮಾತಲ್ಲ. ಅವರು ತಮ್ಮ ನಾಟಕವನ್ನೂ ಶಾಕುಂತಲವನ್ನೂ ತೂಗಿ ನೋಡಿದರು ; ಶಾಕುಂತಲ ಹಗುರವಾಗಿ ಕಂಡಿತು. ತಪ್ಪೇನಾದರೂ ಇದ್ದರೆ ಅದು ತಕ್ಕಡಿಯದು.

ಶಾಲುಸಾಹಿತಿಗಳು ಒಂದು ದೊಡ್ಡ ಅಪರಾಧ ಮಾಡಿದರೆಂಬ ಪ್ರತೀತಿಯಿದೆ. ಅವರು ಸ್ವಂತ ತಾಯಿಯ ವಿಷಯದಲ್ಲಿ ಅನಾದರದಿಂದ ವರ್ತಿಸಿ ಆಕೆಯನ್ನು ಸಂಸ್ಕೃತದ ಮನೆಯಲ್ಲಿ ಊಳಿಗಕ್ಕಿಟ್ಟರಂತೆ. ಅವರ ಕೋಟಲೆಯಿಂದಾಗಿ "ಪುನಃ ಪುನರ್ಜಾಯಮಾನಾ ಪುರಾಣೀ" ಆಗಿರಬೇಕಾದ

ಕನ್ನಡ ರಾಣಿ ಕೇವಲ ಪುರಾಣಿಯಾಗಿಯೇ ಉಳಿದಳು. ಆಕೆ ಶ್ಲೇಷ ಪ್ರಾಸಾದಿಗಳಿಂದ ನೇಯ್ದ ಜೀರ್ಣಾಂಬರವನ್ನುಟ್ಟು ಬಾಡಿದ ಹೂವು ಮುಡಿದು ಕಂದವೃತ್ತಗಳ ಕಾರಾಗಾರದಲ್ಲಿ ಕೊಳೆಯಬೇಕಾಗಿ ಬಂದಿತಂತೆ. ಕನ್ನಡಮ್ಮನ ಉದ್ಧಾರಕರಿಗೂ ಶಾಲುಸಾಹಿತಿಗಳಿಗೂ ಘೋರವಾದ ಯುದ್ಧವೇ ನಡೆಯಿತು. ಯಾರಿಗೂ ಸ್ಪಷ್ಟವಾದ ಜಯ ದೊರೆಯದೆ ಉಭಯಪಕ್ಷದವರೂ ಸೇರಿ ಒಂದು ಬಗೆಯ ಅನಧಿಕೃತ ಒಪ್ಪಂದಕ್ಕೆ ಬಂದರು.

ಅದರ ಶರತ್ತುಗಳ ಪ್ರಕಾರ ಯುದ್ಧಪೂರ್ವದಲ್ಲಿದ್ದಂತೆ ಅವರವರ ರಾಜ್ಯ, ಅವರವರ ವಶದಲ್ಲಿಯೇ ಇರಬಹುದೆಂದು ತೀರ್ಮಾನವಾಯಿತು. ಶಾಲುಸಾಹಿತಿಗಳು ತಮ್ಮ ಕಮಲಕಲ್ಹಾರಗಳನ್ನೂ ಚಕೋರಚಕ್ರವಾಕಗಳನ್ನೂ ನೀರಕ್ಷೀರಗಳನ್ನು ಬೇರ್ಪಡಿಸುವ ಹಂಸಗಳನ್ನೂ ಉಳಿಸಿಕೊಂಡರು. ಪತಾಕಿ, ಬುರುಬುರು ನೊರೆಯ ಸಾಬೂನು, ಪುದ್ದಿನ ಚುರಿಮುರಿ, ಹೀರೆಯ ಹೂವು ಮುಂತಾದುವುಗಳ ವಿಷಯದಲ್ಲಿ ಹೊಸಬರಿಗೆ ಸರ್ವಸ್ವಾತಂತ್ರ್ಯ ದೊರೆಯಿತು. ಕೋಗಿಲೆಯ ಮೇಲೆ ಎರಡು ಪಕ್ಷದವರಿಗೂ ಸಮಾನಾಧಿಕಾರವಿರತಕ್ಕದ್ದೆಂದು ಗೊತ್ತಾಯಿತು. ಶಾಲುಸಾಹಿತಿಗಳು ಉದಾರಬುದ್ಧಿಯಿಂದ "ಕಂದವೃತ್ತಗಳನ್ನು ಮಾತ್ರ ನಮಗೆ ಬಿಟ್ಟುಕೊಡಿ; ರಗಳೆಯೇನಿದ್ದರೂ ನಿಮಗೇ ಇರಲಿ" ಎಂದರು. ಶಾಲುಸಾಹಿತಿಗಳು ತಮಗೆ ಪ್ರಿಯವಾದದ್ದೆಲ್ಲವನ್ನೂ ಉಳಿಸಿಕೊಂಡರು. ಆದರೆ ಇತ್ತೀಚೆಗೆ ಅವರ ಸರಕುಗಳ ಬೆಲೆ ಇಳಿದು ಅವರು ಮುಗ್ಗಟ್ಟಿಗೆ ಸಿಕ್ಕಿದ್ದಾರೆ. ಹಿಂದೆ ವರದಹಸ್ತವನ್ನು ತಲೆಯಮೇಲಿಟ್ಟು ಅನುಗ್ರಹಿಸುತ್ತಿದ್ದವರು ಕಾಲದ ಮಹಿಮೆಯಿಂದ ದೈನ್ಯಸ್ಥಿತಿಗೆ ಬಂದಿದ್ದಾರೆ.

ಶಾಲುಸಾಹಿತಿಗಳ ಮೇಲೆ ದಂಗೆಯೆದ್ದು ಕನ್ನಡಮ್ಮನನ್ನು ಸೆರೆಯಿಂದ ಬಿಡಿಸಿದವರೇ ಎರಡನೆಯ ಗುಂಪಿನ ಸಾಹಿತಿಗಳು. ಇವರಲ್ಲಿ ಮುಕ್ಕಾಲು ಪಾಲು ಜನ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಪಡೆದು ಪದವೀಧರರಾಗಿ, ಸಾಹಿತ್ಯ ಸೃಷ್ಟಿಯಲ್ಲದ ಯಾವುದೋ ಒಂದು ವೃತ್ತಿಯನ್ನವಲಂಬಿಸಿದವರು. ಇವರಿಗೆ ಬರವಣಿಗೆ ಅಭಿಷಿಕ್ತಳಾದ ರಾಣಿಯಲ್ಲ, ಕಿರಿಯ ಹೆಂಡತಿ. ಆದರೆ ಪಟ್ಟದ ರಾಣಿಗಿಂತಲೂ ಕಿರಿಯ ರಾಣಿಯಲ್ಲಿ ವಿಶ್ವಾಸ ಹೆಚ್ಚಾಗಿರುವುದು ಸ್ವಾಭಾವಿಕವಷ್ಟೆ. ಇವರು ತಮ್ಮ ನಡೆನುಡಿಗಳಲ್ಲೂ ವಸ್ತ್ರಭೂಷಣಗಳಲ್ಲೂ ಆಗಿನ ಶಿಷ್ಟ ಸಮಾಜದ ಸಂಪ್ರದಾಯವನ್ನು ಕಟ್ಟುನಿಟ್ಟಾಗಿ ನಡೆಸುವ ಜನ. ಇವರನ್ನು ಜರಿರುಮಾಲಿನ ಸಾಹಿತಿಗಳು, ಮಡಿಸಾಹಿತಿಗಳು ಎಂದು

ಹಾಸ್ಯ ಮಾಡುವುದುಂಟು. ಈಗ ಜರಿರುಮಾಲು ಬಹುಮಟ್ಟಿಗೆ ಅದೃಶ್ಯ ವಾಗಿದೆ. ಆದರೆ ಅದಕ್ಕೆ ಸಹಜವಾದ ಮನೋವೃತ್ತಿ ಪ್ರಬಲವಾಗಿಯೇ ಇದೆ. ಈ ಗುಂಪಿನವರಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ಪಾಶ್ಚಾತ್ಯ ಉಡುಪನ್ನು ಅನುಕರಿಸುತ್ತಾರೆ. ಈ ಜನರೆಲ್ಲರಲ್ಲೂ ಕಂಡು ಬರುವ ಸಾಮಾನ್ಯ ಲಕ್ಷಣ ಗಳನ್ನು ಸಂಗ್ರಹಿಸಿಯೇ ನಮ್ಮ "ಮರ್ಯಾದೆ ರಾಮಣ್ಣ" ಎಂಬ ಕಾಲ್ಪನಿಕ ವ್ಯಕ್ತಿಯ ಸೃಷ್ಟಿಯಾಗಿರುವುದು. ಇವರು ರೈಲಿನಲ್ಲಿ ಪ್ರಯಾಣಮಾಡು ವಾಗಲೂ ಗಾಡಿಯಲ್ಲಿರುವ ಇತರರೊಡನೆ ಮಾತನಾಡುವ ಗೋಜಿಗೆ ಹೋಗುವುದಿಲ್ಲ. ಒಂದು ವೃತ್ತಪತ್ರಿಕೆಯ ಅಥವಾ ಪುಸ್ತಕದ ಮರೆಹೊಕ್ಕು ಪ್ರಪಂಚದ ಸೋಂಕಿನಿಂದ ರಕ್ಷಣೆ ಪಡೆಯುತ್ತಾರೆ. ಆದರೆ ಶಾಸ್ತ್ರೋಕ್ತವಾಗಿ ಮತ್ತೊಬ್ಬರ ಪರಿಚಯವಾದಾಗ ಕರ್ತವ್ಯದೃಷ್ಟಿಯಿಂದ ತಮ್ಮ ಮುಖವನ್ನು ಅರಳಿಸಿ, ಮೆಲುನಗೆಯೊಂದನ್ನು ತಯಾರಿಸಿಕೊಂಡು ಅವರೊಡನೆ ಮಳೆಬೆಳೆ ಗಳ ವಿಚಾರವಾಗಿ ನಾಲ್ಕು ಮಾತಾಡುತ್ತಾರೆ. ಹೋಟಲಿಗೆ ಹೋಗಿ ಎಲ್ಲ ರೊಡನೆ ಕುಳಿತು ಉಪಾಹಾರ ತೆಗೆದುಕೊಳ್ಳುವುದೆಂದರೆ ಅವರಿಗೆ ಅವಮಾನ. ಮಸಾಲೆದೋಸೆಯನ್ನು ತಮ್ಮ ಮನೆಗೇ ತರಿಸಿಕೊಳ್ಳುತ್ತಾರೆ. ಅವರ ಮುಖ ಸಾಧಾರಣವಾಗಿ ಸಮುದ್ರದ ಮಟ್ಟಕ್ಕಿಂತ ಕೆಲವು ಅಡಿ ಎತ್ತರದಲ್ಲೇ ಇದ್ದು ಅಂತರಿಕ್ಷವನ್ನೇ ನೋಡುತ್ತಿರುತ್ತದೆ. ಅವರ ಉಡುಪಿನ ರೀತಿಯೇನೋ ಅವರ ವಿದ್ಯಾಭ್ಯಾಸ ಮತ್ತು ಅಧಿಕಾರದ ಫಲವೆನ್ನಬಹುದು. ಆದರೆ ಅವರ ಮೂಗಿನ ನೇರದ ಎತ್ತರ ಅವರು ಬರೆದಿರುವ ಪುಸ್ತಕಗಳ ಸಂಖ್ಯೆ ಯನ್ನು ಅವಲಂಬಿಸಿರುತ್ತದೆ.

ಅವರ ಮುಖಮುದ್ರೆಯನ್ನು ನೋಡಿದರೆ ಪ್ರಪಂಚದ ಹೊರೆಯೆಲ್ಲಾ ಇವರ ಮೇಲೆ ನಿಂತಿದೆಯೇನೋ ಎನ್ನುವಂತಾಗುತ್ತದೆ. ನಿಜವಾಗಿಯೂ ಅವರು ದುರ್ಭರವಾದ ಜವಾಬ್ದಾರಿಯನ್ನು ಹೊತ್ತಿದ್ದಾರೆ—ಇದನ್ನು ಯಾವ ಸಂಕೋಚವೂ ಇಲ್ಲದೆ ಅವರೇ ಒಪ್ಪಿಕೊಳ್ಳುತ್ತಾರೆ. ತನ್ನ ಮಕ್ಕಳ ಅವಿಶ್ವಾಸ ಅನಾದರಣೆಗಳಿಂದಾಗಿ ಕಷ್ಟದಲ್ಲಿ ತೊಳಲುತ್ತಿರುವ ಕನ್ನಡ ಮಾತೆಯ ಉದ್ಧಾರಕ್ಕಾಗಿ ಇವರು ಕಂಕಣ ಕಟ್ಟಿದ್ದಾರೆ. ಈ ವರ್ಗದ ಸಾಹಿತಿಗಳು ಎಲ್ಲಿ ಭಾಷಣಮಾಡಿದರೂ ಏನು ಬರೆದರೂ ಕನ್ನಡ ಮಾತೆಯ ಪ್ರಸ್ತಾಪ ಬರದಿರುವುದಿಲ್ಲ. ಆಕೆ ಯಾವಾಗಲೂ ಮಾತೆ, ಇವರು ಯಾವಾ ಗಲೂ ಕಂದಗಳು. ಅವರಿಗೆ ದೊರೆತ ವಿದ್ಯಾಭ್ಯಾಸ ನಿಜವಾಗಿ ವಿದ್ಯಾ ಭ್ಯಾಸವಲ್ಲ, ಕನ್ನಡಮಾತೆಯ ಎದೆ ಹಾಲು. ಅವರ ಸ್ನೇಹಿತರು ಸ್ನೇಹಿತ ರಲ್ಲ; ಕನ್ನಡ ಮಾತೆಯ ಅಣುಗರು; ಅಣ್ಣತಮ್ಮದಿರು. ಅವರಾದರೂ

ಸಾಹಿತಿಗಳಲ್ಲ, ಸಿರಿಗನ್ನಡದ ಡಿಂಗರಿಗರು. ಅವರು ಬರೆದ ಪುಸ್ತಕಗಳು ಪುಸ್ತಕಗಳಲ್ಲ, ಭಕ್ತಿ ನಮ್ರರಾಗಿ ಕನ್ನಡಮಾತೆಯ ಅಡಿದಾವರೆಯಲ್ಲಿ ಅರ್ಪಿಸಿದ ತುಂಬೆಯ ಹೂವಿನ ಅಂಜಲಿ. ಅಥವಾ ರೂಪಕವನ್ನು ಬದಲಾಯಿಸಬಹುದಾದರೆ—ತಾಯ ಮೊಣಕಾಲನ್ನಪ್ಪಿ ಅವರಾಡಿದ ನಾಲ್ಕು ತೊದಲು ಮಾತು.

ಈ ಶತಮಾನದ ಎರಡನೆಯ ದಶಕದಲ್ಲಿ ಯಾವುದೋ ಒಂದು ರಾತ್ರಿ ಅವರು ಇಂಗ್ಲಿಷ್ ರೊಮ್ಯಾಂಟಿಕ್ ಕವಿತೆಗಳನ್ನು ಓದಿ ಮಲಗಿದರು. ಬೆಳಗ್ಗೆ ಕಣ್ಣು ತೆರೆದು ನೋಡಿದರೆ—ಕನ್ನಡ ನಾಡೆಲ್ಲಾ ಹೊಸದೊಂದು ಹೊಂಬೆಳಕಿನಲ್ಲಿ ತೊಯ್ದಿದೆ. ಎಲ್ಲೆಲ್ಲೂ ವಸಂತದ ಸೊಬಗು. ಗಿಡಮರಗಳ ಕಾಂಡ ಕಾಂಡದಲ್ಲೂ ಜೀವರಸ ಏರುತ್ತಿದೆ. ಬಳ್ಳಿಗಳು ದಾಂಗುಡಿಯಿಟ್ಟು ಹೊರಟಿವೆ. ಪಕ್ಷಿಗಳ ಗಾನವೂ ದುಂಬಿಗಳ ಝೇಂಕಾರವೂ ಭೂವ್ಯಂತರಿಕ್ಷಗಳನ್ನು ತುಂಬಿವೆ. ಪ್ರಕೃತಿಯ ಈ ಸಡಗರ ವರ್ಷವರ್ಷವೂ ನಡೆದು ಬಂದದ್ದೇ. ಅಂದೇನೋ ಸಾಹಿತಿಗಳ ಕಣ್ಣ ಪೊರೆ ಕಳೆದು ಈ ದಿವ್ಯ ದರ್ಶನದ ಅನುಭವವಾಯಿತು.

ಅದರ ಪ್ರಭಾವ ಇನ್ನೂ ಮಂಕಾಗಿಲ್ಲ. ಈ ಕವಿಗಳು ಯಾವೊಂದು ಹೂವನ್ನೂ ಸುಮ್ಮನಿರಗೊಡಲಿಲ್ಲ. ಹಕ್ಕಿ, ಗಿರಿ, ವನ, ನದಿ, ಯಾವುದೊಂದೂ ಅವರ ಗಮನಕ್ಕೆ ಬೀಳದಿರಲಿಲ್ಲ; ಎಲ್ಲಕ್ಕೂ ಸ್ವರಪ್ರಸ್ತಾರ ಹಾಕಿ ಹಾಡಿದರು. ಯಾವ ಸಂಧ್ಯಾರಾಗವೂ ಅವರ ಕೈಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ—ಅದನ್ನು ಹಿಡಿದು ಛಂದಸ್ಸಿನಲ್ಲಿ ಬಂಧಿಸಿಟ್ಟರು. ಕನ್ನಡನಾಡಿನ ಶಿಲ್ಪಕಲೆಯೆಲ್ಲಾ—ಬೇಲೂರು, ಹಳೇಬೀಡು, ಬಾದಾಮಿ, ಐಹೊಳೆ—ಇವರಿಗೆ ಗಾನಸಾಮಗ್ರಿಯನ್ನೊದಗಿಸಿತು. ಈ ಕನ್ನಡ ದುಂಬಿಗೆ ಅಮೃತದ ಕಾಣಿಕೆ ಕೊಡದ ವಸ್ತುವೇ ಇಲ್ಲವೆನ್ನಿಸಿತು. ಕನ್ನಡದ 'ಯೆಂಡ' ಕುಡಿದು ಮತ್ತರಾಗಿ ಕನ್ನಡ ಪದಗಳನ್ನು ಹಾಡುವ ಈ ಗಾಯಕರನ್ನು ಎಲ್ಲಿ ಹೋದರೆ ಅಲ್ಲಿ ಕಾಣಬಹುದು. ಶ್ರವಣಬೆಳಗೊಳಕ್ಕೆ ಹೋದರೆ ಅಲ್ಲಿ ಗೋಮಟೇಶ್ವರನ ಎದುರಿನಲ್ಲಿ ಕುಳಿತು ಬಿಸಿಲೇರಿದಂತೆಲ್ಲಾ ಆ ಭವ್ಯ ಮೂರ್ತಿಯ ಮೂಗಿನ ನೆರಳು ಪಶ್ಚಿಮದಿಂದ ಪೂರ್ವಕ್ಕೆ ಪ್ರಯಾಣ ಮಾಡುವುದನ್ನು ನೋಡುತ್ತಾ ಕುಳಿತಿರುತ್ತಾರೆ. ಆ ಪಯಣದ ಸೊಬಗು ಎಂದಿಗೂ ಮುಗಿಯದ ಅಚ್ಚರಿ. ಪರ್ವತದ ಶಿಖರಕ್ಕೇರಿದರೆ, ಅಲ್ಲಿ ಗಾಳಿಯ ಸುಯ್ಯಲನ್ನು ಆಲಿಸುತ್ತಿದ್ದಾರೆ. ಸಮುದ್ರ ತೀರದ ಮರಳ ಮೇಲೆ ತೆಂಗಿನ ಮರದ ನೆರಳಿನಲ್ಲಿ ಕುಳಿತು ಕನ್ನಡ ಸಮುದ್ರದ ಅಲೆಗಳು ಕನ್ನಡ ತೀರದ

ಮೇಲೆ ಬಿದ್ದು ಅಲ್ಲಿ ಸೃಷ್ಟಿಯಾಗುವ ಕನ್ನಡ ನೊರೆಯನ್ನು ಗಮನಿಸುತ್ತಾ "ಆಹಾ, ಈ ಶೊತ್ತು, ಸಮುದ್ರರಾಜ, ನಮ್ಮ ಕನ್ನಡ ತಾಯ ಪಾದ ಗಳನ್ನು ತೊಳೆಯುತ್ತಿದ್ದಾನೆ" ಎಂದು ನಲಿಯುತ್ತಾರೆ.

ವಿಶ್ವಕ್ಕೆಲ್ಲಾ ಇವರ ಹೃದಯ ಪ್ರತಿಸ್ಪಂದನೆ ಕೊಟ್ಟದ್ದು, ದಿವ್ಯ ದರ್ಶನ ದೊರೆತದ್ದು—ಇಷ್ಟು ಮಾತ್ರವಲ್ಲ, ಈ ವರ್ಗದ ಸಾಹಿತಿಗಳ ವೈಶಿಷ್ಟ್ಯ; ಇದ್ದಕ್ಕಿದ್ದ ಹಾಗೆಯೇ ಮನುಷ್ಯ ಹೃದಯವನ್ನು ಒಳಹೊಕ್ಕು ಅಲ್ಲಿಯ ವ್ಯಾಪಾರವನ್ನು ನೋಡಬೇಕೆಂಬ ಗೀಳು ಜೇರೆ ಅವರನ್ನು ಹಿಡಿಯಿತು. ಸಾಹಿತ್ಯ ಅವರ ಅಧಿಕೃತ ಉದ್ಯೋಗವಲ್ಲದಿದ್ದರೂ ಅದಕ್ಕಿಂತ ಹೆಚ್ಚಿನ ಸ್ಥಾನವನ್ನೇ ಆಕ್ರಮಿಸಿಕೊಂಡಿತ್ತಷ್ಟೆ. ಸಾಹಿತ್ಯ ಸೃಷ್ಟಿ ಸಮರ್ಪಕ ವಾಗಿ ನಡೆಯಬೇಕಾದರೆ ಜನರನ್ನು—ಮುಖ್ಯವಾಗಿ ಒಬ್ಬ ಕನ್ನಡ ಜನನಿಯ ಹಾಲನ್ನು ಮೊಗೆದ ಕನ್ನಡಿಗರನ್ನು—ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಬೇಕು. ಅವರ ನಡೆನುಡಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡ ಬೇಕು. ನಮ್ಮಂಥವರಾದರೆ ಯಾವನ್ನಾದರೂ ನೋಡಿದಾಗ "ಇವನು ಕಪ್ಪಗಿದ್ದಾನೆ, ಗಿಣಿಮೂಗು, ಮಾಲಗಣ್ಣು" ಎಂದು ಮಾತ್ರ ಗಮನಿಸಿ ತೃಪ್ತರಾಗುತ್ತೇವೆ. ಈ ಸಾಹಿತಿಗಳಿಗೆ ಅಷ್ಟು ಸಾಲದು. ಅವರ ಕಣ್ಣು ಯಾರಮೇಲೆ ಬಿದ್ದರೂ ಅವರ ಹೃದಯವನ್ನು ಕೊರೆದು ಒಳಗೆ ಇಣಿಕಿ ನೋಡುತ್ತದೆ. "ನಿಮ್ಮ ಒಳಗುಟ್ಟೇನೇ ಇರಲಿ, ನನ್ನಿಂದ ಬಚ್ಚಿಡಲಾರಿರಿ" ಎನ್ನುವಂತಿರುತ್ತದೆ, ಅವರ ನೋಟ. ಸಾಹಿತಿಯೆಂದರೆ ಒಂದು ಬಗೆಯ ಚಿತ್ರಗುಪ್ತ. ಬಾಹ್ಯಕ್ರಿಯೆ ಮಾತ್ರವಲ್ಲದೆ ಅದರ ಹಿಂದಿರುವ ಮನೋ ವ್ಯಾಪಾರವೆಲ್ಲಾ ಅವನ ದಫ್ತರಕ್ಕೆ ಸೇರುತ್ತದೆ. ಷೇಕ್ಸ್‌ಪಿಯರನ ದುರಂತ ನಾಟಕಗಳ ವಿಷಯದಲ್ಲಿ ವಿಮರ್ಶಕರು ಹೇಳುವುದೇನು?—ಅವು ಮಾನವ ಹೃದಯದ ಅಂತರ್ಯುದ್ಧದ ಚಿತ್ರಗಳು, ಬಾಹ್ಯಶಕ್ತಿಗಳ ಹೋರಾಟವಲ್ಲ, ಎಂದಲ್ಲವೆ? ನಮ್ಮ ಸಾಹಿತಿಗಳು ಈ ವಿಮರ್ಶಕರ ಅಭಿ ಪ್ರಾಯವನ್ನು ರಕ್ತಗತ ಮಾಡಿಕೊಂಡಿದ್ದಾರೆ. ಆದ್ದರಿಂದ ಮನುಷ್ಯ ಏನೇ ಮಾಡಲಿ, "ಇದರ ಒಳಮರ್ಮವೇನು? ಈ ಕ್ರಿಯೆಯ ಹಿಂದಿರುವ ಉದ್ದೇಶವೇನು?" ಎಂಬ ಪ್ರಶ್ನೆ ಇವರನ್ನು ಬಾಧಿಸುತ್ತಲೇ ಇರುತ್ತದೆ. ನಮಗೆ ಇದೆಲ್ಲಾ ಅಸಹ್ಯಕರವಾದ ಹೊಂಚುನೋಟವೆನ್ನಿಸಬಹುದು, ಆದರೆ ವಿಮರ್ಶಕರು ಅದಕ್ಕೆ ಜೇರೆ ಹೆಸರನ್ನಿಟ್ಟಿದ್ದಾರೆ: ಅದು ಸ್ಫೂರ್ತಿ, ದಿವ್ಯದೃಷ್ಟಿ. ಸಾಹಿತ್ಯದಲ್ಲಿ ಈ ದೃಷ್ಟಿಯಿದೆ ಎಂದರೆ ಹೊಗಳಿಕೆ, ಇಲ್ಲ ವೆಂದರೆ ತೆಗಳಿಕೆ. ಈ ಒರೆಗಲ್ಲಿನ ಮೇಲೆ ಉಜ್ಜಿ ನೋಡಿದರೆ ಯಾವನು

ಸಾಹಿತಿ ಯಾವನು ಅಲ್ಲ, ಎಂದು ಸುಲಭವಾಗಿ ಪತ್ತೆಮಾಡಬಹುದು. ಮೇಲೆ ಹೇಳಿದ ಲಕ್ಷಣಗಳು ಈ ವರ್ಗದ ಸಾಹಿತಿಗಳೆಲ್ಲರಿಗೂ ಹೆಚ್ಚು ಕಡಮೆ ಅನ್ವಯಿಸುತ್ತವೆ.

ಕೆಲವು ವೇಳೆ ಸಾಹಿತ್ಯಾಭಿಮಾನಿಗಳು ಸಾಹಿತಿಗಳ ಗೌರವಾರ್ಥವಾಗಿ ಸಂತೋಷ ಕೂಟಗಳನ್ನು ಏರ್ಪಡಿಸುತ್ತಾರೆ. ಜರಿರುಮಾಲಿನ ಸಾಹಿತಿಗಳ ವೈಭವವನ್ನು ನೋಡಬೇಕಾದರೆ ಅಲ್ಲಿಗೆ ಹೋಗಬೇಕು. ಆಗತಾನೆ ಸಾಹಿತ್ಯರಂಗಕ್ಕೆ ಕಾಲಿಟ್ಟು, ತಾವೂ ಎಂದಾದರೊಂದು ದಿನ ಸಾಹಿತಿಗಳೆನಿಸಿಕೊಳ್ಳಬಹುದೆಂದು ಕನಸು ಕಾಣುತ್ತಿರುವ ಯುವಕರ ತಂಡವೊಂದು ಅವರನ್ನು ಮುತ್ತಿರುತ್ತದೆ. ಅವರ ಮುಖದಲ್ಲಿ ಅದೇನು ನಮ್ರತೆ, ಅಚ್ಚರಿ, ಭಕ್ತಿ! "ತಮ್ಮ ಆ ಕಥೆಯನ್ನು ಹೇಗೆ ಬರೆದಿರಿ, ಸಾರ್? ಅದರ ಶೈಲಿ— ಅಯ್ಯೋ, ಅದೆಷ್ಟು ಸೊಗಸು! ಅದರ ಕಥಾವಸ್ತು ನಡೆದದ್ದೋ ಅಥವಾ ತಮ್ಮ ಕಲ್ಪನೆಯೊ? ಅಂಥ ಕಲ್ಪನೆಗಳು ಹೇಗೆ ಬರುತ್ತವೆ?" ಇತ್ಯಾದಿ ಹೊಗಳಿಕೆಯಿಂದ ಅವರು ಸಾಹಿತಿಯ ಆತ್ಮಕ್ಕೆ ತನಿ ಎರೆಯುತ್ತಾರೆ. ಕೈಯಲ್ಲಿ ಆಟೊಗ್ರಾಫ್ ಪುಸ್ತಕಗಳನ್ನು ಹಿಡಿದು ಕಿಲಕಿಲನೆ ನಗುತ್ತಾ ಸಾಹಿತಿಗಳ ಹಸ್ತಾಕ್ಷರವನ್ನು ಬೇಡುವ ಹುಡುಗಿಯರನ್ನೂ ಕೆಲವು ವೇಳೆ ಅವರ ಪರಿವಾರದಲ್ಲಿ ಕಾಣಬಹುದು. ಈ ಗುಂಪಿನ ನಡುವೆ ತೃಪ್ತಿ ನಮ್ರತೆಗಳು ಬೆರೆದ ನಗುವನ್ನು ನಗುತ್ತಾ ನಿಂತಿರುವವನೇ ಸಾಹಿತಿ. ಅವನನ್ನು ಗುರುತಿಸುವುದಕ್ಕೆ ಚಕರೆ ಪಟ್ಟಿಯ ಅವಶ್ಯಕತೆಯೇ ಇಲ್ಲ.

ಈ ವರ್ಗದ ಸಾಹಿತಿಗಳಿಗೆ ವಿರೋಧಿಗಳಾದ ಇನ್ನೊಂದು ಬಗೆಯ ಸಾಹಿತಿಗಳೂ ನಮ್ಮಲ್ಲಿ ಸಿಕ್ಕುತ್ತಾರೆ. ಇವರಲ್ಲಿ ಬಹು ಜನರಿಗೆ ವಿಶ್ವವಿದ್ಯಾಲಯದ ಪರಿಚಯವಿಲ್ಲ. ಜರಿರುಮಾಲಿನ ಸಾಹಿತಿಗಳನ್ನು ಕಂಡರೆ ಅವರಿಗೆ ಅಸಡ್ಡೆ; ತಿರಸ್ಕಾರ ಎಂದರೂ ಎನ್ನಬಹುದು. ಅವರ ಅಭಿಪ್ರಾಯದಲ್ಲಿ ವಿಶ್ವವಿದ್ಯಾಲಯದ ಸೋಂಕು ತಗಲಿದವರೆಲ್ಲರೂ ಒಂದು ನಿಕೃಷ್ಟ ಜಾತಿ. ಕಾಲೇಜಿನಲ್ಲಿ ಅವರು ಪಡೆದೆವೆಂದುಕೊಂಡಿರುವ ಶಾಸ್ತ್ರೀಯ ಶಿಕ್ಷಣ ವಿಶ್ವವಿದ್ಯಾಲಯದವರ ತಲೆಗೆ ಮದ್ಯದ ಅಮಲೇರುವಂತೆ ಏರಿದೆ. ನಾಲ್ಕಾರು ಸಾಹಿತ್ಯಗಳನ್ನು ಓದಿಕೊಂಡಿದ್ದೇವೆಂಬ ಹೆಮ್ಮೆ ಬೇರೆ. ಸಾರ್ತ್ರರ್ ಎದುರಿಗಿರುವಾಗ ಷೇಕ್ಸ್‌ಪಿಯರ್ ಓದುವ, ಯಾಮಾ ಇರುವಾಗ 'ಡಿವೈನ್ ಕಾಮೆಡಿ' ಓದುವ, ಈ ಜನ ಸಾಹಿತ್ಯವನ್ನೇನು ಬಲ್ಲರು! ಏನೋ ವ್ಯಾಕರಣವನ್ನು ಅಭ್ಯಾಸಮಾಡಿಕೊಂಡು ಜನಮೇಜಯ ರಾಯನ ಕಾಲದ ವಿಮರ್ಶಾಗ್ರಂಥಗಳನ್ನು ವ್ಯಾಸಂಗ ಮಾಡಿದ ಮಾತ್ರಕ್ಕೆ ತಾವೂ ಸಾಹಿತ್ಯ ಸೃಷ್ಟಿ ಮಾಡಬಲ್ಲೆ

ವೆಂಬ ಭ್ರಮೆಗೆ ತುತ್ತಾಗಿದ್ದಾರೆ. ಇಂಥವರಿಗೆ ಸರಸ್ವತಿ ಒಲಿಯುವುದುಂಟೆ? ಇವರ 'ವಿದ್ವತ್ತೆ'ನ ಫಲವಾಗಿ ಇವರ ಬರವಣಿಗೆ ಹುಳುಕೊರೆದ ಗುಲಾಬಿ ಯಂತಾದೀತು! ವಿಶ್ವವಿದ್ಯಾಲಯದ ಶಿಕ್ಷಣ ಹೆಚ್ಚಿದಷ್ಟೂ ಪ್ರತಿಗಾಮಿ ಮನೋವೃತ್ತಿಯನ್ನೇ ಬೆಳೆಸುತ್ತದೆ. ಇವರು ಬರೆಯುವ ಸಾಹಿತ್ಯವೆಲ್ಲಾ ಮಡಿ ಸಾಹಿತ್ಯ. ಇವರು ಮಾತಾಡುವುದನ್ನು ಕೇಳಬೇಕು! "ಇಲ್ಲಿ ಈ ಪದದ ಪ್ರಯೋಜನವೇನು? ಈ ವಸ್ತು ಕಾವ್ಯಕ್ಕೆ ಹೊಂದುತ್ತದೆಯೆ? ಇದು ಶ್ಲೀಲ, ಅದು ಅಶ್ಲೀಲ!" ಕವಿಯಾದವನಿಗೆ ಕಾಯಿದೆ ಕಟ್ಟಳೆಗಳನ್ನು ವಿಧಿಸುವ ದಿಟ್ಟತನ ಯಾರಿಗಿದೆ! ಜನತೆಗೆ ಅದರ ಅರಿವು ಇರಲಿ ಇಲ್ಲದಿರಲಿ, ಕವಿಗಳೇ ರಾಷ್ಟ್ರದ ಶಾಸಕರೆಂದು ಇವರ ಷೆಲ್ಲಿಯೇ ಹೇಳಲಿಲ್ಲವೆ? ಈ ಜನ ರಿಗೆ ಜೀವನದ ವಾಸ್ತವಾಂಶಗಳನ್ನು ಕಣ್ಣುತೆರೆದು ದಿಟ್ಟಿಸಿ ನೋಡುವಷ್ಟು ಕೆಚ್ಚಿಲ್ಲ. ಕಾವ್ಯದಲ್ಲಿ ನಾಯಕ ನಾಯಕಿಯನ್ನು ಮುತ್ತಿಟ್ಟನೆಂದರೆ ಇವರು ಹೆದರಿ ಪ್ರಾಣ ಒಪ್ಪಿಸುತ್ತಾರೆ. ಇವರ ನೀತಿ ಯಾರಿಗೆ ಬೇಕು! ಕಲೆಯಿರು ವುದು ಕಲೆಗಾಗಿ. ನಾವು ಕಲೆಗಾರನಿಗೆ ಸರ್ವಸ್ವಾತಂತ್ರ್ಯವನ್ನು ದೊರಕಿಸಿ ಕೊಡಲು ಹೊರಟಿದ್ದೇವೆ. ಈ ಮಡಿ ಸಾಹಿತಿಗಳು ತಂದೊಡ್ಡುವ ವಿಧಿ ನಿಷೇಧಗಳನ್ನು ಸರ್ವಥಾ ಒಪ್ಪಲಾರೆವು—ಜೀವನದಲ್ಲಾಗಲಿ, ಸಾಹಿತ್ಯ ದಲ್ಲಾಗಲಿ.

ಹೀಗೆ ವಾದಿಸುವ ಈ ಮೂರನೆಯ ಗುಂಪಿನವರು ಸಾಹಿತ್ಯಕ್ಕೂ ಕಲೆಗೂ ಇರುವ ಸಂಬಂಧಕ್ಕೆ ಬಹಳ ಪ್ರಾಶಸ್ತ್ಯ ಕೊಡುತ್ತಾರೆ. ಸಾಹಿತ್ಯ ವೆಂದರೆ ಪ್ರಥಮತಃ ಕಲೆ. ಕಲೆಗಾರ ಸಾಹಿತಿಗಳು 'ಕಲೆ' ಎಂದು ಬರೆಯ ಬೇಕಾದರೆ ದಪ್ಪ ಅಕ್ಷರದಲ್ಲೇ ಬರೆಯುತ್ತಾರೆ. ಅವರು ಆ ಪದವನ್ನು ಉಚ್ಚರಿಸುವಾಗಲೂ ದಪ್ಪಕ್ಷರದ ಛಾಯೆ ಹೇಗೋ ಅವರ ಧ್ವನಿಯಲ್ಲಿ ಕಾಣಿಸಿಕೊಳ್ಳುತ್ತದೆ. ಕಲೆಗಾರರ ಬಾಹ್ಯಲಕ್ಷಣಗಳಾದ ಮುಳ್ಳುಗಡ್ಡ, ನೀಳ ವಾದ ಕೂದಲು, ವೈಯಾರದ ನಡಗೆ—ಇವನ್ನೆಲ್ಲಾ ಈ ಗುಂಪಿನ ಸಾಹಿತಿ ಗಳು ಚಾಲತಿಯಲ್ಲಿಟ್ಟುಕೊಂಡಿದ್ದರು. ಇತ್ತೀಚೆಗೆ ಕಲೆಗಾರರಲ್ಲದ ಇತರರೂ ಇವುಗಳನ್ನು ಅನುಕರಿಸಲು ಪ್ರಾರಂಭಿಸಿದ್ದರಿಂದ ಅವರ ವೈಶಿಷ್ಟ್ಯಕ್ಕೆ ಧಕ್ಕೆ ಬಂದಂತಾಯಿತು. ಆದ್ದರಿಂದ ಈ ಆಟಕ್ಕೆ ತಕ್ಕ ಬಹಿರೂಪ ಈಗಿನ ಸಾಹಿತಿಗಳಲ್ಲಿ ಕಂಡುಬರುವುದಿಲ್ಲ. ಇವರೆಲ್ಲರೂ ಸ್ವಾತಂತ್ರ್ಯಪ್ರೇಮಿಗಳಾದ್ದ ರಿಂದ ಕಾಂಗ್ರೆಸ್ ಮಾದರಿಯ ಬಿಳಿಯ ಜುಬ್ಬ ಧರಿಸುತ್ತಾರೆ. ಕೃಷ್ಣನಿಗೆ ಪೀತಾಂಬರವೂ ಶಿವನಿಗೆ ಚರ್ಮಾಂಬರವೂ ಇರುವಂತೆ ಈವರ್ಗದ ಸಾಹಿತಿ ಗಳಿಗೆ ಜುಬ್ಬವೇ ಅಧಿಕೃತಾಂಬರವಾಗುವಂತೆ ತೋರುತ್ತದೆ.

ಜುಬ್ಬ ಮೊದಲಾದುವು ಎಷ್ಟಾಗಲಿ ಬಾಹ್ಯಜೀವನಕ್ಕೆ ಸಂಬಂಧ ಪಟ್ಟವು. ಕಲೆಗಾರ ಸಾಹಿತಿಯ ವೈಶಿಷ್ಟ್ಯವಿರುವುದು ಇವುಗಳಲ್ಲಲ್ಲ— ಸ್ಫೂರ್ತಿಯಲ್ಲಿ, ಆತ್ಮತೇಜಸ್ಸಿನಲ್ಲಿ. ಜರಿರುಮಾಲಿನ ಸಾಹಿತಿಗಳಿಗೂ ಸ್ಫೂರ್ತಿ, ಆತ್ಮ, ತೇಜಸ್ಸು ಮೊದಲಾದವುಗಳಲ್ಲಿ ಅಭಿಮಾನವುಂಟು. ಆದರೆ ರಮ್ಯಮನೋವೃತ್ತಿಗೆ ಬಲಿಬಿದ್ದ ಆ ಮೂರ್ಖರು ಸ್ಫೂರ್ತಿಯನ್ನು ಪ್ರಕೃತಿಯಿಂದ ಪಡೆಯಬಹುದೆಂದು ಭ್ರಾಂತಿಗೊಂಡಿದ್ದಾರೆ. ಕಲೆಗಾರ ಸಾಹಿತಿಗೆ ಆತ್ಮದಲ್ಲಿ ನಂಬಿಕೆಯಿಲ್ಲ. ಅವನ ಒಪ್ಪಿಗೆ ಪಡೆದಿರುವ ತತ್ತ್ವಗಳಲ್ಲಿ ಆತ್ಮಕ್ಕೆ ಸ್ಥಾನವೇ ಇಲ್ಲ. ಅದು ಆದರ್ಶವಾದಿಗಳ ಹುಸಿಗನಸು ಎಂದು ಅವನ ವಾದ. ಅದರ ಹೆಸರು ಏನಾದರೂ ಆಗಲಿ, ಅದನ್ನು ಪ್ರಕೃತಿಯ ಸಹಾಯದಿಂದ ಬೆಳೆಸಬಹುದೆಂದು ಅವನು ಕ್ಷಣಮಾತ್ರವೂ ಒಪ್ಪಲಾರ. ಹುಲ್ಲುಹಸಲೆ, ನದಿಗಳ ಕಲರವ, ಸಂಜೆಗೆಂಪು, ತಿಳಿಬಾನು, ಕೋಗಿಲೆ ಮುಂತಾದ ಜಲ್ಪನೆಯನ್ನು ಕಲೆಗಾರ ಸಾಹಿತಿ ಸಹಿಸಲಾರ. ಅವನು ವಾಸ್ತವವಾದಿ; ಕೋಗಿಲೆಯನ್ನು ಮನೆಗೆ ಸೇರಿಸಲಾರ. ಅದರ ಗಾನವನ್ನು ಯಾರು ಎಷ್ಟೇ ಹೊಗಳಲಿ, ಅವನ ಮನಸ್ಸು ಅದರ ವಿಷಯದಲ್ಲಿ ಆರ್ದ್ರವಾಗದು.

ಪ್ರಕೃತಿಯ ಜೊತೆಗೆ, ಅವ್ಯಕ್ತ ಮಧುರ ಸ್ವರದಿಂದ ಹರಿಯುವ ನದಿಯ ಹಿನ್ನೆಲೆಯಲ್ಲಿ ಹಸುರು ಹಾಸಿನ ಮೇಲೆ ದಿವ್ಯ ಸುಂದರಿಯಾದ ಅಪ್ಸರೆಯೊಬ್ಬಳು ನಿಂತಳೆನ್ನಿ....ಸಂತೋಷ. ಕಲೆಗಾರ ಸಾಹಿತಿ 'ಶಾಂತಂ ಪಾಪಂ' ಎಂದು ಕಣ್ಣು ಮುಚ್ಚಿಕೊಂಡು ಓಡಿಹೋಗುವುದಿಲ್ಲ. ಆಕೆಯನ್ನು ದಿಟ್ಟಿಸಿ ನೋಡುತ್ತಾನೆ; ಅವಳ ಅಂಗಸೌಷ್ಠವವನ್ನು ಬಣ್ಣಿಸುತ್ತಾನೆ; ಅವಳ ಚಿತ್ರವನ್ನು ಪುಸ್ತಕದ ರಕ್ಷಾಕವಚದ ಮೇಲೆ ಹಾಕುತ್ತಾನೆ. ಆಕೆಯ ವಿಷಯ ಕಾದಂಬರಿಯನ್ನೋ ಕಥೆಯನ್ನೋ ಬರೆಯುತ್ತಾನೆ. ಆದರೂ ಬರೆದ ನಂತರ ಅವನ ಮನಸ್ಸಿನಲ್ಲಿ ದೊಡ್ಡದೊಂದು ಸಮಸ್ಯೆ ಎದ್ದು ನಿಲ್ಲುತ್ತದೆ. ಈ ಸ್ತ್ರೀ ಪ್ರೇಮ ಎಷ್ಟು ದೊಡ್ಡದು, ವಿಶ್ವವ್ಯಾಪಿ, ಬಡಬಾಗ್ನಿಯಂತೆ ಸುಡುತ್ತದೆ ಎಂದರೂ, ಅದು ಹಿಂದಿನ ಸಾಹಿತ್ಯದಲ್ಲಿ ಕೇವಲ ವ್ಯಕ್ತಿಗೆ ಸಂಬಂಧಪಟ್ಟದ್ದಾಯಿತು, ಸಾಮಾಜಿಕ ಸಮಸ್ಯೆಯಾಗಲಿಲ್ಲ. ಈಗಿನ ಸಾಹಿತ್ಯ ವ್ಯಕ್ತಿಗೆ ಪ್ರಾಶಸ್ತ್ಯ ಕೊಡುವುದು ಸರಿಯಲ್ಲ. ಈಗ ನಮಗೆ ಸಮಾಜವೇ ಮುಖ್ಯ; ಅದರ ಸಮಸ್ಯೆಗಳನ್ನೇ ನಾವು ಮುಂದಿಡಬೇಕು. ಆದ್ದರಿಂದ ಸ್ತ್ರೀಪುರುಷರ ಪ್ರೇಮ ಸಾಹಿತ್ಯದಲ್ಲಿ ಸ್ಥಾನ ಪಡೆಯಬೇಕಾದರೆ ಅದು ಸಾಮಾಜಿಕ ಸಮಸ್ಯೆಯಾಗಬೇಕು. ಇಬ್ಬರು ವ್ಯಕ್ತಿಗಳ

ಬಾಂಧವ್ಯವಾದರೆ ಅದು ನಮಗೆ ಬೇಡ.

ಕಲೆಗಾರ ಸಾಹಿತಿಗಳಿಗೆಲ್ಲಾ ಕೆಂಪು ಛಾಯೆಯ ಕಣ್ಣಿರಬೇಕೆಂದು ನನ್ನ ಅಭಿಪ್ರಾಯ. ಆ ಬಣ್ಣ ಪೂರ್ವೋಕ್ತವಾದ ಆತ್ಮದ, ಸ್ಫೂರ್ತಿಯ ಸಂಕೇತವೆನ್ನಬಹುದು—ಆತ್ಮ ಎನ್ನುವುದು ಇಲ್ಲವೇ ಇಲ್ಲ ಎಂದರೂ ಸೌಕರ್ಯಕ್ಕಾಗಿ ಆ ಪದವನ್ನೇ ಉಪಯೋಗಿಸೋಣ. ಈ ಆತ್ಮ ಸಮಾಜದ ಹೃದಯವಿದ್ರಾವಕ ಸ್ಥಿತಿಯನ್ನು ನೋಡಿ ತಪಿಸುತ್ತಿರುವಾಗ, ಎದೆ ಉರಿಯುತ್ತಿರುವಾಗ, ಕಣ್ಣು ಕೆಂಪಾಗುವುದು ಸ್ವಾಭಾವಿಕ ತಾನೆ! ಸಮಾಜದ ಶತ್ರುಗಳಾದ ಕ್ಯಾಪಿಟಲಿಸ್ಟರೂ ಬೂರ್ಜ್ವಾ ಜನರೂ ದೀನದಳಿತರ ತುಣುಕುರೊಟ್ಟಿಯನ್ನು ಕಸಿದುಕೊಂಡು ಅವರ ಕರುಳನ್ನು ತುಳಿದು ವಿಕಟ ನೃತ್ಯ ಮಾಡುತ್ತಿರುವಾಗ ಕಣ್ಣು ಕೆಂಪಾಗುವುದಂತಿರಲಿ, ಅದರಿಂದ ದುಃಖಾಶ್ರುವಿಗೆ ಬದಲು ರಕ್ತದ ಕೋಡಿ ಹರಿದೀತು!

ಬಂಡವಾಳಗಾರರೂ ಬೂರ್ಜ್ವಾ ಜನರೂ ನಡಸಿರುವ ಅಮಾನುಷ ಕೃತ್ಯಗಳನ್ನು ಬಣ್ಣಿಸಿ, ದಳಿತರ ಹಸಿವಿನ ಬೇಗೆ ಒಂದಲ್ಲ ಒಂದು ದಿನ ವಿಶ್ವವನ್ನೇ ದಹಿಸುತ್ತದೆ ಎಂದು ಎಚ್ಚರಿಸುವ ಸಾಹಿತ್ಯವೇ ನಿಜವಾದ ಸಾಹಿತ್ಯ. ಆದರೆ ಈ ನಂಬಿಕೆಯುಳ್ಳ ಕಲೆಗಾರ ಸಾಹಿತಿ ತಾನು ಆಶಾವಾದಿಯೆನ್ನಿಸಿಕೊಳ್ಳುವ ಹಂಬಲವನ್ನೂ ಬಿಡಲಾರ. ಆದ್ದರಿಂದ ತಾನು ಚಿತ್ರಿಸುವ ರಕ್ತ ಸಮುದ್ರದಲ್ಲಿ ಅಮೃತಬಿಂದುವೊಂದಿರಬೇಕು. ತಮಸ್ಸಿನಿಂದ ಆವೃತವಾದ ವಿಶ್ವದಲ್ಲಿ ಆಶಾಕಿರಣವೊಂದು ಮಿನುಗುತ್ತಿರಬೇಕು. ಕಲೆಗಾರಸಾಹಿತಿಯ ಆ ಪದ್ಮತಾಮ್ರನಯನಗಳು ದಿಗಂತದ ಕಡೆಗೆ ದೃಷ್ಟಿಯನ್ನು ಬೀರಿ ಅಲ್ಲಿ ಮಂಜುಮಂಜಾಗಿ ಗೋಚರಿಸುವ ಭವಿಷ್ಯವನ್ನು ಕಾಣುತ್ತವೆ. ಅದೊಂದು ಹೊಸ ಪ್ರಪಂಚದ ದರ್ಶನ. ಅಲ್ಲಿ ಬಂಡವಾಳಗಾರರ ಮತ್ತು ಬೂರ್ಜ್ವಾಗಳ ನಾಮ ಸಹ ಅವಶೇಷವಾಗಿ ನಿಂತಿರುವುದಿಲ್ಲ. ಮಾರ್ಕ್ಸ್‌ನ ಮನೋಜನ್ಯವಾದ ಕಾಮಧೇನು ಕಾರ್ಮಿಕರ ತಣಿವಿಗಾಗಿಯೇ ಹಾಲು ಜೇನಿನ ಹೊಳೆ ಹರಿಸುತ್ತದೆ.

ತತ್ವಶಾಸ್ತ್ರವೇತ್ತರಿಗೆ ಒಪ್ಪುವಂತೆ ನಾನು ಸಾಹಿತಿಗಳ 'ಲಕ್ಷಣ' ಹೇಳಿದ್ದೇನೆಯೋ ಇಲ್ಲವೋ ತಿಳಿಯದು. ಇಷ್ಟಕ್ಕೂ 'ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್' ಆದ ಸಾಹಿತಿಯ ಪೂರ್ಣರೂಪವನ್ನು ಒಂದು ಸೂತ್ರದಲ್ಲಿ ಸೆರೆಹಿಡಿಯಲು ನಾನು ಯಾರು! ಸಾಹಿತಿಗಳ ಪ್ರತ್ಯಕ್ಷ ಪರಿಚಯ ಬೇಕೆನ್ನುವವರು ಅವರು ಏರ್ಪಡಿಸುವ ಸಮಾರಂಭಗಳಿಗೆ ಹೇಗಾದರೂ ಹೋಗಬೇಕು; ಅಲ್ಲಿ ನಡೆಯುವ ವಾಚನಸಲ್ಲಾಪಗಳನ್ನು ಸ್ವತಃ

ಕೇಳಬೇಕು. ಹಾಗೆ 'ಶ್ರುಣ್ವನ್ ಕಾವ್ಯಕಥಾನಾದಂ, ಕೋ ನಯಾತಿ ಪರಾಂ ಗತಿಂ!' ಈಗಲೇ 'ಪರಾಂ ಗತಿಂ' ಪಡೆಯುವುದು ಬೇಡ ಎಂದು ಬದುಕಿಗೆ ಅಂಟಿಕೊಳ್ಳುವ ಪಾಮರರ ಮಾತು ಇಲ್ಲಿ ಅಪ್ರಕೃತ.

## ಸಣ್ಣ ಕಥೆಯ ಹಾವಳಿ

ಒಂದಾನೊಂದು ಕಾಲದಲ್ಲಿ "ನಮ್ಮ ಕನ್ನಡ ಸಾಹಿತ್ಯಕ್ಕೆ ಸಣ್ಣಕಥೆ ಪಳಗಿ ಬರಲು ಇಷ್ಟು ತಡವಾದದ್ದೇಕೆ" ಎಂದು ವಿಮರ್ಶಕರು ಚರ್ಚೆ ನಡೆಸುತ್ತಿದ್ದರು. "ಇದು ನಮ್ಮಲ್ಲಿ ಮೊದಲಿನಿಂದಲೂ ಇದ್ದೇ ಇತ್ತು, ಪ್ರಾಮುಖ್ಯ ಪಡೆದದ್ದು ಮಾತ್ರ ಇತ್ತೀಚೆಗೆ" ಎಂದು ಎಷ್ಟೋ ಜನ ಸಮರ್ಥಿಸುವ ಪ್ರಯತ್ನ ಮಾಡಿದರು. ಅಂದರೆ ಆಗ ಸಣ್ಣಕಥೆಯ ವಿಷಯದಲ್ಲಿ ಜನರಿಗೆ ಎಷ್ಟೊಂದು ಅಭಿಮಾನವಿತ್ತೆಂದು ವ್ಯಕ್ತವಾಗುತ್ತದೆ. ಈಗಲಾದರೋ, ಈ ಸಣ್ಣ ಕಥೆ ಬಂದದ್ದೂ ಆಯಿತು, ಬಹು ಕಾಲ ನಮ್ಮೊಡನೆ ಇದ್ದದ್ದೂ ಆಯಿತು ; ಇದನ್ನು ಮರ್ಯಾದೆಯಿಂದ ಸಾಗಿಸುವುದು ಹೇಗೆ ಎಂಬ ಆತಂಕ ಹುಟ್ಟಿದಂತೆ ತೋರುತ್ತದೆ.

ನನ್ನ ಮಟ್ಟಿಗೆ ಹೇಳುವುದಾದರೆ ನಾನು ಎಂದೂ ಸಣ್ಣ ಕಥೆಯನ್ನು ಬರೆದು ಮುಗಿಸಿದವನಲ್ಲ. ಒಂದು ಸಾರಿ ಅದನ್ನು ಪ್ರಾರಂಭಿಸಿದ್ದೇನೋ ಉಂಟು—ನನಗೆ ಜನದ ಮೆಚ್ಚಿಕೆಯನ್ನು ಗಳಿಸಬಹುದಾದ ಕಥಾವಸ್ತುವೂ ಸಿಕ್ಕಿತು : ಒಂದಾನೊಂದು ಪಟ್ಟಣ, ಅದರಲ್ಲಿ ಶ್ರೀಮಂತರ ಮಗಳಾದ ಯುವತಿಯೊಬ್ಬಳಿದ್ದಳು—ಯುವತಿಯೊಬ್ಬಳಿಲ್ಲದೆ ಯಾವ ಕಥೆ ತಾನೆ ಮುಂದೆ ಸಾಗೀತು! ಆಕೆ ಗಾಯಕನೊಬ್ಬನಿಂದ ಸಂಗೀತ ಕಲಿಯುತ್ತಿದ್ದಳು. ಅವಳು ಕಾಲೇಜಿನಲ್ಲಿ ಓದಿದವಳು, ಷೇಕ್ಸ್‌ಪಿಯರನ ನಾಟಕಗಳನ್ನು ಅಭ್ಯಾಸ ಮಾಡಿದವಳು. ಆ ಮಹಾಕವಿ ಒಂದು ಕಡೆ 'If music be the food of love'—ಸಂಗೀತವೇ ಪ್ರೇಮದ ಆಹಾರ ಎಂದು ಬಾಯಿತಪ್ಪಿ ಸೂಚಿಸಿದ್ದಾನೆ. ಈ ಮಾತು ಹುಡುಗಿಯ ಮನಸ್ಸಿಗೆ ನಾಟಿತು. ಒಂದು ಕಡೆ ಸಂಗೀತದ—ಅಥವಾ ಸಂಗೀತಗಾರನ—ಮೇಲಿನ ವ್ಯಾಮೋಹವನ್ನೂ ಮತ್ತೊಂದು ಕಡೆ ತನ್ನ ಶ್ರೀಮಂತಿಕೆಯನ್ನು ತೂಗಿ ನೋಡಿದಳು. ತಕ್ಕಡಿಯು ಸಂಗೀತದ ಕಡೆಗೇ ಒಲೆಯಿತು. ಸರಿ. ಅದೇ ತನಗೆ ಶರಣು ಎಂದುಕೊಂಡು ತನ್ನ ಗಾಯಕ—ಗುರುವನ್ನೇ ಮದುವೆಯಾಗಲು ನಿಶ್ಚಯಿಸಿದಳು.

ಆಕೆಯ ತಂದೆತಾಯಿಗಳಿಗೆ ಇದು ಸರ್ವಥಾ ಒಪ್ಪಿಗೆಯಾಗಲಿಲ್ಲ. ಅವರು ಅದ್ವೈತ ಸಂಪ್ರದಾಯದಲ್ಲಿ ಬೆಳೆದವರಾದರೂ ಸಂಗೀತಗಾರನೇ ಬೇರೆ, ಸಂಗೀತವೇ ಬೇರೆ ಎಂಬ ಭೇದಬುದ್ಧಿ ಹೇಗೋ ಅವರಲ್ಲಿ ನೆಲಸಿಬಿಟ್ಟಿತ್ತು.

ಸಂಗೀತದವರೆಗೆ ಹೋಗಬಹುದು, ಅಲ್ಲಿಂದ ಮುಂದುವರಿದು ಸಂಗೀತಗಾರನನ್ನು ಇಕ್ಕಳದಿಂದಲೂ ಮುಟ್ಟಬಾರದು ಎಂದು ಅವರ ನಿಶ್ಚಲವಾದ ಅಭಿಪ್ರಾಯ. ಸೀತೆಯನ್ನು ಬಿಟ್ಟು ಲಕ್ಷ್ಮಣ ಕಾಂಚನಮೃಗಾರ್ಥಿಯಾದ ರಾಮನನ್ನು ಹುಡುಕಹೋದನಲ್ಲ; ಆ ಆಶ್ರಮದ ಮುಂದೆ ಏಳು ಗೆರೆಗಳನ್ನು ಹಾಕಿ ಏಳನೆಯ ಗೆರೆಯನ್ನು ದಾಟಿ ಹೋಗಲೇಕೂಡದೆಂದು ಸೀತೆಗೆ ಎಚ್ಚರಿಕೆ ಕೊಟ್ಟಿದ್ದನಂತೆ. ನಮ್ಮ ಕಥಾನಾಯಕಿಯ ಮಾತಾಪಿತೃಗಳ ಭಾಗಕ್ಕೆ ಸಂಗೀತಗಾರನೇ ಆ ಏಳನೆಯ ಗೆರೆ. ಅಲ್ಲಿಯವರೆಗೆ ಹೋಗಬಹುದು, ಅದರ ಮೇಲೆ ನಿಲ್ಲಲೂ ಬಹುದು; ಅದನ್ನು ದಾಟಿದರೆ ಆಚೆಯ ಕಡೆ ಗಾಯಕ-ರಾವಣ ನಿಂತಿದ್ದಾನೆ! ಹುಡುಗಿ ಏಳನೆಯ ಗೆರೆಯನ್ನು ದಾಟಿದಳು—ಆಕಸ್ಮಾತ್ತಾಗಿ ಅಲ್ಲ, ಉದ್ದೇಶಪೂರ್ವಕವಾಗಿ.

ಮುಂದೇನಾಯಿತೆನ್ನುವುದು ಸರಿಯಾಗಿ ನೆನಪಿಲ್ಲ. ಆವಳು ರುದ್ರ ನಾಟಕದ ನಾಯಕಿಯರಂತೆ ರುಷ್ಟಗಾಂಭೀರ್ಯವನ್ನು ತಾಳಿ, ತಂದೆತಾಯಿಯರನ್ನು ಎದುರಿಸಿ ತನ್ನ ಐದು ಅಡಿ ಒಂದಂಗುಲದ ಎತ್ತರಕ್ಕೂ ನಿಂತು, "ನಾನು ಸಮಾಜವನ್ನೂ ಶ್ರೀಮಂತಿಕೆಯನ್ನೂ ತ್ಯಜಿಸುವುದು ಮಾತ್ರವಲ್ಲ, ನಿಮ್ಮನ್ನೂ ತ್ಯಜಿಸಿದ್ದೇನೆ" ಎಂದು ದೃಢವಾಣಿಯಿಂದ ನುಡಿದು, ತನ್ನ ಮನೋನಿಶ್ಚಯಕ್ಕೆ ತಾನೇ ಬೆರಗಾಗಿ, ಸಂಗೀತಗಾರನ ಕರಾವಲಂಬನ ಪಡೆದು ಮನೆಯನ್ನು ಬಿಟ್ಟಳೆಂದು ತೋರುತ್ತದೆ. ಕಥೆ ಇಷ್ಟು ದೂರ ಸಾಗಿತ್ತು; ಇನ್ನು ಪುರೋಹಿತರು "ಸುಮುಹೂರ್ತಾ ಸಾವಧಾನಾ' ಎಂದು ಘೋಷಿಸಿರಲಿಲ್ಲ—ಅಷ್ಟರಲ್ಲೇ ನನಗೆ ಈ ನನ್ನ ಮಾನಸಪುತ್ರಿಯ ವಿಷಯದಲ್ಲಿ ಅಸಡ್ಡೆ ಮಾತ್ರವಲ್ಲ, ತಿರಸ್ಕಾರವೂ ಹುಟ್ಟಿತ್ತು. ಕರುಣೆ, ದಯೆ, ಶಾಸ್ತ್ರಜ್ಞಾನ, ವ್ಯವಹಾರಜ್ಞಾನ—ಮುಂತಾದ ಗುಣಗಳ ಸೂಚಕವಾಗಿ ನಮ್ಮ ತಲೆಯ ಮೇಲೆ ಗುಣಕ್ಕೊಂದರಂತೆ ಉಬ್ಬುಗಳಿರುತ್ತವೆಯಂತೆ. ಈ ಹುಡುಗಿಗೆ ದೇವರು ವ್ಯವಹಾರಜ್ಞಾನದ ಉಬ್ಬನ್ನೇನಾದರೂ ಕೊಟ್ಟಿದ್ದನೋ ಇಲ್ಲವೋ ಕಾಣೆ; ಕೊಟ್ಟಿದ್ದರೂ ಯಾರೋ ಅದನ್ನು ಸುತ್ತಿಗೆಯಿಂದ ಬಡಿದು ಸಮಮಾಡಿರಬೇಕು. ನಾನು ಕಥೆಯನ್ನು ಅಲ್ಲಿಗೇ ಬಿಟ್ಟು ಕೊಟ್ಟೆ. ಕಲಾಪಿಶಾಚಗ್ರಸ್ತರಾದ ಆ ಪ್ರೇಮಿಗಳಿಬ್ಬರೂ ತೊಲಗಿದರಲ್ಲ ಎಂದು ನನ್ನ ಮನಸ್ಸು ಹಗುರವಾಯಿತು. ಅಲ್ಲಿಂದೀಚೆಗೆ ನಾನು ಅತ್ತ ಇತ್ತ ತಿರುಗುವಾಗ ಒಂದೆರಡು ಬಾರಿ ಸಣ್ಣ ಕಥೆಯನ್ನು ಎಡವಿರಬಹುದು. ಆದರೆ ಪ್ರಯತ್ನಪೂರ್ವಕವಾಗಿ ಅದನ್ನು ಬರೆಯುವ ಕೆಲಸಕ್ಕೆ ಕೈಹಾಕಿಲ್ಲ.

ಈ ಕಾಲದಲ್ಲಿ ಸಣ್ಣಕಥೆಯನ್ನು ಬರೆಯಹೊರಡುವವನ ಪಾಡು

ನಿಜವಾಗಿಯೂ ಕಷ್ಟ. ಪ್ರಾರಂಭದಲ್ಲೇ ಕಥಾವಸ್ತು ಯಾವುದು, ಯಾವ ವಿಷಯ ಕುರಿತು ಬರೆಯೋಣ, ಎಂದು ತಲೆ ಕೆರೆದುಕೊಳ್ಳಬೇಕಾಗುತ್ತದೆ. ಹಿಂದಿನ ಕಾಲದಲ್ಲಿ, ಅಂದರೆ 1925ರ ಸುಮಾರಿಗೆ ನಡೆಯುತ್ತಿದ್ದ ಸಣ್ಣ ಕಥೆಯ ಸ್ವರ್ಣಯುಗದಲ್ಲಿ, ನಮ್ಮ ಕನ್ನಡಿಗರಿಗಂತೂ ಇದೊಂದು ದೊಡ್ಡ ಸಮಸ್ಯೆಯೆಂದು ತೋರಲಿಲ್ಲ. ಲೇಖನಿ ಹಿಡಿದು ಮೇಜಿನ ಮುಂದೆ ಕುಳಿತರೆ ಸಾಕು, ವಾರದ ಹುಡುಗ ಅಥವಾ ಭಿಕ್ಷಾನ್ನದ ಹುಡುಗನ ಚಿತ್ರ ಅನಾಯಾಸವಾಗಿ ಕಣ್ಣೆದುರಿಗೆ ಮೂಡುತ್ತಿತ್ತು. ಅದು ಕರುಣಾಜನಕವಾದ ಚಿತ್ರ. ಆ ಹುಡುಗ, ಪಾಪ ಚಿಕ್ಕಂದಿನಲ್ಲೇ ತಂದೆತಾಯಿಯರನ್ನು ಕಳೆದುಕೊಂಡಿದ್ದಾನೆ, ಬಹುಶಃ ಪ್ಲೇಗಿನಲ್ಲಿ. ಹುಡುಗ ಭಿಕ್ಷಾನ್ನಕ್ಕಾಗಿ ತಿರುಗುತ್ತಿದ್ದಾಗ ವಿಧಿ ಅವನ ಮೇಲೆ ಕರುಣೆಯಿಟ್ಟು ಒಬ್ಬರ ಮನೆಯ ಬಾಗಿಲಿಗೆ ತಂದುಬಿಟ್ಟಿತು. ಅಲ್ಲಿದ್ದವರು ದಯಾರ್ದ್ರಹೃದಯರಾದ ದಂಪತಿಗಳು. ಅವರಿಗೆ ಒಬ್ಬಳೇ ಮಗಳು—ಈ ಅಂಶ ಈಗಾಗಲೇ ನಿಮಗೆ ಹೊಳೆದಿರಬೇಕು. ಭಿಕ್ಷಾನ್ನದ ಹುಡುಗ ಬಾಗಿಲಿಗೆ ಬಂದಾಗ ಈ ಹುಡುಗಿ ಅವನನ್ನು ಗದರಿಸಿ 'ಮುಂದಕ್ಕೆ ಹೋಗು' ಎಂದು ಹೇಳಿ ಅಟ್ಟುತ್ತಿದ್ದಳು. ಅಷ್ಟರಲ್ಲೇ ತಾಯಿ ಬಂದು, (ಇದೇ ಅದೃಷ್ಟ ಎನ್ನುವುದು. ಆ ಹೊತ್ತಿಗೆ ಸರಿಯಾಗಿ ತಾಯಿ ಬರದಿದ್ದರೆ ಕಥೆ ಏನಾಗುತ್ತಿತ್ತೊ!) ಮಗಳಿಗೆ ಬುದ್ಧಿ ಹೇಳಿ ಆ ಹುಡುಗನನ್ನು ತನ್ನ ಮನೆಯಲ್ಲೇ ಇರಹೇಳಿದಳು. (ಇಲ್ಲಿ ಸ್ತ್ರೀ ಹೃದಯದ ಮಾರ್ದವದ ಮೇಲೆ ನಾಲ್ಕು ಪ್ಯಾರಾ ಬರೆಯಬಹುದು.) ಹುಡುಗ ಮೊದಲು ಬೇಡ ಎಂದ—ಅವನಿಗೆ ಆತ್ಮಗೌರವವಿರಬೇಕಷ್ಟೆ. ಆದರೆ ಕೊನೆಗೆ ಒಪ್ಪಿಕೊಂಡ. ಅನಂತರ ಪರೀಕ್ಷೆಗಳಲ್ಲಿ ತೇರ್ಗಡೆಯಾದ, ಮೆಡಲುಗಳನ್ನು ಸಂಪಾದಿಸಿದ, ಕೊನೆಗೆ ಎಂ.ಸಿ.ಎಸ್.ನಲ್ಲಿ ಪ್ರಥಮ ಸ್ಥಾನವನ್ನೂ ಪಡೆದ. ಆಗಿನ ಕಾಲದಲ್ಲಿ ಮಹತ್ವಾಕಾಂಕ್ಷಿಗಳಿಗೆ ಇದ್ದ ದಾರಿ ಎಂ.ಸಿ.ಎಸ್. ಒಂದೇ. ಉಳಿದ ಕಥೆಯನ್ನು ನಿಮ್ಮ ಊಹೆಗೇ ಬಿಡಬಹುದು. ಹೌದು, ಭಿಕ್ಷಾನ್ನದ ಹುಡುಗ ತನ್ನನ್ನು ಬಾಗಿಲಿನಿಂದ ತೊಲಗು ಎಂದಿದ್ದ ಆ ಹುಡುಗಿಯನ್ನೇ ಮದುವೆಯಾದ. ಅವನು ಗೆದ್ದಿದ್ದ ಮೆಡಲುಗಳು ಆ ಸಾಧ್ವಿಯ ವಕ್ಷಸ್ಥಲದಲ್ಲಿ ಶೋಭಿಸಿದವು. ಗಂಡಹೆಂಡತಿ ನೂರುಕಾಲ ಸುಖವಾಗಿ ಬಾಳಿದರು. ಹೆಂಡತಿ ತನ್ನನ್ನು ಅಟ್ಟಿದ್ದ ಸನ್ನಿವೇಶ ಎಷ್ಟೋ ವೇಳೆ ಮೃದುವಾದ, ಕಹಿಯಿಲ್ಲದ ಹಾಸ್ಯಕ್ಕೆ ಅವಕಾಶ ಕಲ್ಪಿಸಿತು. ಅವರ ಮನೆಗೆ ಬಂದ ಭಿಕ್ಷಾನ್ನದ ಹುಡುಗ ಎಂದೂ ಬರಿಗೈಯಲ್ಲಿ ಹೋಗಲಿಲ್ಲ.

ಬಹು ಸುಲಭವಾಗಿ ಒಂದು ಕಥೆ ಬೆಳೆದಂತಾಯಿತಲ್ಲವೆ ? ಇಂಥ ಕುಟಿಲವನ್ನರಿಯದ, ವಿಡಂಬನೆಯ ಸೋಂಕಿಲ್ಲದ, ಸರಳ ಕಥಾವಸ್ತು ಆಗಿನ ಕಾಲದಲ್ಲಿ ಮಾನ್ಯತೆ ಪಡೆದದ್ದು ಆಶ್ಚರ್ಯವೂ ಅಲ್ಲ, ತಪ್ಪೂ ಅಲ್ಲ, ಆಗ ಇನ್ನೂ ವಾರದ ಹುಡುಗರೂ ಭಿಕ್ಷಾನ್ನದ ಹುಡುಗರೂ ನಮ್ಮ ಸಾಹಿತ್ಯಕ್ಕೆ ಕಾಲಿಟ್ಟಿರಲಿಲ್ಲ. ಹೊಸಬರಿಗೆ ದೊರೆಯಬಹುದಾದ ಸ್ವಾಗತ ಅವರಿಗೆ ದೊರೆಯಿತು. ಕಥೆಗಾರನಿಗೆ ಇಂಥ ವಸ್ತುವಿನ ವಿಷಯ ಉತ್ಸಾಹವಿದ್ದದ್ದರಿಂದ ಕಥೆಗೆ ಕಳೆ ಬಂತು, ಓದುಗನಿಗೂ ಆಸಕ್ತಿ ಬಂತು.

ಆದರೆ ಈ ಪರಿಸ್ಥಿತಿ ಬಹುಕಾಲ ನಡೆಯಲಿಲ್ಲ. ಆಹಾರದ ಅಭಾವವಿರುವ ಈಗಿನ ಕಾಲದಲ್ಲಿ ಕಥೆಗಾರರೇನಾದರೂ ಕಂಡವರ ಮನೆಗೆ ಭಿಕ್ಷಾನ್ನದ ಹುಡುಗರನ್ನು ತಳ್ಳಿದರೆ ಮನೆಯವರು ಸುಮ್ಮನೆ ಬಿಟ್ಟಾರೆ! ಅಂಥ ಹುಡುಗರು ಐ.ಎ.ಎಸ್. (ಈಗ ಎಂ.ಸಿ.ಎಸ್. ಇಲ್ಲವಲ್ಲ!) ಪ್ಯಾಸು ಮಾಡುತ್ತಾರೆಂಬ ಭರವಸೆಯೇನಿದೆ ? ಯಾವ ಧೈರ್ಯದ ಮೇಲೆ ಮಗಳನ್ನು ಮದುವೆ ಮಾಡಿಕೊಡುವುದು ? ಇದನ್ನೆಲ್ಲಾ ಕಥೆಗಾರರು ಹೇಗೋ ಕಂಡುಕೊಂಡರು. ಇತ್ತ ಓದುಗರೂ ಹಿಂದಿನವರಂತೆ ಹೇಳಿದಷ್ಟನ್ನು ನಂಬದೆ "ಆ ಗಂಡಹೆಂಡತಿ ನಿಜವಾಗಿಯೂ ನೂರು ಕಾಲ ಸುಖವಾಗಿ ಬಾಳಿದರೆ? ಒಬ್ಬರೊಡನೊಬ್ಬರು ಜಗಳ ಆಡಲೇ ಇಲ್ಲವೆ ?" ಎಂದು ಮುಂತಾಗಿ ಪ್ರಶ್ನೆ ಹಾಕಲಾರಂಭಿಸಿದರು. ಭಿಕ್ಷಾನ್ನದ ಹುಡುಗ ಸಾಹಿತ್ಯದಿಂದ ಅದೃಶ್ಯನಾದ. ಅವನ ಸ್ಥಾನದಲ್ಲಿ ಕಲೆಗಾರರು ಬಂದು ಕುಳಿತರು. ವಾತಾವರಣವೆಲ್ಲಾ ಈ ಕಲೆಯೆಂಬ ಗಗನಕುಸುಮದ ಗಂಧದಿಂದ ದಟ್ಟವಾಯಿತು. ಬರಹಗಾರರೆಲ್ಲಾ—ಕಥೆಗಾರರು ಮತ್ತು ಇತರರು—ಗಾಯಕರು, ಚಿತ್ರಗಾರರು, ಶಿಲ್ಪಿಗಳು, ನಟರು, ಮುಂತಾದವರ ವಿಷಯ ಬರೆಯಲಾರಂಭಿಸಿದರು. (ನನಗೇನೋ ಮತ್ತೆ ಭಿಕ್ಷಾನ್ನದ ಹುಡುಗರೇ ಬರಬಾರದೆ ಎನ್ನಿಸಿದೆ!) ಕಥೆಗಾರರಿಗೆ ಇವರ ವಿಷಯದಲ್ಲಿ ಎಲ್ಲೆ ಮೀರಿದ ಸಹಾನುಭೂತಿ ; ಅವರೂ ಕಲೆಗಾರರೇ ತಾನೆ! ನಾನೂ ಇಂಥ ಕಥೆಗಳನ್ನೇಕೆ ಬರೆಯಬಾರದು ಎಂಬ ಯೋಚನೆ ಹೊಳೆಯಿತು. ಆದರೆ ನನಗೆ ಕಲೆಗಾರನೆಂದು ಹೆಸರಿಟ್ಟುಕೊಳ್ಳುವ ಧೈರ್ಯವಿಲ್ಲ. ಈ ಕಲೆಗಾರರ ಉದ್ರಿಕ್ತ ಮನೋವೃತ್ತಿಯೂ ನನಗೆ ಹಿಡಿಸದು. ಅಲ್ಲದೆ, ಸಾಹಿತ್ಯದಲ್ಲಿ ಬರುವ ಕಲೆಗಾರರ ಜೀವನ ನಡತೆಗಳ ವಿಷಯ ಬರೆಯಬೇಕಾದರೆ ನನ್ನಲ್ಲಿರುವುದಕ್ಕಿಂತ ಹೆಚ್ಚು ಔದಾರ್ಯ ಬೇಕಾಗುತ್ತದೆ. ಆದ್ದರಿಂದ ನನಗೂ ಕಲೆಗಾರರಿಗೂ ಜಮಾವಣೆ ಇಲ್ಲ ಎಂದುಕೊಂಡು ಆ ಕಥಾವಸ್ತುವನ್ನು ಬಿಟ್ಟು ಕೊಡಬೇಕಾಯಿತು.

ಅದು ಹೋದರೂ ಪ್ರೇಮವೊಂದಿದೆಯಲ್ಲ, ಎಲ್ಲ ಮಾನವರಲ್ಲೂ ನೆಲ ಸಿರುವ ವಿಶ್ವಮೋಹಕವಾದ, ಎಷ್ಟು ಬಳಸಿದರೂ ಹಳತಾಗದ ಪ್ರೇಮ. ಪ್ರೇಮಿಗಳನ್ನು ಕಂಡರೆ ಲೋಕಕ್ಕೆಲ್ಲಾ ಪ್ರೇಮವಂತೆ—ಲೋಕದಲ್ಲಿ ಸಣ್ಣ ಕಥೆಗಾರರೂ ಸೇರಿದ್ದಾರಷ್ಟೆ. ನಾನು ಪ್ರೇಮಕಥೆ ಬರೆಯಲು ಪ್ರಯತ್ನಿಸಿದ್ದನ್ನು ಆಗಲೇ ಹೇಳಿದ್ದೇನೆ. ಆ ಪ್ರಯತ್ನ ಹಿತವಾಗಲಿಲ್ಲ. ಅಲ್ಲಿಂದಾಚೆಗೆ ಕಥೆಗಾರರನೇಕರು ಬೇಕಾದಷ್ಟು ಪ್ರೇಮಕಥೆಗಳನ್ನು ಬರೆದಿದ್ದಾರೆ, ಯುವ ದಂಪತಿಗಳ ಪ್ರೇಮದ ಸೊಂಪನ್ನೂ ಸರಸ ಸಲ್ಲಾಪಗಳನ್ನೂ ತಂದು ನೆಟ್ರಿ ಹಿಡಿಯುವ ಮಟ್ಟಿಗೆ ಕಥೆಗಳಲ್ಲಿ ತುಂಬಿದ್ದಾರೆ. ಮೊದಲು ಎಳೆಯ ಚಿಗುರಾಗಿದ್ದ ಈ ಕಥಾವಸ್ತು ಈಗ ಹಣ್ಣೆಲೆಯಾಗಿ ತನ್ನ ಕಾಲ ಬಂದಾಗ ಉದುರದೆ ಇನ್ನೂ ಕಣ್ಣು ಕುಕ್ಕುತ್ತ ಮರಕ್ಕೆ ಅಂಟಿಕೊಂಡಿದೆ.

(ಹೋಗಲಿ, ಪ್ರೇಮಕಥೆಗಳಿಗೆ ಹೇಗೋ ಬಣ್ಣ ಕಟ್ಟಬಹುದು ಎನ್ನೋಣ. ನಿಮ್ಮ ಸಂಕಟ ಅಲ್ಲಿಗೆ ಮುಗಿಯಲಿಲ್ಲ. ಪ್ರೇಮವೇನೋ ಎಲ್ಲರಿಗೂ ಬೇಕಾದದ್ದೇ.] ಆದರೆ ಈ ಹಾಳು ಸಮಾಜ ಯಾವುದೋ ಹಳೆಯ ಅಭಿಪ್ರಾಯಗಳಿಗೆ ಮನ್ನಣೆಕೊಟ್ಟು, ಪ್ರೇಮದ ಮಾತು ಬಂದಾಗಲೆಲ್ಲಾ ಜೊತೆಗೆ ಮದುವೆ, ಪಾತಿವ್ರತ್ಯ, ಶಿಷ್ಟಸಂಪ್ರದಾಯ, ಮುಂತಾದ ಅಪ್ರಕೃತ ವಿಷಯಗಳನ್ನು ಎತ್ತುತ್ತದೆ. ಸಾಹಿತಿಗಳಲ್ಲಿ ಒಂದು ಗುಂಪಿನವರಿಗೆ ಇದೆಲ್ಲಾ ಓಬೀರಾಯನ ಕಾಲದ ಅಸಂಬದ್ಧ ಪ್ರಲಾಪ. ಅವರಿಗೆ ಪ್ರೇಮದ ವಿಷಯದಲ್ಲಿ ಆಕ್ಷೇಪಣೆಯೇನೂ ಇಲ್ಲ; ಆದರೆ ಮೇಲೆ ಹೇಳಿದ ಅಪ್ರಕೃತ ನಿಯಮಗಳಿಂದ ಅದನ್ನು ಪ್ರತ್ಯೇಕಿಸಬೇಕು, ಅಷ್ಟೆ.

ಇವರು ಹೀಗಾದರೆ ಇನ್ನೊಂದು ಗುಂಪಿನವರಿಗೆ ಪ್ರೇಮದ ಹೆಸರೆತ್ತಿದರೇ ಆಗದು. ಅದಕ್ಕೆ ಬಹಿಷ್ಕಾರ ಹಾಕಲು ಅವರು ಒಂದು ಸಂಘವನ್ನೇ ಏರ್ಪಡಿಸಿರುವಂತೆ ತೋರುತ್ತದೆ. "ಇದೆಲ್ಲಾ ರಮ್ಯಮನೋವೃತ್ತಿಗೆ ಬಲಿಬಿದ್ದವರ ಭ್ರಮೆ. ಇನ್ನೆಷ್ಟು ದಿನ ಈ ಪ್ರೇಮದ ಜಲ್ಪನೆಯನ್ನು ಸಹಿಸೋಣ!" ಎಂದು ತಮ್ಮ ಸಂಕಟವನ್ನು ತೋಡಿಕೊಳ್ಳುತ್ತಾರೆ. ಜೀವನವೆಂದರೇನು ಪ್ರೇಮವೆ, ಸರಸ ಸಲ್ಲಾಪವೆ, ನಗುಮುಖದ ಉಲ್ಲಾಸವೆ! ಕಣ್ಣುಬಿಟ್ಟು ನೋಡಿದರೆ ಅದರ ರೌದ್ರತೆ ಮನವರಿಕೆಯಾದೀತು. ಮಾನವನ ಜೀವನ ರಮ್ಯವಾಗುವುದಂತಿರಲಿ, ಅದೊಂದು ಕರಾಳ ಪಿಶಾಚಿಯ—ಅರ್ಥಾತ್ ಶ್ರೀಮಂತರ—ಭೀಷಣ ತಾಂಡವ. ಆದ್ದರಿಂದ ಜೀವನಕ್ಕೆ ಕನ್ನಡಿ ಹಿಡಿಯಬೇಕಾದ ಕಥೆಗಾರನ ಕರ್ತವ್ಯವೇನು ? ಈ ತಾಂಡವವನ್ನು

ವಾಸ್ತವ ದೃಷ್ಟಿಯಿಂದ ಚಿತ್ರಿಸುವುದು. ಹಿಂದಿನ ಕಥೆಗಾರರಂತೆ ಮನ್ನ ಮೋಹಕವಾದ ವರ್ಣರಂಜಿತ ಚಿತ್ರಗಳನ್ನು ಅಳವಡಿಸಿ ಕಥೆಯನ್ನು ನೇಯ್ದರೆ ಅದು ಜೀವನಚಿತ್ರ ಎನ್ನಿಸಿಕೊಂಡೀತೆ ! ಕಾಮನಬಿಲ್ಲಿಗೂ ಜೀವನಕ್ಕೂ ಬಲು ದೂರ. ಆದ್ದರಿಂದ ನಾವು ಬರೆವರೆ ಬಡತನ, ಹಸಿವು, ದಾಹ, ದೀನದಲಿತರ ಗೋಳು, ಶ್ರೀಮಂತರ ಮತ್ತು ಬೂರ್ಜ್ವಾ ಜನರ ದಬ್ಬಾಳಿಕೆ, ಮುಂತಾದುವನ್ನು ಕುರಿತೇ ಕಥೆ ಬರೆಯಬೇಕು. ಕಥೆಗೆ ಬಣ್ಣ ಬರಬೇಕಾದರೆ ಅಲ್ಲಲ್ಲಿ ರಕ್ತವನ್ನು ಹರಿಸಬೇಕು. ಇಂಥ ಕಥೆಗಳನ್ನು ಬರೆದರೆ ದೇಶಸೇವೆ ಮಾಡುತ್ತಿದ್ದೇವೆಂದು ನಮಗೆ ನಾವೇ ಶಾಬಾಸುಗಿರಿ ಕೊಟ್ಟುಕೊಳ್ಳಬಹುದು—ಕಥೆಗಳನ್ನು ಓದಿದವರೆಲ್ಲಾ ಕೂಡಲೇ ಕಣ್ಣಿನ ಪೊರೆ ಕಳೆದು, ಮೈಯಿನ ಆಲಸ್ಯ ಹರಿದು, ಸಮಾಜ ಸುಧಾರಣೆಗಾಗಿ ಕಂಕಣ ತೊಟ್ಟು ನಿಲ್ಲುವರಷ್ಟೆ !

ಇದನ್ನೆಲ್ಲಾ ಗಮನಿಸಿ ನಾನೂ ಪ್ರಗತಿಪರವಾದ ಕಥೆಗಳನ್ನು ಬರೆಯಬಾರದೇಕೆ ಎನ್ನಿಸಿತು. ಆ ಉದ್ದೇಶದಿಂದ ಮೊದಲು ಅಂಥ ಕಥೆಗಳನ್ನು ತಂದು ಓದಿದೆ. ಪೂರ್ವಸಿದ್ಧತೆ ಮುಗಿಯುವುದರೊಳಗೆ ನನಗೆ ಈ ಸಾಹಿತ್ಯದ ದೀನದಲಿತರ ಮೇಲೆ ಕರುಣೆ ಉದ್ಭವಿಸುವುದಂತಿರಲಿ, ಅವರ ಹೆಸರೆತ್ತಿದರೆ ರೊಚ್ಚಿಗೇಳುವಂತಾಯಿತು. ಜೀವನದಲ್ಲಿ ನಾನು ಕಂಡ ದೀನದಲಿತರೇ ಬೇರೆ, ಇಲ್ಲಿದ್ದವರೇ ಬೇರೆ. ಅವರ ಮೇಲೆ ಮರುಕದ ಹೊಳೆ ಹರಿಸುವುದಕ್ಕೆ ನಮಗಿರುವ ಮಹಾ ಕೊಳ್ಳೆಹೋಗುವಂಥ ಶ್ರೀಮಂತಿಕೆ ಯೇನು ? ನನ್ನಲ್ಲಿರುವ ಮರುಕದ ದಾಸ್ತಾನು ನನಗೇ ಸಾಲದು ; ಇನ್ನು ಈ ಕಾಲ್ಪನಿಕ ದಲಿತರಿಗೆ ಎಲ್ಲಿಂದ ತಂದುಕೊಡಲಿ ?

ಹೀಗೆ ಸಣ್ಣ ಕಥೆಗೆ ವಸ್ತುವನ್ನು ಹುಡುಕಿ ಹುಡುಕಿ ಹುಚ್ಚು ಹಿಡಿಯುವಂತಾಯಿತು. ಆ ವೇಳೆಗೆ ಹೊಸ ಯೋಚನೆಯೊಂದು ಬಂತು. ನೀತಿ ಪ್ರಧಾನವಾದ ಕಥೆಗಳನ್ನು ಬರೆಯಬಾರದೇಕೆ ? ನಥಾನಿಯೆಲ್ ಹಾಥಾರ್ನ್ ಹೇಗಿದ್ದರೂ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾನೆ. ಅಲ್ಲದೆ ಕಥೆ ಹೇಳುತ್ತಾ ಹೇಳುತ್ತಾ ಗುಟ್ಟಾಗಿ ನಮ್ಮಲ್ಲಿ ನೀತಿಪ್ರಚೋದನೆ ಮಾಡುವಂಥ ಕಥೆಗಳ ವಿಷಯದಲ್ಲಿ ನನಗೆ ಪಕ್ಷಪಾತವಿದೆಯೆಂದೂ ಒಪ್ಪಬೇಕು. ಇತರ ಬಗೆಯ ಕಥೆಗಳಲ್ಲಿ ಅಭಿಮಾನವಿಲ್ಲವೆಂದಲ್ಲ. ಮೋಪಸಾಂತನ 'ಒಂದು ತುಂಡು ದಾರ' ಎಂಬ ಕಥೆಯನ್ನು ಓದಿ ಆನಂದಪಟ್ಟಿದ್ದೇನೆ. ಅವನ 'ದಿ ನೆಕ್‌ಲೇಸ್' ಎಂಬ ಕಥೆ ಒಡವೆಗೆ ಆಸೆಪಡಬಾರದೆಂಬ ನೀತಿಯನ್ನು ಬೋಧಿಸುತ್ತದೆ ಯೆಂದೂ ಅದರ ಉದ್ದೇಶ ಚಿನಿವಾರರ ಲಾಭಕ್ಕೆ ಕಲ್ಲು ಹಾಕುವುದೆಂದೂ

ನಾನು ಒಪ್ಪಲಾರೆ. ಅಂಥ ಉದ್ದೇಶವಿಲ್ಲದಿದ್ದರೂ ಕಥೆ ಚೆನ್ನಾಗಿದೆ. ನೀತಿಯನ್ನು ತಂದು ತುಂಬಿದರೆ ಈ ಕಥೆಯ ಸ್ವಾರಸ್ಯ ಹಾಳಾಗುತ್ತದೆಂದು ನನ್ನ ಅಭಿಪ್ರಾಯ. ಆದರೂ ನನಗೆ ಹಾಥಾರ್ನ್ ಕಥೆಗಳೂ ಸ್ಟೀವನ್‌ಸನ್ನನ 'ಮಾರ್ಕ್‌ಹೈಮ್'ನಂಥ ಕಥೆಗಳೂ ಬಹಳ ಪ್ರಿಯ. ಅಂಥ ಪುಸ್ತಕಗಳನ್ನು ಓದಿ ಕೆಳಗಿಟ್ಟೊಡನೆ ಕಥೆ ಮುಗಿಯುವುದಿಲ್ಲ. ಆಮೇಲೆ ಸಾವಧಾನವಾಗಿ ಮೆಲುಕು ಹಾಕುವಂಥ ವಿಷಯ ಏನಾದರೂ ಇರುತ್ತದೆ.

ಹೀಗೆಂದುಕೊಂಡು [ಬೋಧಪ್ರದವಾದ ಕಥೆಗಳನ್ನು ಬರೆಯ ಹೊರಟರೆ, ಏಕೋ ಆ ನೀತಿ ಶುದ್ಧ ಟೊಳ್ಳು, ಅಗ್ಗ, ಎನ್ನಿಸುತ್ತದೆ] ಕಥೆಯ ಪಾತ್ರಗಳು ಎಲ್ಲರಂತೆ ಮಾನವರಾಗಿರುವುದನ್ನು ಬಿಟ್ಟು ಯಾವುದೋ ಸದ್ಗುಣ ದುರ್ಗುಣಗಳ ಪ್ರತೀಕವಾಗಿ ಉಳಿಯುತ್ತಾರೆ. "ನಿಮಗೆ ಜೀವಕಳೆ ತುಂಬುತ್ತೇನೆ, ಬನ್ನಿ," ಎಂದು ಎಷ್ಟು ಗೋಗರೆದರೂ ಒಪ್ಪದೆ ಸೆಟೆದು ನಿಲ್ಲುತ್ತಾರೆ. ಅವರು ಆಡುವ ಮಾತು ನಮ್ಮೆಲ್ಲರ ಮಾತುಗಳಂತಲ್ಲ; ಕಾಪಿಪುಸ್ತಕದ ಮೇಲ್ಪಂಕ್ತಿಯಲ್ಲಿರುವ ವಾಕ್ಯಗಳನ್ನು ಉರುಹಚ್ಚಿದಂತೆ ತೋರುತ್ತದೆ. ಇತ್ತ ಕಥೆಗಾರ ಕಣ್ಣು ಬಿಟ್ಟು ಸುತ್ತ ನೋಡಿದರೆ ತಾನಿರುವುದು ಸರಸ್ವತಿಯ ಸಾನ್ನಿಧ್ಯದಲ್ಲಿ ಅಲ್ಲ, ಯಾವುದೋ ಚರ್ಚಿನ ವೇದಿಕೆಯ ಮೇಲೆ, ಎಂದು ವ್ಯಕ್ತವಾಗುತ್ತದೆ.

ಹೀಗೆ ವಸ್ತುಸಂಗ್ರಹಕ್ಕಾಗಿ ನೂರು ಕಡೆ ಯಾತ್ರೆ ಮಾಡಿ ವಿಫಲನಾಗಿ ಬಂದದ್ದಾಯಿತು. ಆಗ ಏಕಾಂಕ ನಾಟಕಗಳ ವಿಷಯ ಮಾತಾಡುತ್ತಾ ವಿಮರ್ಶಕನೊಬ್ಬ ಹೇಳಿದ್ದ ವಾಕ್ಯವೊಂದು ನೆನಪಿಗೆ ಬಂತು! "Surprise, and then surprise, and then more surprise—that is the secret" ಎಂದು ಹೇಳಿದ್ದ, ಆತ. ನಾಟಕದ ವಿಷಯದಲ್ಲಂತೂ ಅವನ ಥಿಯರಿ ನನಗೆ ಒಪ್ಪಿಗೆಯಾಗಲಿಲ್ಲ. ಆದರೂ ಸಣ್ಣ ಕಥೆಯಲ್ಲಿ ಅದನ್ನು ಪ್ರಯೋಗಿಸಿ ಅದರ ಸತ್ವ ಪರೀಕ್ಷೆ ಮಾಡೋಣ ಎಂದುಕೊಂಡು, ವಿಸ್ಮಯಕಾರಕವಾದ ಘಟನೆಗಳನ್ನು ತುಂಬಿ, ವಿಧಿಯ ಚಕ್ರವನ್ನು ಹಠಾತ್ತಾಗಿ ಉರುಳಿಸಿ ಕಥೆ ಬರೆಯುವ ಯೋಚನೆ ಮಾಡಿದೆ.

ಓ ಹೆನ್ರಿಯ ಕಥೆಗಳಲ್ಲಿ ಬರುವ ನಾಯಕರ ಅದೃಷ್ಟ ಇದ್ದಕ್ಕಿದ್ದ ಹಾಗೇ ಬದಲಾವಣೆಯಾಗುವುದಿಲ್ಲವೇ? ಆ ಚಮತ್ಕಾರ ಎಷ್ಟೋ ವೇಳೆ ನನ್ನನ್ನು ಬೆರಗುಗೊಳಿಸಿದೆ. ಮೋಪಸಾಂತನ 'ದಿ ನೆಕ್‌ಲೇಸ್' ಕಥೆಯ ಕೊನೆಯಲ್ಲಿ ವಿಧಿಯು ಮಾದಾಂ ಲ್ವಾಸೆಲ್ಲಳಿಗೆ "ನೀನು ಅಷ್ಟು ವರ್ಷ ದುಡಿದು, ನಿನ್ನ ಯೌವನವನ್ನೆಲ್ಲಾ ಜೀತದಲ್ಲಿ ಸವೆಸಿ, ಆ ಒಡವೆಯ

ಸಾಲ ತೀರಿಸಿದೆಯಲ್ಲ, ಅದು ಸಾಚಾ ಒಡವೆಯಲ್ಲ; ಅದರಲ್ಲಿದ್ದದ್ದು ಕೋಟಾ ರತ್ನಗಳು !" ಎಂದು ತಿಳಿಸಿ, ವಿಕಟವಾಗಿ ನಕ್ಕು, ಹೋಗುವಾಗ ಅನಿರೀಕ್ಷಿತವಾದ ಪೆಟ್ಟು ಕೊಡುತ್ತದೆಯಲ್ಲ, ಅದು ಅದ್ಭುತವಾದ ಕೈಚಳಕ. ಆದರೆ ಈ ಪ್ರತಿಭಾಶಾಲಿಗಳು ಹೋದ ದಾರಿಯಲ್ಲಿ . ನಾನೂ ಹೊರಟಾಗ ಉದ್ದಕ್ಕೂ ಆ ಮಾದರಿಯ ಕಥೆಗಳೆಷ್ಟೋ ಕೆಲವು ಅಸ್ತವ್ಯಸ್ತವಾಗಿ, ಕೆಲವು ಸತ್ತು, ಬಿದ್ದಿದ್ದವು. ಈ ಹೆಣಗಳ ಜೊತೆಗೆ ಹೊಸದೊಂದು ಹೆಣವನ್ನು ಹೇರದಿದ್ದರೆ ನಷ್ಟವೇನು ಎಂದುಕೊಂಡು ಸುಮ್ಮನಾಗಬೇಕಾಯಿತು. ಓದುಗರು ನನ್ನ ಕಥೆಯನ್ನು ನೋಡಿದೊಡನೆಯೆ, "ಓಹೋ, ಸರಿ, ಓ. ಹೆನ್ರಿ ತಾನೆ ? ಮೊನ್ನೆ ಯಾರೋ ಇಂಥದೇ ಒಂದು ಕಥೆಯನ್ನು ಅನುವಾದಿಸಿ ಕೊಂಡರಲ್ಲವೆ ?" ಎನ್ನುತ್ತಾರೆ.

ಇನ್ನು ಉಳಿದದ್ದು ದೆವ್ವದ ಕಥೆ. ಪ್ರಕೃತಿಯ ಸಾಧಾರಣ ನಿಯಮ ಗಳನ್ನು ಮುರಿದು ಅಸ್ಪಷ್ಟವಾದ ಭಯದ ಹೊಗೆಯನ್ನು ಹೊತ್ತಿಸಿ ನರ ಗಳೆಲ್ಲಾ ಕಂಪಿಸುವಂತೆ ಮಾಡುವ ಪ್ರಕೃತ್ಯತೀತವಾದ ಆವರಣವನ್ನು ಸೃಷ್ಟಿಸುವುದೇನೂ ಸಾಮಾನ್ಯದ ಕೆಲಸವಲ್ಲ. ಉನ್ನತ ಭ್ರೂ ಸಾಹಿತಿ ಗಳೇನೋ ಇಂಥ ಕಥೆಗಳನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ಅವರೆದುರಿಗೆ ನನ್ನ ಕೀಳು ಅಭಿರುಚಿಯನ್ನು ಪ್ರದರ್ಶಿಸಲು ಮನಸ್ಸು ಹಿಂಜರಿಯುತ್ತದೆ. ಆದರೆ ನನಗೆ ಇಂಥ ಕಥೆಗಳಲ್ಲಿ ವಿಶ್ವಾಸವಿರುವುದು ನಿಜ. ಎಷ್ಟೋ ಸಾರಿ ಕೋಲ್‌ರಿಜ್ ಬರೆದ ಈ ಮಾದರಿಯ ಕವನ ಗಳನ್ನು ಓದಿ ರೋಮಾಂಚಗೊಂಡು ರಾತ್ರಿಯನ್ನೆಲ್ಲಾ ನಿದ್ರೆಯಿಲ್ಲದೆ ಭಯ ಲೋಲುಪನಾಗಿ ಆನಂದದಿಂದ ಕಳೆದಿದ್ದೇನೆ. ಆದರೆ ಈ ದಾರಿಯಲ್ಲೂ ಶ್ರೀ ಮಾಸ್ತಿ, ಶ್ರೀ ಕೆ. ವಿ. ಅಯ್ಯರ್, ಮೊದಲಾದವರು ನನಗಿಂತ ಮುಂಚೆಯೇ ನಡೆದು ವಿಜಯಸ್ತಂಭಗಳನ್ನು ನೆಟ್ಟಿದ್ದಾರೆ. ಸಾದಾ ದೆವ್ವ, ಬಾಣಂತಿ ದೆವ್ವ, ಮೋಹಿನಿ, ಬ್ರಹ್ಮರಾಕ್ಷಸ—ಯಾವುದಕ್ಕೂ ಕೊರತೆ ಯೇನಿಲ್ಲ. ಇನ್ನು ಓದುಗರಿಗೆ ನನ್ನ ಹಂಗೇನು ಉಳಿಯಿತು ?

ಸಣ್ಣ ಕಥೆ ಕಟ್ಟಬೇಕೆನ್ನುವವನಿಗೆ ಒಂದು ಕಡೆ ಮಾತ್ರ ಖಾಲಿ ನಿವೇಶನ ಸಿಕ್ಕಬಹುದು—ಪತ್ತೇದಾರಿ ಕಥೆಯ ಕ್ಷೇತ್ರದಲ್ಲಿ. ಇದುವರೆಗೆ ಕನ್ನಡ ನಾಡಿನಲ್ಲಿ ಷೆರ್‌ಲಾಕ್ ಹೋಮ್ಸನ ಅವತಾರವಾದಂತಿಲ್ಲ. ಬಹುಶಃ ಭಾರತದ ಇತರ ಭಾಷೆಗಳಲ್ಲೂ ಆಗಿರಲಾರದು. ಇದು ಕೆಳಮಟ್ಟದ ಸಾಹಿತ್ಯವೆಂದರೂ ಕ್ಷುದ್ರ ಸಾಹಿತ್ಯವೆನ್ನಲಾಗುವುದಿಲ್ಲ. ಪತ್ತೇದಾರಿ ಕಥೆ ಬರೆಯಲು ಬೇಕಾದ ಚಮತ್ಕಾರ ನಮ್ಮಲ್ಲಿಲ್ಲವೋ ಅಥವಾ ನಾವು

ಪೊಡ್ಡಸ್ತಿಕೆಯ ದಾಸಯ್ಯಗಳಾಗಿ ಅದನ್ನು ಬಹಿಷ್ಕರಿಸಿದ್ದೇವೆಯೋ, ಕಾರಣ ವೇನಾದರೂ ಇರಲಿ, ಅಂಥ ಕಥೆಗಳು ನಮ್ಮಲ್ಲಿ ಬರದಿರುವುದು ಹೆಮ್ಮೆಯ ವಿಷಯವೇನಲ್ಲ. ಹೊಸ ಕಥಾವಸ್ತುವನ್ನು ಹುಡುಕುತ್ತಿರುವವರು ಈ ಕ್ಷೇತ್ರವಲ್ಲಿ ಅಗೆದು ನೋಡಲಿ; ನಿಧಿಯೇನಾದರೂ ಸಿಕ್ಕಬಹುದು.

ನನ್ನ ಮಟ್ಟಿಗೆ ಹೇಳುವುದಾದರೆ ಈ ಅನ್ವೇಷಣೆ ಸಾಕಾಗಿಹೋಗಿದೆ. ಸಣ್ಣ ಕಥೆಗಳಿಗೆ ಅನುಕೂಲವಾದ ಸಾಮಗ್ರಿ ಸಿಕ್ಕುವುದಿಲ್ಲವೆಂದು ನಾನು ಹಿಂದೆ ಒಂದು ಬಾರಿ ತೀರ್ಮಾನಿಸಿದೆ. ಆದರೆ ಈಗ ಆ ತೀರ್ಮಾನ ತಪ್ಪೆಂದು ತೋರುತ್ತಿದೆ. ಪ್ರಪಂಚವೇನು ಅನುಭವ ಸಂಪತ್ತಿಲ್ಲದೆ ದಿವಾಳಿಯೆದ್ದು ಹೋಯಿತೆ? ಕಣ್ಣೊಂದಿದ್ದರೆ ಎತ್ತನೋಡಿದರೂ ಸಾಮಗ್ರಿ ಸಿಕ್ಕುತ್ತದೆ. ಅದು ಹಳೆಯದಾದರೂ ಪ್ರತಿಭೆಯಿದ್ದರೆ ಅದಕ್ಕೆ ಹೊಸ ಕಳೆ ಕೊಡಬಹುದು. ಹಾಗಾದರೆ ನಮಗೆ ಒದಗಿರುವ ಸಂಕಟವಾದರೂ ಏನು? ಇತ್ತೀಚಿನ ಸಣ್ಣ ಕಥೆಗಳು ಅನೀಮಿಯದಿಂದ ನರಳುತ್ತಿರುವುದೇಕೆ? ಸಣ್ಣ ಕಥೆಯ ಓದುಗ ರನ್ನು ಅದೇನೋ ಬೇಸರ, ಅನುತ್ಸಾಹ, ಕವಿದುಕೊಂಡಿದೆ. ಇದಕ್ಕೆ ಕಾರಣ ಸಾಮಗ್ರಿಯ ಅಭಾವವಿರಲಾರದು. ಈ 'ಸಣ್ಣಕಥೆ' ಎಂಬ ಸಾಹಿತ್ಯ ರೂಪ ಸ್ವಲ್ಪಕಾಲ ಮಿತಿಮೀರಿ ಮೆರೆದು ಜನರ ಕಣ್ಣನ್ನು ಕುಕ್ಕುತ್ತಿದ್ದದ್ದೇ ಕಾರಣವಿರಬೇಕು. ಆ ಸಾಹಿತ್ಯಪ್ರಭೇದ ಬೇಸರ ತಂದಿರುವುದರಿಂದ ಅದರ ಸಾಮಗ್ರಿಯೂ ಬೇಸರ ತಂದಿದೆ. ಬಾಯಲ್ಲಿ ಸಣ್ಣ ಕಥೆಯನ್ನು ಎಷ್ಟು ಹೊಗಳಿದರೂ ಹೃದಯದಲ್ಲಿ ಉತ್ಸಾಹವಿಲ್ಲ. ಅದೊಂದು ಚಟವಾಗಿ ಪರಿ ಣಮಿಸಿದೆ. ಸಣ್ಣಕಥೆಯು 'ಫ್ಯಾಷನ್' ಎಂದೋ ಒಂದು ದಿನ ಬಂತು; ಕಾಳ್ಗಿಚ್ಚಿನಂತೆ ಎಲ್ಲಾ ಕಡೆಗೂ ವ್ಯಾಪಿಸಿತು; ಸ್ವೇಚ್ಛೆಯಾಗಿ ಜ್ವಲಿಸಿತು; ಈಗ ಆ ಜ್ವಾಲೆ ಇಳಿದು ಹೊಗೆಯಾಡುವುದೂ ನಿಂತು ಉಳಿದಷ್ಟು ಕೆಂಡದ ಮೇಲೆ ಬೂದಿ ಮುಚ್ಚಿಕೊಂಡಿದೆ. ಅದನ್ನು ಊದಿ ಉರಿಯೆಬ್ಬಿಸುವ ಪ್ರಯತ್ನ ಮಾಡಿದರೆ ನಮ್ಮ ಉಸಿರು ವೆಚ್ಚವಾದುದೊಂದೇ ಫಲ. ಆ ಕೆಂಡದಿಂದ ಉರಿಯೇಳಬೇಕಾದರೆ ಉಪಯೋಗಿಸುವ ಸಾಮಗ್ರಿಯೇನು? ತರಗೆಲೆ, ಒಣಹುಲ್ಲು. ಉರಿಯೆದ್ದರೂ ಅದು ಮರುಕ್ಷಣದಲ್ಲೇ ಆರುತ್ತದೆ. ಆದ್ದರಿಂದ ಅದರ ಪಾಡಿಗೆ ಅದು ಆರಿ ಬೂದಿಯಾಗಲೆಂದು ಬಿಟ್ಟುಬಿಡು ವುದೇ ಒಳ್ಳೆಯದು. ಮುಂದಕ್ಕೆ ನೋಡಿಕೊಳ್ಳೋಣ; ಹಿಂದಿನಂತೆಯೇ ಚಳಿ ಬಂದರೆ ಮತ್ತೆ ಬೆಂಕಿ ಹೊತ್ತಿಸಿದರಾಯಿತು.

ಸಣ್ಣ ಕಥೆಯ ವಿಷಯದಲ್ಲಿ ಉತ್ಸಾಹವನ್ನು ಕೆರಳಿಸಿ ಅದಕ್ಕೆ ಉತ್ತೇ ಜನ ಕೊಡುವ ಪ್ರಯತ್ನ ಆಗಿಂದಾಗ ನಡೆದಿದೆ. ಆದರಿಂದ ಪರಿಸ್ಥಿತಿ

ಸಾಲ ತೀರಿಸಿದೆಯಲ್ಲ, ಅದು ಸಾಚಾ ಒಡವೆಯಲ್ಲ; ಅದರಲ್ಲಿದ್ದದ್ದು ಕೋಟಾ ರತ್ನಗಳು !" ಎಂದು ತಿಳಿಸಿ, ವಿಕಟವಾಗಿ ನಕ್ಕು, ಹೋಗುವಾಗ ಅನಿರೀಕ್ಷಿತವಾದ ಪೆಟ್ಟು ಕೊಡುತ್ತದೆಯಲ್ಲ, ಅದು ಅದ್ಭುತವಾದ ಕೈಚಳಕ. ಆದರೆ ಈ ಪ್ರತಿಭಾಶಾಲಿಗಳು ಹೋದ ದಾರಿಯಲ್ಲಿ . ನಾನೂ ಹೊರಟಾಗ ಉದ್ದಕ್ಕೂ ಆ ಮಾದರಿಯ ಕಥೆಗಳೆಷ್ಟೋ ಕೆಲವು ಅಸ್ತವ್ಯಸ್ತವಾಗಿ, ಕೆಲವು ಸತ್ತು, ಬಿದ್ದಿದ್ದವು. ಈ ಹೆಣಗಳ ಜೊತೆಗೆ ಹೊಸದೊಂದು ಹೆಣವನ್ನು ಹೇರದಿದ್ದರೆ ನಷ್ಟವೇನು ಎಂದುಕೊಂಡು ಸುಮ್ಮನಾಗಬೇಕಾಯಿತು. ಓದುಗರು ನನ್ನ ಕಥೆಯನ್ನು ನೋಡಿದೊಡನೆಯೆ, "ಓಹೋ, ಸರಿ, ಓ. ಹೆನ್ರಿ ತಾನೆ ? ಮೊನ್ನೆ ಯಾರೋ ಇಂಥದೇ ಒಂದು ಕಥೆಯನ್ನು ಅನುವಾದಿಸಿ ಕೊಂದರಲ್ಲವೆ ?" ಎನ್ನುತ್ತಾರೆ.

ಇನ್ನು ಉಳಿದದ್ದು ದೆವ್ವದ ಕಥೆ. ಪ್ರಕೃತಿಯ ಸಾಧಾರಣ ನಿಯಮ ಗಳನ್ನು ಮುರಿದು ಅಸ್ಪಷ್ಟವಾದ ಭಯದ ಹೊಗೆಯನ್ನು ಹೊತ್ತಿಸಿ ನರ ಗಳೆಲ್ಲಾ ಕಂಪಿಸುವಂತೆ ಮಾಡುವ ಪ್ರಕೃತ್ಯತೀತವಾದ ಆವರಣವನ್ನು ಸೃಷ್ಟಿಸುವುದೇನೂ ಸಾಮಾನ್ಯದ ಕೆಲಸವಲ್ಲ. ಉನ್ನತ ಭ್ರೂ ಸಾಹಿತಿ ಗಳೇನೋ ಇಂಥ ಕಥೆಗಳನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ಅವರೆದುರಿಗೆ ನನ್ನ ಕೀಳು ಅಭಿರುಚಿಯನ್ನು ಪ್ರದರ್ಶಿಸಲು ಮನಸ್ಸು ಹಿಂಜರಿಯುತ್ತದೆ. ಆದರೆ ನನಗೆ ಇಂಥ ಕಥೆಗಳಲ್ಲಿ ವಿಶ್ವಾಸವಿರುವುದು ನಿಜ. ಎಷ್ಟೋ ಸಾರಿ ಕೋಲ್‌ರಿಜ್ ಬರೆದ ಈ ಮಾದರಿಯ ಕವನ ಗಳನ್ನು ಓದಿ ರೋಮಾಂಚಗೊಂಡು ರಾತ್ರಿಯನ್ನೆಲ್ಲಾ ನಿದ್ರೆಯಿಲ್ಲದೆ ಭಯ ಲೋಲುಪನಾಗಿ ಆನಂದದಿಂದ ಕಳೆದಿದ್ದೇನೆ. ಆದರೆ ಈ ದಾರಿಯಲ್ಲೂ ಶ್ರೀ ಮಾಸ್ತಿ, ಶ್ರೀ ಕೆ. ವಿ. ಅಯ್ಯರ್, ಮೊದಲಾದವರು ನನಗಿಂತ ಮುಂಚೆಯೇ ನಡೆದು ವಿಜಯಸ್ತಂಭಗಳನ್ನು ನೆಟ್ಟಿದ್ದಾರೆ. ಸಾದಾ ದೆವ್ವ, ಬಾಣಂತಿ ದೆವ್ವ, ಮೋಹಿನಿ, ಬ್ರಹ್ಮರಾಕ್ಷಸ—ಯಾವುದಕ್ಕೂ ಕೊರತೆ ಯೇನಿಲ್ಲ. ಇನ್ನು ಓದುಗರಿಗೆ ನನ್ನ ಹಂಗೇನು ಉಳಿಯಿತು ?

ಸಣ್ಣ ಕಥೆ ಕಟ್ಟಬೇಕೆನ್ನುವವನಿಗೆ ಒಂದು ಕಡೆ ಮಾತ್ರ ಖಾಲಿ ನಿವೇಶನ ಸಿಕ್ಕಬಹುದು—ಪತ್ತೇದಾರಿ ಕಥೆಯ ಕ್ಷೇತ್ರದಲ್ಲಿ. ಇದುವರೆಗೆ ಕನ್ನಡ ನಾಡಿನಲ್ಲಿ ಷೆರ್‌ಲಾಕ್ ಹೋಮ್ಸನ ಅವತಾರವಾದಂತಿಲ್ಲ. ಬಹುಶಃ ಭಾರತದ ಇತರ ಭಾಷೆಗಳಲ್ಲೂ ಆಗಿರಲಾರದು. ಇದು ಕೆಳಮಟ್ಟದ ಸಾಹಿತ್ಯವೆಂದರೂ ಕ್ಷುದ್ರ ಸಾಹಿತ್ಯವೆನ್ನಲಾಗುವುದಿಲ್ಲ. ಪತ್ತೇದಾರಿ ಕಥೆ ಬರೆಯಲು ಬೇಕಾದ ಚಮತ್ಕಾರ ನಮ್ಮಲ್ಲಿಲ್ಲವೋ ಅಥವಾ ನಾವು

ಪೊಡ್ಡಸ್ತಿಕೆಯ ದಾಸಯ್ಯಗಳಾಗಿ ಅದನ್ನು ಬಹಿಷ್ಕರಿಸಿದ್ದೇವೆಯೋ, ಕಾರಣ ವೇನಾದರೂ ಇರಲಿ, ಅಂಥ ಕಥೆಗಳು ನಮ್ಮಲ್ಲಿ ಬರದಿರುವುದು ಹೆಮ್ಮೆಯ ವಿಷಯವೇನಲ್ಲ. ಹೊಸ ಕಥಾವಸ್ತುವನ್ನು ಹುಡುಕುತ್ತಿರುವವರು ಈ ಕ್ಷೇತ್ರದಲ್ಲಿ ಅಗೆದು ನೋಡಲಿ; ನಿಧಿಯೇನಾದರೂ ಸಿಕ್ಕಬಹುದು.

ನನ್ನ ಮಟ್ಟಿಗೆ ಹೇಳುವುದಾದರೆ ಈ ಅನ್ವೇಷಣೆ ಸಾಕಾಗಿಹೋಗಿದೆ. ಸಣ್ಣ ಕಥೆಗಳಿಗೆ ಅನುಕೂಲವಾದ ಸಾಮಗ್ರಿ ಸಿಕ್ಕುವುದಿಲ್ಲವೆಂದು ನಾನು ಹಿಂದೆ ಒಂದು ಬಾರಿ ತೀರ್ಮಾನಿಸಿದೆ. ಆದರೆ ಈಗ ಆ ತೀರ್ಮಾನ ತಪ್ಪೆಂದು ತೋರುತ್ತಿದೆ. ಪ್ರಪಂಚವೇನು ಅನುಭವ ಸಂಪತ್ತಿಲ್ಲದೆ ದಿವಾಳಿಯೆದ್ದು ಹೋಯಿತೆ? ಕಣ್ಣೊಂದಿದ್ದರೆ ಎತ್ತನೋಡಿದರೂ ಸಾಮಗ್ರಿ ಸಿಕ್ಕುತ್ತದೆ. ಅದು ಹಳೆಯದಾದರೂ ಪ್ರತಿಭೆಯಿದ್ದರೆ ಅದಕ್ಕೆ ಹೊಸ ಕಳೆ ಕೊಡಬಹುದು. ಹಾಗಾದರೆ ನನಗೆ ಒದಗಿರುವ ಸಂಕಟವಾದರೂ ಏನು? ಇತ್ತೀಚಿನ ಸಣ್ಣ ಕಥೆಗಳು ಅನೀಮಿಯದಿಂದ ನರಳುತ್ತಿರುವುದೇಕೆ? ಸಣ್ಣ ಕಥೆಯ ಓದುಗ ರನ್ನು ಅದೇನೋ ಬೇಸರ, ಅನುತ್ಸಾಹ, ಕವಿದುಕೊಂಡಿದೆ. ಇದಕ್ಕೆ ಕಾರಣ ಸಾಮಗ್ರಿಯ ಅಭಾವವಿರಲಾರದು. ಈ 'ಸಣ್ಣಕಥೆ' ಎಂಬ ಸಾಹಿತ್ಯ ರೂಪ ಸ್ವಲ್ಪಕಾಲ ಮಿತಿಮೀರಿ ಮೆರೆದು ಜನರ ಕಣ್ಣನ್ನು ಕುಕ್ಕುತ್ತಿದ್ದದ್ದೇ ಕಾರಣವಿರಬೇಕು. ಆ ಸಾಹಿತ್ಯಪ್ರಭೇದ ಬೇಸರ ತಂದಿರುವುದರಿಂದ ಅದರ ಸಾಮಗ್ರಿಯೂ ಬೇಸರ ತಂದಿದೆ. ಬಾಯಲ್ಲಿ ಸಣ್ಣ ಕಥೆಯನ್ನು ಎಷ್ಟು ಹೊಗಳಿದರೂ ಹೃದಯದಲ್ಲಿ ಉತ್ಸಾಹವಿಲ್ಲ. ಅದೊಂದು ಚಟವಾಗಿ ಪರಿ ಣಮಿಸಿದೆ. ಸಣ್ಣಕಥೆಯು 'ಫ್ಯಾಷನ್' ಎಂದೋ ಒಂದು ದಿನ ಬಂತು; ಕಾಳ್ಗಿಚ್ಚಿನಂತೆ ಎಲ್ಲಾ ಕಡೆಗೂ ವ್ಯಾಪಿಸಿತು; ಸ್ವೇಚ್ಛೆಯಾಗಿ ಜ್ವಲಿಸಿತು; ಈಗ ಆ ಜ್ವಾಲೆ ಇಳಿದು ಹೋಗಿಯಾಡುವುದೂ ನಿಂತು ಉಳಿದಷ್ಟು ಕೆಂಡದ ಮೇಲೆ ಬೂದಿ ಮುಚ್ಚಿಕೊಂಡಿದೆ. ಅದನ್ನು ಊದಿ ಉರಿಯೆಬ್ಬಿಸುವ ಪ್ರಯತ್ನ ಮಾಡಿದರೆ ನಮ್ಮ ಉಸಿರು ವೆಚ್ಚವಾದುದೊಂದೇ ಫಲ. ಆ ಕೆಂಡದಿಂದ ಉರಿಯೇಳಬೇಕಾದರೆ ಉಪಯೋಗಿಸುವ ಸಾಮಗ್ರಿಯೇನು? ತರಗೆಲೆ, ಒಣಹುಲ್ಲು. ಉರಿಯೆದ್ದರೂ ಅದು ಮರುಕ್ಷಣವಲ್ಲೇ ಆರುತ್ತದೆ. ಆದ್ದರಿಂದ ಅದರ ಪಾಡಿಗೆ ಅದು ಆರಿ ಬೂದಿಯಾಗಲೆಂದು ಬಿಟ್ಟುಬಿಡು ವುದೇ ಒಳ್ಳೆಯದು. ಮುಂದಕ್ಕೆ ನೋಡಿಕೊಳ್ಳೋಣ; ಹಿಂದಿನಂತೆಯೇ ಚಳಿ ಬಂದರೆ ಮತ್ತೆ ಬೆಂಕಿ ಹೊತ್ತಿಸಿದರಾಯಿತು.

ಸಣ್ಣ ಕಥೆಯ ವಿಷಯದಲ್ಲಿ ಉತ್ಸಾಹವನ್ನು ಕೆರಳಿಸಿ ಅದಕ್ಕೆ ಉತ್ತೇ ಜನ ಕೊಡುವ ಪ್ರಯತ್ನ ಆಗಿಂದಾಗ ನಡೆದಿದೆ. ಅದರಿಂದ ಪರಿಸ್ಥಿತಿ

ಉತ್ತಮಗೊಳ್ಳುವ ಬದಲು ಮತ್ತಷ್ಟು ಕೆಟ್ಟಿದೆ. ಕೆಲವು ವರ್ಷ ಯಾವ ಯಾವುದೋ ಸಂಘಗಳವರು ಸೇರಿಕೊಂಡು ಆಗಿಂದಾಗ ಸಣ್ಣ ಕಥೆಗಾರರ ಸಮ್ಮೇಳನ ನಡಸುತ್ತಿದ್ದರು. ವರ್ಷಕ್ಕೊಂದು ಸಲ ಸಾಂಕ್ರಾಮಿಕವಾಗಿ ಈ ಸಮ್ಮೇಳನಗಳು ಬಂದು ವಕ್ಕರಿಸುತ್ತಿದ್ದವು. ಅಲ್ಲಿಗೆ ಹೋಗಿಬಂದರೆ, ಚಳಿಗಾಲದಲ್ಲಿ ಮಲೇರಿಯದಿಂದ ನರಳುತ್ತಿರುವವನಿಗೆ ಒದ್ದೆ ಬಟ್ಟೆಯನ್ನು ಹೊದಿಸಿ ಜೊತೆಗೆ ಪಂಕಾ ಬೀಸಿದ ಅನುಭವವಾಗುತ್ತಿತ್ತು. ಒಬ್ಬರಾದ ಮೇಲೆ ಒಬ್ಬರು ಸಣ್ಣ ಕಥೆಯ ವೈಶಿಷ್ಟ್ಯ, ಸಣ್ಣ ಕಥೆಯ ರಚನೆ, ಸಣ್ಣ ಕಥೆಯ ಪಾತ್ರಗಳು, ಸಣ್ಣ ಕಥೆಯ ತಂತ್ರ, ವಗೈರೆ ವಿಷಯಗಳ ಮೇಲೆ ಉಪನ್ಯಾಸ ಮಾಡಿದ್ದೂ ಮಾಡಿದ್ದೇ. ಸಣ್ಣ ಕಥೆಗಾರರಿಗೆ ಬುದ್ಧಿವಾದವನ್ನು ಹೇಳಿದ್ದೂ ಹೇಳಿದ್ದೇ: ಸಣ್ಣ ಕಥೆ ಕಾದಂಬರಿಯ ಅಸ್ಥಿಪಂಜರವಲ್ಲವಂತೆ; ಅದೇ ಒಂದು ತುಂಬುದೇಹದ ಮುದ್ದು ಮಗು; ಅದಕ್ಕೂ ಸ್ವಂತ ಜೀವವಿದೆ. ನೀವು ಕಥೆ ಬರೆಯಹೊರಟರೆ ಒಂದೆರಡು ಘಟನೆಗಳನ್ನು ಮಾತ್ರ ಹೊಂದಿಸಿಕೊಳ್ಳಿ, ಮನೆ ಚಿಕ್ಕದಾದ್ದರಿಂದ ಸಾಮಗ್ರಿ ಅಡಕವಾಗಿರಬೇಕು, ತಿಳಿಯಿತೆ? ಪಾತ್ರಗಳೂ ಅಷ್ಟೆ, ಎರಡು ಮೂರು ಜನರಾದರೆ ಸಾಕು; ನಿಮ್ಮ ರಂಗಸ್ಥಳದಲ್ಲಿ ಜನಸಂದಣಿ ಹೆಚ್ಚಿದಷ್ಟೂ ಕೆಲಸ ಕೆಡುತ್ತದೆ, ಜೋಕೆ. ಸಂಭಾಷಣೆ ಮಿತವಾಗಿರಲಿ, ನಿಮ್ಮ ಮೂಲೋದ್ದೇಶಕ್ಕೆ ಸಹಕಾರಿಯಾಗಿರಲಿ. ಅನವಶ್ಯಕವಾದ ವಿಷಯಗಳನ್ನು ಸಣ್ಣ ಕಥೆಗೆ ತರಬಾರದು. ಸಣ್ಣ ಕಥೆಗೊಂದು ಐಕ್ಯತೆ ಇರಬೇಕು—ಇತ್ಯಾದಿ ಇತ್ಯಾದಿ ಉಪನ್ಯಾಸಗಳ ಸುರಿಮಳೆ. ಇವರ ಮಾತನ್ನು ಕೇಳಿದರೆ ನಾಟಕಕ್ಕೆ, ಕಾದಂಬರಿಗೆ, ಗೀತೆಗೆ, ಇತರ ಯಾವ ಸಾಹಿತ್ಯ ರೂಪಕ್ಕೂ ಐಕ್ಯತೆ ಬೇಡವೇನೋ ಎನ್ನಿಸುತ್ತದೆ. ಅವೆಲ್ಲಾ ಕಸದ ಬುಟ್ಟಿಗಳು; ಅನವಶ್ಯಕವಾದ ವಿಷಯಗಳನ್ನು ಅಲ್ಲಿ ತುಂಬಬಹುದು, ಸಣ್ಣ ಕಥೆಯಲ್ಲಿ ಮಾತ್ರ ತುಂಬಬಾರದು! ಯಾವ ಬಗೆಯ ಸಾಹಿತ್ಯದಲ್ಲಿ ತಾನೆ ಸಂಭಾಷಣೆ ಮಿತಿಮೀರಿ ಮೂಲೋದ್ದೇಶವನ್ನು ಮರೆತು ಸಾಗಬಹುದು? ಏಕಾಂಕ ನಾಟಕವು ಐದಂಕದ ನಾಟಕದ ಅಸ್ಥಿಪಂಜರವೆ? ಅದೂ ತುಂಬು ಜೀವದ ಮುದ್ದು ಮಗುವಲ್ಲವೆ? ಹಾಗಾದರೆ ಎಲ್ಲಿ ಹೋದರೂ ಕಾಲಿಗೆ ಸುತ್ತಿಕೊಳ್ಳುವ ಈ ಸಣ್ಣ ಕಥೆಯ ವೈಶಿಷ್ಟ್ಯವೇನು? ಮತ್ತಷ್ಟು ಯೋಚನೆ ಮಾಡಿ ಹೇಳಬೇಡವೆ? ಈ ಭಾಷಣಗಳನ್ನು ಕೇಳಿ ಕೇಳಿ, ಯಾರಾದರೂ ಸಣ್ಣ ಕಥೆಯ ಹೆಸರೆತ್ತಿದರೆ ಅವರನ್ನು.... ಛೀ! ತಾಳ್ಮೆಗೆಟ್ಟ ಮಾತಾಡಬಾರದು!

ಈ ಭಾಷಣಗಳು ಮುಗಿದ ಮೇಲೆ ನಿಮ್ಮ ಕರ್ಮ ಸವೆಯಿತೆಂದು

ಭ್ರಾಂತಿಗೊಳ್ಳಬೇಡಿ. ಮುಂದೆ ಇನ್ನೂ ಭೀಕರವಾದ ಅನುಭವ ಕಾದಿದೆ. ಸಭೆಯ ಹಿಂದಿನ ಸಾಲುಗಳಲ್ಲಿ ಹೊಸದಾಗಿ ಕಥೆ ಬರೆಯಲಾರಂಭಿಸಿರುವ ಭಾವೀಸಾಹಿತಿಗಳು ಕಾದಿದ್ದಾರೆ, ತಮ್ಮ ಕಥೆಗಳನ್ನು ನಿಮ್ಮ ಮೇಲೆ ಪ್ರಯೋಗಿಸುವ ಸಮಯ ಬಂದೀತೆ ಎಂದು. ಇತ್ತೀಚಿಗೆ ವ್ಯವಸ್ಥಾಪಕರು ಮನಸ್ಸು ಕರಗಿ "ಇದು ನ್ಯಾಯವಲ್ಲ, ಹೀಗೆ ಮಾಡಬಾರದು, ಸಮ್ಮೇಳನಕ್ಕೆ ಬರುವವರೆಲ್ಲರ ದೇಹದಾರ್ಢ್ಯ ಮನೋದಾರ್ಢ್ಯಗಳು ಒಂದೇ ರೀತಿ ಇರುವುದಿಲ್ಲ. ಮುಂದಿನ ಸಮ್ಮೇಳನಗಳಿಗೆ ಬರಲು ಕೆಲವರಾದರೂ ಉಳಿದಿರಲಿ" ಎಂದುಕೊಂಡಿರಬೇಕು. ಅಲ್ಲದೆ ಅಧ್ಯಕ್ಷಪದವಿಯೂ ಕಾರ್ಯದರ್ಶಿತ್ವವೂ ಸಲ್ಲಬೇಕಾದವರಿಗೆಲ್ಲಾ ಸಂದು ಮುಗಿದಿರಬೇಕು. ಅಂತೂ ಈ ಸಮ್ಮೇಳನಗಳು ನಿಂತಂತೆ ತೋರುತ್ತದೆ. ಅಥವಾ ಅವು 'ಎಂಡೆಮಿಕ್' ಆಗಿ ನಿಂತು ಮತ್ತೆ ಯಾವಾಗಲೋ ಉಲ್ಬಣಿಸುತ್ತವೆಯೋ. ಅವಶ್ಯಮನುಭೋಕ್ತವ್ಯಂ.

ಕೆಲವು ವರ್ಷಗಳಿಂದ ನಾನು ದೇವರಲ್ಲಿ ಒಂದು ಮೊರೆಯಿಡುತ್ತಿದ್ದೇನೆ—ಸಣ್ಣ ಕಥೆಯನ್ನು ಬರೆಯುವ ಶಕ್ತಿಯನ್ನು ಕರುಣಿಸು ಎಂದಲ್ಲ.

ಕವಿರಾಜಮವಿಜ್ಞಾಯ ಕುತಃ ಕಾವ್ಯಕ್ರಿಯಾದರಃ ||
ಕವಿರಾಜಂಚ ವಿಜ್ಞಾಯ ಕುತಃ ಕಾವ್ಯಕ್ರಿಯಾದರಃ ||

ಎಂಬ ಮಾತನ್ನು ನಾನು ಪೂರ್ಣವಾಗಿ ಒಪ್ಪುವವನಲ್ಲ. ಅದು ವಿನಯದ ಮಾತಾದರೆ ಅಥವಾ ಎಚ್ಚರಿಕೆಯ ಮಾತಾದರೆ ಸರಿ; ನಿಷೇಧವಾಕ್ಯವಾದರೆ ಒಪ್ಪಲಾಗುವುದಿಲ್ಲ. ನಮ್ಮ ವಿನಯ ಅತಿರೇಕವಾಗಿ ಹೃದಯ ದೌರ್ಬಲ್ಯದಲ್ಲಿ ಕೊನೆಗಾಣಬಾರದು. ಆದರೂ ಶ್ರೀ ಮಾಸ್ತಿಯವರಂಥ ಕಥೆಗಾರರ ಕೌಶಲ, ತೊಡಕಿಲ್ಲದೆ ಸರಳವಾಗಿಯೂ ಗಂಭೀರವಾಗಿಯೂ ಶಾಂತವಾಗಿಯೂ ಹರಿಯುವ ಶೈಲಿ, ವಸ್ತುವೈವಿಧ್ಯ, ಅನುಭವ ವೈಶಾಲ್ಯ—ಇದನ್ನೆಲ್ಲಾ ನೋಡಿದಾಗ, 'ಇನ್ನು ನಾವು ಬರೆಯುವುದೇನು!' ಎನ್ನಿಸಿದೆ. ಇದು ನನ್ನಲ್ಲಿ ದೌರ್ಬಲ್ಯವೇ ಇರಬೇಕು. ಕಾರಣವೇನಾದರೂ ಆಗಲಿ, ನನಗೆ ಸಣ್ಣ ಕಥೆ ಬರೆಯುವ ಹಂಬಲವಿಲ್ಲ.

ನನ್ನ ಪ್ರಾರ್ಥನೆ ಬೇರೆ. ಹಿಂದೆ ದೇವರು ಮಹಾಪ್ರಳಯವೊಂದನ್ನು ಏರ್ಪಡಿಸಿ ಜಗತ್ತನ್ನೆಲ್ಲಾ ಮುಳುಗಿಸಿದನಂತೆ. ಸರ್ವಶಕ್ತನಿಗೆ ಇನ್ನೊಂದು ಸಣ್ಣ ಬೇವಾರಸಿ ಪ್ರಳಯವನ್ನು ಕಳಿಸುವುದೇನೂ ಕಷ್ಟವಾಗಲಾರದಲ್ಲವೆ? ಕಳಿಸಿ ಈ ಸಣ್ಣ ಕಥೆಯನ್ನು ಮುಳುಗಿಸಬಾರದೆ? ಈ ಪ್ರಾರ್ಥನೆ ಆಗಾಗ ನಾಲಿಗೆಯ ತುದಿಗೆ ಬರುತ್ತದೆ. ಆದರೆ ನಾನು ಓದಿರುವ ಸುಂದರವಾದ ಕಥೆಗಳ ನೆನಪು ಬಂದು ಈ ಕೇಡಿಗ ಬುದ್ಧಿ ಕಡಿಮೆಯಾಗುತ್ತದೆ.

ಹಾಗೆಂದರೆ ನನ್ನ ಪ್ರಾರ್ಥನೆಯನ್ನು ವಾಪಸು ತೆಗೆದುಕೊಂಡಿದ್ದೇನೆಂದು ಅರ್ಥವಲ್ಲ. ಅವರ ಜೊತೆಗೆ ಮರಿ ಪ್ರಾರ್ಥನೆಯೊಂದನ್ನು ಸೇರಿಸಿದ್ದೇನೆ, ಅಷ್ಟೆ. ಹಿಂದಿನ ಪ್ರಳಯದಲ್ಲಿ ನೋವಾ ತನ್ನ ಆರ್ಕಿನಲ್ಲಿ ಪ್ರತಿಯೊಂದು ಪ್ರಾಣಿಯದೂ ಒಂದೊಂದು ಜೊತೆಯನ್ನು ಉಳಿಸಿಕೊಳ್ಳಲಿಲ್ಲವೆ? ಹಾಗೇ ಈ ಪ್ರಳಯದಲ್ಲೂ ದೇವರು ಕೆಲವು ಗಟ್ಟಿಮುಟ್ಟಾದ ಕಥೆಗಳನ್ನು ಉಳಿಸಿ ಕೊಳ್ಳಲಿ. ಅವುಗಳ ಸಂತತಿ ಮುಂದೆ ಬೆಳೆಯಲಿ. ಅವು ಎಡ್ಗರ್ ಅಲನ್ ಪೋ, ಓ ಹೆನ್ರಿ, ಮೋಪಸಾಂತ್ ಮುಂತಾದ ಕಥೆಗಾರರಿಗೆ ಪ್ರತಿಧ್ವನಿ ಕೊಡದೆ ಹೊಸ ಅನುಭವವನ್ನು ಹೊಸ ರೀತಿಯಲ್ಲಿ ಪ್ರಾಮಾಣಿಕವಾಗಿ ನಿರೂಪಿಸಲಿ.

ಈ ಮಾತಿಗೆ ತಪ್ಪು ಅರ್ಥ ಮಾಡಬೇಡಿ. ಪ್ರಳಯವಾದ ಮೇಲೆ ಬರುವ ಕಥೆಗಳಲ್ಲಿ ಹಿಂದೆ ಯಾರೂ ಕಾಣದ ಸಾಮಗ್ರಿಯಿರುತ್ತದೆಂದು ನಾನು ಭ್ರಮಿಸಿಲ್ಲ. ಇದರಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ ಸಾಮಗ್ರಿ ಹೊಸದಾಗಿರಬೇಕೆಂದಲ್ಲ; ಬರೆಯುವವನ ಕಣ್ಣಿಗೆ ಅದು ಹೊಸ ದಾಗಿ ಕಾಣಬೇಕೆಂದು, ಬಳಕೆಯ ತೆರೆ ಅದರಿಂದ ಜಾರಿಹೋಗಬೇಕೆಂದು. ಹಾಗಾದರೆ ಬರಹಗಾರನಿಗೆ ಅದರ ವಿಷಯದಲ್ಲಿ ಆಶ್ಚರ್ಯ ಕುತೂಹಲಗಳು ಕೆರಳಬಹುದು. ಆದ್ದರಿಂದ ಕಥೆಗೆ ಹೊಸ ಕಳೆ ಬಂದು ಓದುಗನ ಆಸಕ್ತಿಯೂ ಹೆಚ್ಚೀತು. ಉತ್ಸಾಹದ ಕೊರತೆಯೇ ಈಗ ಕಥೆಗಾರನ ಮುಂದಿರುವ ಸಮಸ್ಯೆ. ಸೊರಗಿದ ಆ ಹಳೆಯ ರೂಪ ಹೋಗಬೇಕು; ಮುಖದಲ್ಲಿ ಎಳೆತನದ ಗೆಲವು, ನುಣುಪು ಕೋಮಲತೆಗಳು ಮತ್ತೆ ಮೂಡಬೇಕು. ಅದಕ್ಕೇ ನಾನು ಹೇಳುವುದು: ಸಣ್ಣ ಕಥೆಗೆ ಮಾಗಿಯ ಕಾಲ ಬೇಗ ಬರಲಿ; ಬಂದು ದೀರ್ಘಕಾಲ ನಡೆಯಲಿ; ಅದನ್ನು ಹಿಂಬಾಲಿಸಿ ಬರುವ ವಸಂತವೂ ಅಷ್ಟೇ ದೀರ್ಘವಾಗಲಿ.

ಇಂಥ ಭಾವನೆಗಳು ನಮ್ಮ ಕಥೆಗಾರರ ಮನಸ್ಸಿಗೂ ಬಂದಿರಬೇಕು. ಆದರಿಂದಲೇ ಇತ್ತೀಚಿಗೆ ನಮ್ಮಲ್ಲಿ ಗಣ್ಯರೆನಿಸಿದ ಬರಹಗಾರರು ಸಣ್ಣಕಥೆಗೆ ಅಷ್ಟಾಗಿ ಗಮನಕೊಡುತ್ತಿಲ್ಲ. ಶ್ರೀ ಕಾರಂತರು ಹೆಚ್ಚುಕಡಿಮೆ ಅದನ್ನು ಕೈಬಿಟ್ಟದ್ದಾರೆನ್ನಬಹುದು; ಆದ್ದರಿಂದ ನಮಗೆ ಅವರಿಂದ ಸೊಗಸಾದ ಕಾದಂಬರಿಗಳು ದೊರೆತಿವೆ. ಶ್ರೀ ಮಾಸ್ತಿಯವರು ಸಣ್ಣ ಕಥೆಯ ಕೈಬಿಟ್ಟ ರೆನ್ನುವಂತಿಲ್ಲ. ಆದರೂ ಅವರ ಗಮನ ಬೇರೆ ಕಡೆಗೆ ಹೆಚ್ಚಾಗಿ ಹರಿದು ಅವರ ಸಾಹಿತ್ಯಸೃಷ್ಟಿಯಲ್ಲಿ ವೈವಿಧ್ಯ ದೊರೆತಿದೆ. ಶ್ರೀ ಕುವೆಂಪು ಅವರು ಹಿಂದೆ ಕಥೆಗಳನ್ನು ಬರೆದರೂ ಸಣ್ಣಕಥೆಯ ಆವರ್ತಕ್ಕೆ ಸಿಕ್ಕಿ ತಿರುಗಲಿಲ್ಲ;

ಮಹಾಸಾಗರದಲ್ಲಿ ಯಾತ್ರೆ ಹೊರಟರು. ಶ್ರೀ ಗೋಪಾಲಕೃಷ್ಣರಾಯರೂ ಶ್ರೀ ಆನಂದರೂ ಬಹುಶಃ ಇನ್ನೂ ಅಚ್ಛಿನ್ನಭಕ್ತರಾಗಿಯೇ ಉಳಿದಿದ್ದಾರೆ; ಆದರೆ ಹಳೆಯ ಕಥೆಗಳನ್ನೇ ಅಚ್ಚುಮಾಡುತ್ತಿದ್ದಾರೆ. ಶ್ರೀ ಅ. ನ. ಕೃಷ್ಣರಾಯರು, ಶ್ರೀ ಕಟ್ಟೀಮನಿ, ಶ್ರೀ ತ. ರಾ. ಸು.. ಮೊದಲಾದವರು ಕಾದಂಬರಿಯನ್ನು ತಲಪಲು ಹೊರಟು ದಾರಿಯಲ್ಲಿ ಸಣ್ಣಕಥೆಯೊಡನೆ ಚಕ್ಕಂದವಾಡಿದರು ಮಾತ್ರ. ಆದರೂ ಈಗ ಒಳ್ಳೆಯ ಕಥೆ ಬರುವುದ ತೀರ ಅಸಾಧ್ಯವೆಂದು ಹೇಳಲಾಗುವುದಿಲ್ಲ. ಮಾಗಿಯಲ್ಲೂ ಒಂದೆರಡು ಹೂವುಗಳು ಅರಳಬಹುದಷ್ಟೆ.

ಆದ್ದರಿಂದ ಸಣ್ಣ ಕಥೆಯ ಸಮಸ್ಯೆಯೆಂದರೆ, ಅದರ ವಿಷಯದಲ್ಲಿ ಶ್ರದ್ಧಾಸಕ್ತಿಗಳನ್ನು ಕುದುರಿಸುವುದು ಹೇಗೆ ಎಂಬುದು. ಆ ಸಮಸ್ಯೆಗೆ ನನ್ನ ಉತ್ತರ: ಕುದುರಿಸಬೇಕೆಂಬ ನಿಯಮವೇನಿದೆ? ಸುಮ್ಮನಿರುವುದೇ ಮೇಲು. ಸಣ್ಣ ಕಥೆಗೆ ವಯಸ್ಸಾಗಿದೆ, ತಲೆ ನರೆತಿದೆ, ಕಣ್ಣು ಗುಳಿಬಿದ್ದು ಮಂಜಾಗಿದೆ, ದೇಹ ಸುಕ್ಕುಗಟ್ಟಿದೆ. ಯಮಧರ್ಮರಾಯನಿಗೆ ಸಿದ್ಧವಾಗಿರುವ ಕಬಳವನ್ನು ತಪ್ಪಿಸುವುದಕ್ಕೆ ನಾವು ಯಾರು! ಇಷ್ಟಕ್ಕೂ ಪುನರ್ಜನ್ಮದಲ್ಲಿ ನಂಬಿಕೆಯಿಡುವ ನಾವು ಅದರ ಸಾವಿಗೆ ಹೆದರಬೇಕಾದ ಕಾರಣವಿಲ್ಲ. ಅದು ಚೆನ್ನಾಗಿ ಬಾಳಿದ ವಸ್ತು; ಹೀಗೆ ಎಲ್ಲರಿಗೂ ಹೊರೆಯಾಗಿ ನರಳುತ್ತಾ ಬಿದ್ದಿರಬಾರದು. ಆದ್ದರಿಂದ ಸಣ್ಣ ಕಥೆಗೆ ಹೇಳೋಣ, "ಇನ್ನು ಹೊರಡು" ಎಂದು. ಆದರೆ ಮರುಕ್ಷಣವೇ ಸಭ್ಯಮರ್ಯಾದೆಯನ್ನು ನೆನಪಿಗೆ ತಂದುಕೊಂಡು "ಹೋಗಿಬರುತ್ತೀಯಾ?" ಎಂದು ಕೇಳೋಣ.

## ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು

ನಾನು ಹೇಳುತ್ತಿರುವುದು ನಲವತ್ತು ವರ್ಷಕ್ಕಿಂತ ಹಿಂದಿನ ಮಾತು. ಆಗ ನಾನು ಮೈಸೂರಿನ ಒಳಬೀದಿಯೊಂದರಲ್ಲಿ ಹಿರಿಯರು ಕಟ್ಟಿದ ಮನೆಯಲ್ಲಿ ವಾಸಿಸುತ್ತಿದ್ದೆ. ಅದನ್ನು ಕಟ್ಟಿದ ಕಾಲದಲ್ಲಿ ಇಟ್ಟಿಗೆಯ ಗೋಡೆಗಳು ಇನ್ನೂ ಮಧ್ಯಮ ವರ್ಗದವರಲ್ಲಿ ಚಾಲತಿಗೆ ಬಂದಿರಲಿಲ್ಲವೆಂದು ತೋರುತ್ತದೆ. ನಮ್ಮ ಮನೆಯ ಹೊರಗೋಡೆಗಳೆಲ್ಲಾ ಮಣ್ಣಿನ ಪುಟದ ಗೋಡೆಗಳು; ಒಳಗೋಡೆಗಳೆಲ್ಲಾ ತಡಿಕೆ. ನೆಲವು ಸಿಮೆಂಟು, ಗಾರೆ ಮುಂತಾದ್ದೇನನ್ನೂ ಕಾಣದು. ಆದರೂ ನಮ್ಮ ತಂದೆಗೆ ಮಧ್ಯಮ ವರ್ಗದವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಶ್ರೀಮಂತಿಕೆಯ ಸೋಗುಹಾಕಬೇಕೆಂಬ ಆಸೆಯಾಗಿದ್ದಿರಬೇಕು—ಆಗಿನ ಕಾಲಕ್ಕೆ ದೊಡ್ಡಸ್ತಿಕೆಯ ಗುರುತಾದ ಮಂಗಳೂರು ಹೆಂಚಿನ ಛಾವಣಿ ಹೊದಿಸಿದ್ದರು. ಅವರ ಮಟ್ಟಿಗೆ ಮನೆ ಅನುಕೂಲವಾಗಿಯೇ ಇದ್ದಿರಬೇಕು.

ಆದರೆ ನಾವು ಬೆಳೆದು ದೊಡ್ಡವರಾಗುವ ವೇಳೆಗೆ ನಾಗರಿಕತೆ ಬಹಳ ಮುಂದುವರಿದಿತ್ತು. ತಂದೆಯು ಮಕ್ಕಳಿಗೆ ಆಸ್ತಿಯಾಗಿ ಮನೆಯೊಂದನ್ನು ಕಟ್ಟಿಸಿದರಲ್ಲ ಎಂದು ಕೃತಜ್ಞರಾಗಿರುವ ಬದಲು "ಇದು ಯಾವ ಸೀಮೆಯ ಮನೆ! ಯಾವುದಾದರೂ ವಿಸ್ತರಣದಲ್ಲಿ ನಿವೇಶನ ತೆಗೆದುಕೊಂಡು ಲಕ್ಷಣವಾಗಿ ಇಟ್ಟಿಗೆ ಗೋಡೆ ಹಾಕಿಸಿ ತಾರಸಿಮನೆಯನ್ನು ಕಟ್ಟಬಾರದಿತ್ತೆ!" ಎನ್ನುವ ಅತೃಪ್ತಿ ಅಸಮಾಧಾನಗಳೇ ನಮ್ಮ ಮನಸ್ಸಿನಲ್ಲಿ ಹೆಚ್ಚಿದ್ದವು. ಎಷ್ಟಾಗಲಿ ನಮ್ಮ ಹಿರಿಯರಿಗಿಂತ ನಾವು ಬುದ್ಧಿವಂತರು, ರಸಿಕರು, ಲೋಕವ್ಯವಹಾರಚತುರರು—ಇದು ಯುವಕರೆಲ್ಲರೂ ಒಪ್ಪಬಹುದಾದ ಮಾತು. ನಮ್ಮ ತಂದೆ ತಮ್ಮ ಹಳೆಯ ಹಳ್ಳಿಯ ಮನೆಯ ವಿಷಯದಲ್ಲಿ ಏನೇನು ಟೀಕೆ ಮಾಡುತ್ತಿದ್ದರೋ ಅದನ್ನೆಲ್ಲಾ ನಾವು ಅವರು ಕಟ್ಟಿದ ಮನೆಯ ವಿಷಯದಲ್ಲೂ ಮಾಡಿದೆವು. ನನಗಂತೂ ದಿನ ಕಳೆದಂತೆಲ್ಲಾ ಆ ಮನೆಯಲ್ಲಿರುವುದು ತೀರ ಬೇಸರವಾಗುತ್ತಾ ಬಂತು.

ಆ ವೇಳೆಗೆ ಸರಿಯಾಗಿ ನಗರಸಭೆಯವರು ಹೊಸದೊಂದು ವಿಸ್ತರಣವನ್ನು ನಿರ್ಮಿಸಿ, ಜನರನ್ನು ಅಲ್ಲಿಗೆ ಸೆಳೆಯುವುದಕ್ಕಾಗಿ ಅಲ್ಲಿಯ ನಿವೇಶನಗಳನ್ನು ಅತಿ ಸುಲಭ ಬೆಲೆಗೆ ಕೊಡುತ್ತಿದ್ದರು. ವಿಧಿ ನಮ್ಮನ್ನು ಸಂಕಟಕ್ಕೆ ಎಳೆಯಬೇಕಾದರೆ, ತಪ್ಪುದಾರಿಗೆ ದೂಡಬೇಕಾದರೆ, ಮನೋಹರವಾದ

ರೂಪವನ್ನು ತಾಳಿ, ನಮ್ಮ ಮುಂದೆ ಸುಳಿದಾಡುತ್ತದೆ. ಆ ದಾರಿಯಲ್ಲಿ ನಮ್ಮ ಕಣ್ಣಿಗೆ ಕಾಣುವಷ್ಟು ದೂರವೂ ಚಿಗುರು ಹೂವು ಹಣ್ಣುಗಳ ಸೌಲಭ್ಯವೆಲ್ಲಾ ಕಂಗೊಳಿಸುತ್ತದೆ. ಮೊದಲೇ ಹಳೆಯ ಮನೆಯ ವಿಷಯದಲ್ಲಿ ಅತೃಪ್ತಿಗೊಂಡಿದ್ದ ನನ್ನ ಕಣ್ಣಿನ ಮುಂದೆ ವಿಧಿ ಅಗ್ಗದ ನಿವೇಶನದ ರೂಪವನ್ನು ತಾಳಿ ಕುಣಿಯಲಾರಂಭಿಸಿತು.

ಅದರ ಸೊಬಗು ಹೇಳಿತೀರದು. ಎತ್ತರವಾದ ಪ್ರದೇಶದಲ್ಲಿ ಸಮತಟ್ಟಾದ ಸ್ಥಳವನ್ನು ಹುಡುಕಿ ನಿವೇಶನಗಳನ್ನು ವಿಂಗಡಿಸಿದ್ದರು. ಅಲ್ಲಿಂದ ಉತ್ತರಕ್ಕೆ ಮೈಲಿಗಟ್ಟಲೆ ಬೆಳೆದು ನಿಂತಿರುವ ಜೋಳದ ಹೊಲಗಳು. ಪೂರ್ವಕ್ಕೆ ಕಣ್ಣಿಗೆ ತಂಪಾಗಿ ಹಸುರು ತುಂಬಿದ ಕಣಿವೆ. ಅಲ್ಲಿಂದಾಚೆಗೆ ದೂರದಲ್ಲಿ ನೀಲವಾದ ಬೆಟ್ಟಗಳು. ನನಗೆ ದೊರೆತ ನಿವೇಶನದಲ್ಲಿ ನಿಂತರೆ ಮೇಲುಕೋಟೆಯ ಬೆಟ್ಟ, ಹಿರೋಡೆಯ ಬೆಟ್ಟ, ಮತ್ತೊಂದು ಕಡೆ ಚಾಮುಂಡಿಯ ಬೆಟ್ಟ—ಎಲ್ಲವನ್ನೂ ನೋಡಬಹುದಾಗಿತ್ತು. ಊರಿಗೆ ದೂರವಾದ್ದರಿಂದ ಜನರ ಗಲಭೆಯೂ ಇಲ್ಲ. ಒಂದು ಕಡೆ ನಗರದ ಸೌಲಭ್ಯಗಳು, ಮತ್ತೊಂದು ಕಡೆ ಹಳ್ಳಿಯ ಪ್ರಕೃತಿರಮ್ಯವಾದ ವಾತಾವರಣ—ಎರಡೂ ಸಿಕ್ಕಿದಂತಾಯಿತು. ನಿವೇಶನವೂ ನಾಲ್ಕು ಬಂಗಲೆಗಳನ್ನು ಕಟ್ಟಬಹುದಾದಷ್ಟು ವಿಸ್ತಾರವಾಗಿತ್ತು. ಮನೆಯ ಸುತ್ತಲೂ ರಮ್ಯವಾದ ಉಪವನವನ್ನು ನಿರ್ಮಿಸಿಕೊಳ್ಳಬಹುದು. ಹತ್ತು ಇಪ್ಪತ್ತು ತೆಂಗಿನ ಗಿಡಗಳನ್ನು ನೆಡಿಸಬಹುದು. ಮನೆಗೆ ಬೇಕಾದ ಹಣ್ಣು ಹೂವು ಕಾಯಿಪಲ್ಯಗಳನ್ನು ನಾವೇ ಬೆಳೆದುಕೊಳ್ಳಬಹುದು.

ಇಂಥ ನಿವೇಶನ ಕೇವಲ ೨೫೦ ರೂಪಾಯಿಗಳಿಗೆ ದೊರೆಯುತ್ತದೆಂದರೆ ಯಾರ ಬಾಯಲ್ಲಿ ತಾನೆ ನೀರೂರುವುದಿಲ್ಲ! ಆ ಹಣವನ್ನು ಕೊಡುವುದಕ್ಕೆ ನಲವತ್ತು ತಿಂಗಳ ವಾಯಿದೆ ಬೇರೆ. ಸರ್ಕಾರದವರು ವಿಧಿಗೆ ಬೆಂಬಲವಾಗಿ ನಿಂತು, ಮನೆ ಕಟ್ಟುವವರಿಗೆ ಎರಡು ವರ್ಷದ ಸಂಬಳವನ್ನು ಮುಂಗಡವಾಗಿ ಕೊಡುತ್ತೇವೆಂದು ಆಸೆ ತೋರಿಸಿದರು. ಬಂಧುಗಳೊಬ್ಬರು "ವೆಚ್ಚವೇನಾದರೂ ಸ್ವಲ್ಪ ಹೆಚ್ಚಾದರೆ ನಾನು ಸಾಲ ಕೊಟ್ಟಿರುತ್ತೇನೆ" ಎಂದು ಭರವಸೆಕೊಟ್ಟರು. ಇತ್ತ ನನ್ನ ಮನಸ್ಸಿನಲ್ಲಿ "ಸರ್ಕಾರದಿಂದ ಮುಂಗಡವಾಗಿ ಬರುವ ಹಣವಲ್ಲದೆ ಮೇಲೊಂದು ಕಾಸನ್ನೂ ಖರ್ಚು ಮಾಡುವುದಿಲ್ಲ. ಹಾಸಿಗೆಯಿಂದಾಚೆಗೆ ಕಾಲು ಚಾಚುವುದಿಲ್ಲ. ಸಾಲಕ್ಕಾಗಿ ಯಾರ ಮುಂದೂ ಕೈ ಒಡ್ಡುವುದಿಲ್ಲ. ಸರ್ಕಾರದ ಸಾಲ ತೀರಿ ಮನೆ ನನ್ನದಾಗುವವರೆಗೂ ಹಲ್ಲು ಕಚ್ಚಿಕೊಂಡು ಸಂಸಾರ ಮಾಡುತ್ತೇನೆ—

"ಅಂಬಲಿಯಾದರೆ ಅಂಬಲಿ, ತುಂಬೆಯ ಸೊಪ್ಪಾದರೆ ತುಂಬೆಯ ಸೊಪ್ಪು" ಎಂಬ ದೃಢ ನಿಶ್ಚಯವಿತ್ತು. ಒಂದು ಕಡೆ ಸಾಲ ದೊರೆಯುತ್ತದೆಂಬ ಭರವಸೆ, ಮತ್ತೊಂದು ಕಡೆ ಆ ಸಾಲವನ್ನು ಉಪಯೋಗಿಸದೆ ಇರುವಂಥ ಚಿತ್ತಸಿದ್ಧಿ, ಜೊತೆಗೆ ಸುಲಭದಲ್ಲಿ ದೊರೆಯುವ ನಿವೇಶನ—ಇಷ್ಟೆಲ್ಲಾ ಇರುವಾಗ ಆತಂಕವೇನು? ನನ್ನ ಯೋಗ್ಯತೆಗೆ ತಕ್ಕಂತೆ ತಲೆಯ ಮೇಲೊಂದು ನೆರಳಾಗಿ ಸಣ್ಣದೊಂದು ಗುಡಿಸಲನ್ನು ಕಟ್ಟಿಯೇಬಿಡಬೇಕೆಂದು ನಿಶ್ಚಯಿಸಿದೆ. ಮನೆ ಕಟ್ಟುವುದಕ್ಕಿಂತ ಮುಂಚೆ ಎಲ್ಲರೂ ತಮ್ಮ ಭಾವೀ ಮನೆಯನ್ನು ಕರೆಯುವುದು 'ಗುಡಿಸಲು' ಎಂದೇ.

ಮನೆಯ ಕೆಲಸ ಪ್ರಾರಂಭವಾಗುವ ವೇಳೆಗೆ ಆ ಗುಡಿಸಲಿನ ರೂಪರೇಖೆಗಳು ಬದಲಾವಣೆ ಹೊಂದಿರುತ್ತವೆ. ನಾನು ಕಟ್ಟಹೊರಟದ್ದು ಕೇವಲ ಗುಡಿಸಲಲ್ಲದಿದ್ದರೂ—ಗುಡಿಸಲು ಎನ್ನುವುದು ನಮ್ರತೆಯ ಮಾತು ಅಥವಾ ನನ್ನನ್ನು ನಾನೇ ಎಚ್ಚರಿಸಿಕೊಳ್ಳುವ ಮಾತು—ಸಣ್ಣ ಮನೆಯೇ ಹೌದು. ಗುದ್ದಲಿಪೂಜೆ ಮಾಡುವ ದಿನ ನನಗೇ ತೋರಿತು, ಕಟ್ಟುವುದು ಸಣ್ಣ ಮನೆಯೇ ಆದರೂ, ಪಾಯ ತೆಗಿಸಿ ಅಸ್ತಿಭಾರ ಹಾಕುವಾಗ ಮನೆಯನ್ನು ಮುಂದೆ ವಿಸ್ತರಿಸುವುದಕ್ಕೆ ಅನುಕೂಲವಾಗುವಂತೆ ಹಾಕಿಸಿದರೆ ಒಳ್ಳೆಯದೆಂದು. ಹಾಗೆಯೇ ಗೋಡೆಗಳು ಮಹಡಿಯ ಭಾರವನ್ನು ತಡೆಯುವಂತಿದ್ದರೇ ಒಳ್ಳೆಯದು. ಮಹಡಿಯನ್ನು ಈಗಲೇ ಕಟ್ಟಬೇಕೆಂದಲ್ಲ—ಅದು ಶುದ್ಧ ಮೂರ್ಖತನ. ಆದರೆ ಮುಂದೆ ನನ್ನ ಮಕ್ಕಳಿಗೋ ಮೊಮ್ಮಕ್ಕಳಿಗೋ ಮಹಡಿ ಕಟ್ಟಬೇಕೆನಿಸ್ಸಿದರೆ ಅವರು ಈ ಗೋಡೆಗಳನ್ನು ಉರುಳಿಸಿ ಬೇರೆ ಗೋಡೆ ಹಾಕುವಂತಾಗಬಾರದಷ್ಟೆ. ಮಾಡುವ ಕೆಲಸ ನೂರುಕಾಲ ನಿಲ್ಲುವಂಥಾದ್ದಾಗಬೇಕು. ಅದಕ್ಕೋಸ್ಕರ ಐನೂರು ರೂಪಾಯಿ ಹೆಚ್ಚಾದರೂ ವ್ಯರ್ಥವಲ್ಲ. ಮಿತವ್ಯಯ ದೃಷ್ಟಿಯಿಂದ ಅದು ಅನಿವಾರ್ಯ.

ಕಿಟಕಿಗಳು ದೊಡ್ಡದಾಗಿ, ಮನೆಯಲ್ಲಿ ಚೆನ್ನಾಗಿ ಗಾಳಿ ಬೆಳಕುಗಳು ಆಡುವಂತಿರಬೇಕು. ಅವುಗಳ ಅಭಾವದಿಂದ ಕ್ಷಯರೋಗ ಬರಲೆಂದೆ, ನಾವು ಮನೆ ಕಟ್ಟಿಸುವುದು! ಆರೋಗ್ಯದ ನಿಯಮಗಳನ್ನು ಪಾಲಿಸುವುದಕ್ಕೆ ಮಾಡಬೇಕಾದ್ದನ್ನೆಲ್ಲಾ ಮಾಡಲೇಬೇಕು—ಹಣದ ಮುಖವನ್ನು ನೋಡುವಂತಿಲ್ಲ. ಇನ್ನು ಹೆಂಚಿನ ಛಾವಣಿ ಹಾಕಿಸಬೇಕೆ ಅಥವಾ ತಾರಸಿ ಹಾಕಿಸಬೇಕೆ ಎಂಬ ಪ್ರಶ್ನೆ. ನನಗೆ ಹೆಂಚಿನ ಮನೆಯೆಂದರೆ ಮೊದಲಿಂದಲೂ ಆಗದು; ತಾರಸಿಯೇ ಆಗಬೇಕು. ಹೆಂಚಿನ ಮನೆಗಳಲ್ಲಿ—ಅವು ಮಂಗಳೂರು ಹೆಂಚುಗಳಾದರೂ ಈ ಮಾತು ಸತ್ಯ—ಬೆಳಗೆದ್ದರೆ

ರಿಪೇರಿ ಮಾಡಿಸಬೇಕಾದ್ದು ಏನಾದರೂ ಇದ್ದೇ ಇರುತ್ತದೆ. ದೊಡ್ಡ ಮಳೆ ಬಂದರೆ ನಾಲ್ಕು ಕಡೆ ಸೋರುತ್ತದೆ; ಬಿರುಗಾಳಿಯೆದ್ದರೆ ಹೆಂಚುಗಳು ಹಾರಿ ಹೋಗುತ್ತವೆ. ಈ ರಿಪೇರಿ ಕೆಲಸಕ್ಕೆಲ್ಲಾ ಹಣ ಸುರಿಯುವವರು ಯಾರು? ಕೆಲಸಗಾರರನ್ನು ಹುಡುಕಿಕೊಂಡು ಹೋಗುವವರು ಯಾರು? ಇಷ್ಟೇ ಅಲ್ಲದೆ ಕಳ್ಳರು ಸುಲಭವಾಗಿ ಹೆಂಚು ತೆಗೆದು ಮನೆಯೊಳಕ್ಕೆ ಇಳಿಯಬಹುದು. ಇಂದು ಸಾವಿರ ರೂಪಾಯಿಗಳನ್ನು ಉಳಿಸಹೋದರೆ ನಾಳೆ ಕಳ್ಳರು ಅದರ ನಾಲ್ಕರಷ್ಟನ್ನು ದೋಚಿಕೊಂಡು ಹೋಗಬಹುದು. ಅದಲ್ಲ ಮಿತವ್ಯಯದ ಹಾದಿ.

ಮನೆಯ ಗೋಡೆಗಳು ಎದ್ದು ತಾರಸಿಯ ಮಟ್ಟಕ್ಕೆ ಬಂದವು. ಆ ವೇಳೆಗೆ ನನ್ನ ಕಂಟ್ರಾಕ್ಟರು ಒಂದು ಸಲಹೆ ಕೊಟ್ಟ. ಹಿಡಿದ ಕೈಯಲ್ಲೇ ಮಹಡಿಯನ್ನು ಎತ್ತಿಬಿಟ್ಟರೆ ಒಳ್ಳೆಯದಲ್ಲವೆ? ಪಾಯದ ಮತ್ತು ಅಸ್ತಿಭಾರದ ಖರ್ಚು ಎಂದಿದ್ದರೂ ಮಾಡಿದ್ದಾಗಿದೆ. ಸುಲಭದಲ್ಲೇ ಮನೆಯ ವಿಸ್ತಾರ ಎರಡರಷ್ಟಾಗುತ್ತದೆ. ನಾವು ಕೆಳಗೆ ವಾಸವಾಗಿದ್ದು ಮಹಡಿಯ ಭಾಗವನ್ನು ಬಾಡಿಗೆಗೆ ಕೊಟ್ಟರೆ ಅದು ತನ್ನ ಖರ್ಚನ್ನು ತಾನೇ ದುಡಿಯುತ್ತದೆ. ಇಷ್ಟೆಲ್ಲಾ ಮಾಡಿದ ಮೇಲೆ ಒಂದು ಮೋಟಾರ್ ಷೆಡ್ ಹಾಕಿಸಬೇಡವೆ? ನಾಳೆ ನನಗೆ ವರ್ಗವಾಗಿ, ಕಾರ್ ಇಟ್ಟವರು ಯಾರಾದರೂ ಬಾಡಿಗೆಗೆ ಬಂದರೆನ್ನಿ. ಅವರ ಸೌಕರ್ಯವನ್ನೂ ಗಮನಿಸಬೇಕೋ ಬೇಡವೋ? ಮೋಟಾರ್ ಷೆಡ್ಡನ್ನೇ ನೆವಮಾಡಿಕೊಂಡು ಅವರಿಂದ ಹೆಚ್ಚು ಬಾಡಿಗೆಯನ್ನು ವಸೂಲು ಮಾಡಬಹುದು.

ಈ ಸಲಹೆಗಳಲ್ಲಿ ಕಂಟ್ರಾಕ್ಟರ ಸ್ವಾರ್ಥವೇನೂ ಇಲ್ಲವೆಂದು ಅವನ ಹೇಳಿಕೆಯಿಂದ ಸ್ಪಷ್ಟವಾಯಿತು. ಅವನಿಗೆ ಜೀವನದಲ್ಲಿದ್ದುದು ಒಂದೇ ಒಂದು ಆಸೆಯಂತೆ: "ನಮ್ಮ ರಾಯರಿಗೆ ಮಹಡಿಮನೆ ಕಟ್ಟಿಕೊಡಬೇಕು. ಅವರು ಮಹಡಿ ಮನೆಯಲ್ಲಿದ್ದುದನ್ನು ನೋಡಬೇಕು" ಎಂದು. ಇಂಥ ಅವ್ಯಾಜ, ನಿಃಸ್ವಾರ್ಥ ಪ್ರೇಮವನ್ನು ಎದುರಿಸಿ ನಿಲ್ಲುವುದು ಹೇಗೆ! ಹೀಗೆಯೇ ತರ್ಕ ಬೆಳೆಯಿತು, ಮನೆ ಬೆಳೆಯಿತು, ನನ್ನ ಸಾಲವೂ ಬೆಳೆಯಿತು. ಇಷ್ಟೆಲ್ಲಾ ಆದದ್ದು ಮಿತವ್ಯಯದ ಹೆಸರಿನಲ್ಲಿ.

ಕಟ್ಟಡವೆಲ್ಲಾ ಮುಗಿದ ಮೇಲೆ, ನಲ್ಲಿ ದೀಪ ಮೊದಲಾದುವುಗಳ ಖರ್ಚು ಗಣತಿಗೇ ಬರಲಿಲ್ಲವೆಂದು ಗೊತ್ತಾಯಿತು. ಆ ವೇಳೆಗೆ ಯಾವುದೋ ಕಾರಣದಿಂದ ವಿದ್ಯುಚ್ಛಕ್ತಿಯ ಸಲಕರಣೆಗಳ ಬೆಲೆಯೂ ಏರಿತು. ಗೃಹ ಪ್ರವೇಶದ ಖರ್ಚೇ ಐನೂರು ರೂಪಾಯಿಗೆ ಬಂತು... ಮನೆ ಕಟ್ಟಿಸಿದ

ಮೇಲೆ ಅನ್ನಶಾಂತಿ ಮಾಡಿಯೇ ತೀರಬೇಕಷ್ಟೆ. ಅಂತೂ ಇಂತೂ ಸರ್ಕಾರದವರು ಕೊಟ್ಟ ನಾಲ್ಕುಸಾವಿರದ ಜೊತೆಗೆ ಮತ್ತೆ ಆರುಸಾವಿರ ರೂಪಾಯಿ ಸಾಲ ಹೆಚ್ಚಿತು. ಇತ್ತ ಸಂಸಾರದ ಖರ್ಚೂ ಏರಿತು. ನನ್ನ ಅಂತಸ್ತು ಯೋಗ್ಯತೆಗಳ ವಿಷಯದಲ್ಲಿ ನನಗಿದ್ದ ಸಮ್ಮತಿ ನನ್ನ ಮನೆಯವರಿಗಿರಲಿಲ್ಲ. ನನ್ನ ಅಂಬಲಿ ತುಂಬೆ ಸೊಪ್ಪಿನ ಯೋಜನೆ ಕಾರ್ಯರೂಪಕ್ಕೆ ಬರಲೇ ಇಲ್ಲ. ತುಂಬೆಯ ಸೊಪ್ಪು ಅಡಿಗೆಗೆ ಯೋಗ್ಯವೇ ಅಲ್ಲವೆಂದು ತಜ್ಞರಾದವರು ನಿಷ್ಕೃಷ್ಟವಾದ ಅಭಿಪ್ರಾಯ ಕೊಟ್ಟರು.

ಹೀಗಾಗಿ ನಾಲ್ಕು ವರ್ಷ ಸರ್ಕಾರದ ಸಾಲಕ್ಕೆ ಕಂತುಕಟ್ಟಿ, ಹೊಸ ಹೊಸ ಕಡೆಗಳಲ್ಲಿ ಸಾಲಮಾಡಿ, ನೋಟೀಸುಗಳನ್ನು ತರಿಸಿಕೊಂಡು ಬವಣೆ ಪಟ್ಟದ್ದಾಯಿತು. ಆರೋ ಮೂರೋ ಎಷ್ಟು ಬಂದರೂ ಬರಲಿ, ಮನೆಯನ್ನು ಮಾರಿ ಕೈತೊಳೆದುಕೊಳ್ಳೋಣವೆಂದರೆ ಅದಕ್ಕೆ ಮನೆಯಲ್ಲಿ ಯಾರ ಒಪ್ಪಿಗೆಯೂ ಇಲ್ಲ. "ಮನೆಯೆಂದರೆ ಕೇವಲ ಇಟ್ಟಿಗೆ, ಗಾರೆ, ಅಲ್ಲ; ಅದು ಮಹಾಲಕ್ಷ್ಮಿ" ಎಂದು ಲಲಿತೆಗೆ ಮಂದಟ್ಟಾಗಿತ್ತು. ಮಹಾಲಕ್ಷ್ಮಿಯನ್ನು ಕೈಬಿಡುವುದುಂಟೆ! ಹೀಗಾಗಿ ಸಾಲ ತೀರಿಸುವ ದಾರಿಯೇ ಕಾಣದೆ ತಲೆಯ ಮೇಲೆ ಕೈಯಿಟ್ಟುಕೊಂಡು ನಿಟ್ಟುಸಿರುಬಿಡುತ್ತಿರುವಾಗ "ಮನೆ ಕಟ್ಟಿ ನೋಡು, ಮದುವೆ ಮಾಡಿನೋಡು" ಎಂಬ ನಾಣ್ಣುಡಿ ಪ್ರಯತ್ನವಿಲ್ಲದೆಯೇ ಬಾಯಿಂದ ಹೊರಟಿತು.

ಈ ನಾಣ್ಣುಡಿ ಉತ್ತೇಜನೆಯ ಮಾತಲ್ಲವೆಂದು ಸ್ಪಷ್ಟವಾಗಿಯೇ ಇದೆಯಷ್ಟೆ. ಅದು "ಸರ್ವನಾಶವಾದೀತು, ಜೋಕೆ. ನಿನ್ನ ಬುದ್ಧಿ ನಿನ್ನ ಕೈಯಲ್ಲಿರಲಿ" ಎಂದು ಎಚ್ಚರಿಸುವ ಮಾತು. ಹೀಗೆ ಎಚ್ಚರಿಕೆ ಕೊಡುವವರೆಲ್ಲರೂ ಅನುಭವಿಗಳು. ತಮ್ಮ ಅನುಭವದಿಂದ ಇತರರು ಪ್ರಯೋಜನ ಪಡೆಯಲೆಂಬ ಸದುದ್ದೇಶದಿಂದಲೇ ಈ ಮಾತನ್ನಾಡುತ್ತಾರೆ. ಆದರೂ ಇದು ತಪ್ಪು ಎಂದೇ ನನ್ನ ಅಭಿಪ್ರಾಯ. ಮೊದಲನೆಯದಾಗಿ ಒಂದು ಅಂಶವನ್ನು ನಾವು ಪರ್ಯಾಲೋಚಿಸಬೇಕು; ಒಬ್ಬರ ಅನುಭವದಿಂದ ಮತ್ತೊಬ್ಬರು ಬುದ್ಧಿ ಕಲಿಯುತ್ತಾರೆನ್ನುವುದು ಸುಳ್ಳುಮಾತು. ರಾಷ್ಟ್ರಗಳು ಇತಿಹಾಸದ ಘಟನೆಗಳಿಂದ ಬುದ್ಧಿ ಕಲಿಯುತ್ತವೆಂಬುದು ಎಷ್ಟು ಸುಳ್ಳೋ ಇದೂ ಅಷ್ಟೇ ಸುಳ್ಳು. ಅವರವರ ಸ್ವಂತ ಅನುಭವದಿಂದಲೇ ಅವರವರು ಸಂಸ್ಕಾರ ಪಡೆಯಬೇಕು. ಆದ್ದರಿಂದ ನಮ್ಮ ಬೋಧನೆಯಿಂದಾಗುವ ಪರಿಣಾಮ ಕಂಠಶೋಷಣೆಯೇ ಹೊರತು ಮತ್ತೇನೂ ಇಲ್ಲ. ನಾನು ಮನೆ ಕಟ್ಟುವ ಮುಂಚೆ ನನ್ನ ಮಿತ್ರರು ಇದೇ ಮಾತನ್ನೇ ಹೇಳಿದರು. ಕಟ್ಟಿದ ಮೇಲೆ

ನಾನೂ ಇತರರಿಗೆ ಹೇಳಿದ್ದೇನೆ. ಆದರೂ ಅವರೆಲ್ಲರೂ ನನ್ನಂತೆಯೇ ಮನೆಗಳನ್ನು ಕಟ್ಟಿಕೊಂಡಿದ್ದಾರೆ; ಸಾಹುಕಾರರಿಗೆ, ಸಹಕಾರ ಸಂಘಗಳಿಗೆ, ಸರ್ಕಾರಕ್ಕೆ ಕಂತು ಕಟ್ಟುತ್ತಾ ಇತರ ಕಡೆಗಳಲ್ಲಿ ಸಾಲವನ್ನು ಬೇಡುತ್ತಾ ಜೀವನವನ್ನು ಹೇಗೋ ನೂಕುತ್ತಿದ್ದಾರೆ. ಎಂದೋ ಒಂದು ದಿನ ಮನೆಯನ್ನು ಮಾರಿ ಬಾಡಿಗೆ ಮನೆಗೆ ಹೋಗುತ್ತಾರೆ. ಮೇಲೆ ಕಾಣಿಸಿದ ಬುದ್ಧಿವಾದವನ್ನು ಇತರರಿಗೆ ಹೇಳಿಯೂ ಹೇಳುತ್ತಾರೆ. ಇದು ಲಲಾಟಲಿಖಿತಾ ರೇಖಾ; ಇದನ್ನು ಯಾರೂ ತಪ್ಪಿಸಲಾಗುವುದಿಲ್ಲ.

ಬುದ್ಧಿವಾದದಿಂದ ಇತರರಿಗೆ ಪ್ರಯೋಜನವಾಗುವುದಿಲ್ಲವೆನ್ನುವುದು ಒಂದು ವಿಷಯ. ಹೋಗಲಿ, ಬುದ್ಧಿವಾದ ಹೇಳುವವರಾದರೂ ಪ್ರಾಮಾಣಿಕರಾಗಿ, ಮನಃಪೂರ್ವಕವಾಗಿ, ಈ ಮಾತು ಹೇಳುತ್ತಾರೆಯೆ ? ಅದರ ವಿಷಯದಲ್ಲೂ ನನಗೆ ಸಂದೇಹವುಂಟು. ಕೆಲವು ದಿನಗಳ ಕೆಳಗೆ ಪರಿಚಿತರಾದವರೊಬ್ಬರ ಮನೆಗೆ ಹೋದೆ. ಮನೆ ಅಂದವಾಗಿ ಓರಣವಾಗಿತ್ತು. ಅದರಲ್ಲಿದ್ದ ಒಂದೇ ಒಂದು ಕೊರತೆಯೆಂದರೆ ಅದರ ಹೊಸತನ. ಯಜಮಾನನಿಗೆ ತನ್ನ ಮನೆಯನ್ನು ಮರೆಯುವಷ್ಟು ಹೊಂದಿಕೆಯೂ ಬಳಕೆಯೂ ಇನ್ನೂ ಬಂದಿರಲಿಲ್ಲ. ಆತನ ನಡೆನುಡಿ ಮುಖಚರ್ಯೆಗಳನ್ನು ನೋಡಿದೊಡನೆಯೇ ನನಗೆ ಗೊತ್ತಾಯಿತು—ಆತ ಹೊಸದಾಗಿ ಮನೆ ಕಟ್ಟಿದ್ದನೆಂದು. ಅದರ ವಿಷಯ ಮಾತನಾಡಲು ಅವನು ಕಾತರನಾಗಿಯೂ ಇದ್ದ. "ಇದು ಸ್ವಂತ ಮನೆಯೆ ?" ಎಂದು ನಾನು ಪ್ರಶ್ನೆಹಾಕದೆ ಇದ್ದಿದ್ದರೆ ಅಪರಾಧವೇ ಆಗುತ್ತಿತ್ತು.

ಪ್ರಶ್ನೆ ಕೇಳಿದ ಕೂಡಲೇ ಆತನ ಮುಖ ಅರಳಿತು. ಖಾಯಿಲೆಯಿಂದ ನರಳುವವನಿಗೆ ತನ್ನ ರೋಗದ ವಿವರಗಳನ್ನು ಕಂಡಕಂಡವರಲ್ಲೆಲ್ಲಾ ಹೇಳಿಕೊಳ್ಳಬೇಕೆಂಬ ಚಟವಿರುವುದಿಲ್ಲವೆ ? ಈತನಿಗೂ ಹಾಗೆಯೇ. "ಹೌದು ಮನೆ ನನ್ನದೇ" ಎಂದವನು ಅಲ್ಲಿಗೇ ನಿಲ್ಲದೆ ಅದರ ಚರಿತ್ರೆಯನ್ನೆಲ್ಲಾ ಹೇಳಲಾರಂಭಿಸಿದ. ಆತನಿಗೆ ಮನೆದಳ ಬಹಳ ಸುಲಭದ ದರದಲ್ಲಿ ಸಿಕ್ಕಿತಂತೆ. ಮನೆದಳದ ಬೆಲೆ ಬೆಂಗಳೂರಿನಂಥ ನಗರದಲ್ಲಿ ದಿನದಿನಕ್ಕೆ ಏರುತ್ತದೆಯೇ ಹೊರತು ಇಳಿಯುವ ಮಾತೇ ಇಲ್ಲ. ಆದ್ದರಿಂದ ಮನೆಕಟ್ಟುವುದು ತಡವಾದರೂ ಸರಿಯೆ, ನಿವೇಶನವನ್ನು ಕೊಂಡಿಟ್ಟುಕೊಳ್ಳುವುದು ಒಳ್ಳೆಯದು ಎನ್ನಿಸಿತು. ನಿವೇಶನ ಕೈಗೆ ಬಂದಮೇಲೆ ಸುಮ್ಮನೆ ಕುಳಿತಿರಲಾಗುತ್ತದೆಯೆ ? ಅದಕ್ಕಾಗಿ ಮಾಡಿದ ಸಾಲಕ್ಕೆ ಬಡ್ಡಿ ಕೊಡಬೇಕು, ಇತ್ತ ವಾಸದ ಮನೆಗೆ ಬಾಡಿಗೆಯನ್ನು ಕೊಡಬೇಕು. ಆದ್ದರಿಂದ 'ಮಿತವ್ಯಯದ

ದೃಷ್ಟಿ'ಯಿಂದ ಮನೆಯನ್ನು ಕಟ್ಟಲೇ ಬೇಕಾಯಿತು. (ಸಾಲ ಮಾಡುವ ವರು, ಮನೆಕಟ್ಟುವವರು, ಎಲ್ಲರೂ ಆ ಕೆಲಸವನ್ನು ಮಿತವ್ಯಯದ ದೃಷ್ಟಿ ಯಿಂದಲೇ ಮಾಡುತ್ತಾರೆ. ಇದೊಂದು ಗಮನಾರ್ಹವಾದ ಅಂಶ.) ಸರ್ಕಾರದವರು ಹೇಗಿದ್ದರೂ ಮುಂಗಡ ಕೊಡುತ್ತಾರೆ. ತಿಂಗಳು ತಿಂಗಳಿಗೆ ಸಂಬಳದಲ್ಲಿ ಕಾಲುಭಾಗವನ್ನು ಹಿಡಿದೇನೋ ಹಿಡಿಯುತ್ತಾರೆ. ಆದರೇನು, ಬಾಡಿಗೆಯ ಹಣ ಉಳಿಯುತ್ತದಷ್ಟೆ. ಇದರ ಮೇಲೆ ನಾವೇ ಮನೆ ಕಟ್ಟಿಸಿ ದರೆ ನಮ್ಮ ಅಭಿರುಚಿಗೆ, ಅವಶ್ಯಕತೆಗೆ, ತಕ್ಕಂಥ ಮನೆಯಲ್ಲಿ ವಾಸಮಾಡ ಬಹುದು. "ಆದ್ದರಿಂದ ಏನೋ ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು ಇರಲಿ ಎಂದು...." ಇತ್ಯಾದಿ, ಇತ್ಯಾದಿ.

ಇಷ್ಟು ಹೇಳಿ, ಕಾಫಿ ತರಿಸಿಕೊಟ್ಟು, ಆತ ನನಗೆ ಮನೆಯನ್ನೆಲ್ಲಾ ತೋರಿಸಿದ. ಗೋಡೆಯಲ್ಲಿ ಅಡಕವಾದ ಬೀರುಗಳು, ನೆಲಕ್ಕೆ ಹಾಕಿದ್ದ ಪಾಲಿಷ್, ಅಡಿಗೆ ಮನೆಯಲ್ಲಿ ವಿದ್ಯುಚ್ಛಕ್ತಿಯನ್ನು ಉಪಯೋಗಿಸಲು ಮಾಡಿದ್ದ ವ್ಯವಸ್ಥೆ, ಮುಂತಾದ್ದನ್ನೆಲ್ಲಾ ಪ್ರದರ್ಶಿಸುವಾಗ ಆತ ತನ್ನ ಹೆಮ್ಮೆ ಯನ್ನೂ ಆನಂದವನ್ನೂ ಬಚ್ಚಿಡಲು ಮಾಡಿದ ಪ್ರಯತ್ನ ಸ್ಪಷ್ಟವಾಗಿ ಕಾಣುತ್ತಿತ್ತು. ಮನೆ ಕಟ್ಟಿದ್ದಕ್ಕಾಗಿ ಅವನೇನೂ ಪಶ್ಚಾತ್ತಾಪ ಪಟ್ಟಂತೆ ತೋರಲಿಲ್ಲ. ಆ ಮನೆ ಅವನ ವ್ಯಕ್ತಿತ್ವದ ವಿಸ್ತರಣವಾಗಿ ಪರಿಣಮಿಸಿತ್ತು. ಎಷ್ಟಾಗಲಿ ಆವನ ಮನೆ. ಅವನ ಕಣ್ಣು ಮೂಗು ಕೈಕಾಲುಗಳು ಹೇಗೋ ಹಾಗೆ ಮನೆಯೂ ಅವನ ಸ್ವಂತ ಮನೆ. ಅದು ಅವನ ಚಾತುರ್ಯದ, ಅಭಿರುಚಿಯ, ದೊಡ್ಡಸ್ತಿಕೆಯ, ಕೊನೆಯದಾಗಿ ಅವನ ಮಿತವ್ಯಯದ, ಪ್ರತೀಕ. ಇದನ್ನೆಲ್ಲಾ ನನ್ನೊಡನೆ ಹೇಳಿಕೊಳ್ಳಬೇಕೆಂಬ ಆಸೆ ಸ್ವಾಭಾವಿಕ ವಾದದ್ದೇ. ಅದರಲ್ಲಿ ಹಾಸ್ಯಕ್ಕೆ ವಿಷಯವೇನೂ ಇಲ್ಲ. ಈ ಸಂದರ್ಭದಲ್ಲಿ ನಿಜವಾಗಿ ಗಮನಿಸಬೇಕಾದ ಅಂಶವೆಂದರೆ—ಆತ ಜೋಲುಮುಖ ಹಾಕಿ ಕೊಂಡು "ಮನೆಕಟ್ಟಿ ನೋಡು" ಎನ್ನುವ ಮಾತಾಡಲಿಲ್ಲ.

ಅದಕ್ಕೆ ಬದಲು, ಮನೆಯ ಪ್ರದರ್ಶನವೆಲ್ಲಾ ಮುಗಿದ ಮೇಲೆ "ನೀವೂ ಒಂದು ಕಟ್ಟಿಸಿಬಿಡಬಹುದಲ್ಲ, ಸಾರ್? ಶುಭಸ್ಯ ಶೀಘ್ರಂ. ದಿನಕಳೆದ ಹಾಗೆಲ್ಲಾ ಒಳ್ಳೆಯ ನಿವೇಶನ ಸಿಕ್ಕುವುದು ಕಷ್ಟವಾಗುತ್ತೆ," ಎಂದ. ಆತನಂತೆಯೇ ನನಗೂ ನನ್ನ ವಿಷಯ ಹೇಳಿಕೊಳ್ಳಬೇಕೆಂಬ ಆತುರ. ಆತ ಅದುವರೆಗೆ ಆಡಿದ್ದ ಮಾತಿನಲ್ಲಿ ಒಂದೂ ನನಗೆ ಹೊಸದಲ್ಲ; ಎಲ್ಲಾ ಪರಿಚಿತವಾದದ್ದೇ. ಮನೆ ಕಟ್ಟುವವರೆಲ್ಲರ ತರ್ಕಸರಣಿಯೂ ಒಂದೇ ರೀತಿ ಯದು. ಆದರೆ ನಾವು ಅದೇ ದಾರಿಯಲ್ಲಿ ನಾಲ್ಕು ಹೆಜ್ಜೆ ಮುಂದೆ

ಹೋಗಿದ್ದೆನೆಂಬುದು ಅವನಿಗೆ ತಿಳಿಯದು, ಪಾಪ. "ಸ್ವಾಮಿ, ನೀವೇ ಪುಣ್ಯವಂತರು ; ಮನೆ ಕಟ್ಟಿದರೂ ಸುಖವಾಗಿದ್ದೀರಿ. ನನ್ನ ಅನುಭವ ಅಷ್ಟೇನೂ ಹಿತವಾಗಲಿಲ್ಲ," ಎಂದು ನನ್ನ ಕಥೆಯನ್ನೆಲ್ಲಾ ಹೇಳಿಕೊಂಡ ಮೇಲೆ ಆತನ ದನಿ ಬದಲಾಯಿಸಿತು. "ಸುಖವೆಲ್ಲಿ ಬಂತು ರಾಯರೆ! ಸುಖ ಅನ್ನುವುದು ಬರೀ ಕನಸು. ಮನೆ ನಿರೀಕ್ಷೆಗಿಂತ ನಾಲ್ಕುಸಾವಿರ ರೂಪಾಯಿ ಹೆಚ್ಚಾಗಿ ಎಳೆದುಬಿಟ್ಟಿತು. ಕಂತು ಕೊಟ್ಟ ಮೇಲೆ ಉಳಿಯುವ ಹಣ ಸಂಸಾರಕ್ಕೆ ಏನೇನೂ ಸಾಲದು. ಏನೋ ಕೆಟ್ಟ ಧೈರ್ಯ, ಈ ಕೆಲಸಕ್ಕೆ ಕೈಹಾಕಿಬಿಟ್ಟೆ. ಈಗ ನನಗೆ ಜೀವನವೇ ಬೇಸರವಾಗುತ್ತಾ ಬಂದಿದೆ. ಅಷ್ಟಲ್ಲದೆ ಹೇಳುತಾರೆಯೆ, ಮನೆ ಕಟ್ಟಿ ನೋಡು ಮದುವೆ ಮಾಡಿ ನೋಡು ಅಂತ" ಎಂದು ತಾನೂ ನನ್ನ ಜೊತೆಗೆ ದನಿಗೂಡಿಸಿದ.

ಆ ದಿನ ಅವನು ಆಡಿದ ಮಾತಿನಲ್ಲಿ ಮೊದಲಿನ ಥಾಟಿಗೂ ಕೊನೆಯ ದಕ್ಕೂ ಏನೇನೂ ಹೊಂದಿಕೆ ಇರಲಿಲ್ಲ. ಇವೆರಡರಲ್ಲಿ ಯಾವುದು ಅವನ ನಿಜವಾದ ಮನೋಭಾವ ? ತಾನು ಮನೆಕಟ್ಟಿದ ವಿಷಯದಲ್ಲಿ ಆತನಿಗೆ ಜುಗುಪ್ಸೆಯೆ ಅಥವಾ ಹೆಮ್ಮೆಯೆ ? ನನಗೆ ತೋರುತ್ತದೆ, ಇವೆರಡೂ ನಿಜವೆಂದು. ನಾನು "ಸ್ವಂತ ಮನೆಯೆ ?" ಎಂದು ಕೇಳಿದಾಗ ಆತನಿಗೆ ನಿಜವಾಗಿಯೂ ಹೆಮ್ಮೆಯೇ. ನಾನು ಸಂತೋಷಪಡುತ್ತೇನೆಂಬ ಭರವಸೆ ಇಟ್ಟುಕೊಂಡು ಅವನೂ ಸಂತೋಷದಿಂದ ಉತ್ತರಕೊಟ್ಟ. ಅನಂತರ ನಾನು ಕಷ್ಟವನ್ನು ತೋಡಿಕೊಂಡಾಗ ಅವನ ಮನಸ್ಸಿನಲ್ಲಿ ಸ್ವಲ್ಪ ತೊಡಕಾಯಿತು. ನಾನು ಸಂಕಟದಲ್ಲಿರುವಾಗ ತಾನು ಹೆಮ್ಮೆ ಕೊಚ್ಚಿಕೊಳ್ಳುವುದು ನ್ಯಾಯವಲ್ಲ, ಆ ಸಂಕಟದಲ್ಲಿ ತಾನೂ ಭಾಗಿಯಾಗಬೇಕು, ಎಂಬ ಮಾನವಸಹಜವಾದ ಪ್ರವೃತ್ತಿ ಅವನಲ್ಲಿ ಜಾಗ್ರತವಾಯಿತು. ಅದರ ಫಲವಾಗಿ ಆತ ಮರೆತಿದ್ದ ಅಥವಾ ಗಮನಿಸದೆ ಇದ್ದ ಕಷ್ಟನಿಷ್ಠುರಗಳೆಲ್ಲಾ ಸ್ಪಷ್ಟವಾಗಿ ಕಾಣಲಾರಂಭಿಸಿದವು. ಹೊಸ ಮನೆ ಕಟ್ಟಿದ್ದೇನೆ, ಅದು ನನ್ನದು, ನಾನು ಆಸ್ತಿವಂತ, ಎಂದು ಹೇಳಿಕೊಳ್ಳುವ ಉತ್ಸಾಹದಲ್ಲಿ ತನ್ನ ಸಾಲವನ್ನು ಮರೆತಿದ್ದ. ನನ್ನ ಮಾತಿನಿಂದಾಗಿ ಅದು ನೆನಪಿಗೆ ಬಂತು. ಒಂದು ದೃಷ್ಟಿಯಿಂದ ನೋಡಿದರೆ ಅವನ ಸಂತೋಷಕ್ಕೆ ಭಂಗವನ್ನು ತಂದ ಪಾಪ ನನ್ನನ್ನು ಆವರಿಸಿದೆ.

ಆದರೆ ಅದೇ ಸಮಯದಲ್ಲಿ ಆತನ ಮನಸ್ಸು ಇನ್ನೊಂದು ಭಾವನೆಗೂ ಎಡೆಗೊಟ್ಟಿತು : ಮನೆ ಕಟ್ಟುವ ವಿಷಯದಲ್ಲಿ ಹೇಗೆ "ನಾನು ಯಾರಿಗೂ ಕಡಿಮೆಯಲ್ಲ" ಎಂದುಕೊಳ್ಳುತ್ತಿದ್ದನೋ ಹಾಗೆಯೇ "ಸಾಲಮಾಡಿ ಸಂಕಟ ಪಡುವುದರಲ್ಲೂ ನಾನು ಯಾರಿಗೇನು ಕಡಿಮೆ ?" ಎಂಬ ವಿಚಿತ್ರರೀತಿಯ

ಹೆಮ್ಮೆ—ಅವನಿಗೆ ಅರಿವಾಗದ ಹೆಮ್ಮೆ—ಅವನಲ್ಲಿ ಕಂಡುಬಂತು. ಇದು ಬಹಳ ಜಟಿಲವಾದ ಮನೋವೃತ್ತಿ : ಬಹಳ ಸೂಕ್ಷ್ಮವಾದ ಪರಿಶೀಲನೆಗೆ ಮಾತ್ರ ಕಾಣುವಂಥಾದ್ದು ; ಆದರೆ ಮಾನವನ ಸ್ವಭಾವಕ್ಕೆ ಹೊರತಾದ ದ್ದೇನೂ ಅಲ್ಲ. ಅನೇಕರು ತಮ್ಮ ದುಃಖವನ್ನು ಹೇಳಿಕೊಳ್ಳುವುದರಲ್ಲಿ, ಇತರರ ದುಃಖಕ್ಕಿಂತ ತಮ್ಮದು ಹೆಚ್ಚೆಂದು ತೋರಿಸುವುದರಲ್ಲಿ, ಒಂದು ಬಗೆಯ ಆನಂದವನ್ನು ಅನುಭವಿಸುತ್ತಾರೆ. ಅದರಲ್ಲಿ ಅಸಹಜತೆಯೂ ಇಲ್ಲ, ಕಾಪಟ್ಯವೂ ಇಲ್ಲ. ಆದ್ದರಿಂದ "ಮನೆ ಕಟ್ಟಿನೋಡು" ಎನ್ನುವ ಮಾತು ಎಷ್ಟೋ ವೇಳೆ ಎಚ್ಚರಿಕೆಯ ಮಾತಾಗುವುದಿಲ್ಲ. 'ನಾನು ಧೈರ್ಯಶಾಲಿ, ಸಾಲಕ್ಕೆ ಹೆದರುವವನಲ್ಲ" ಎಂದು ಸೂಚಿಸುವುದಕ್ಕೆ ಅದೊಂದು ಸಾಧನ.

ಇದಲ್ಲದೆ ನಾವು ಗಮನಿಸಬೇಕಾದ ಅಂಶ ಮತ್ತೊಂದಿದೆ. ನಾವು ಯಾವುದಾದರೂ ಒಂದು ಮಾತನ್ನು ಹೇಳುವಾಗ "ಪ್ರಪಂಚದಲ್ಲಿ ಎಲ್ಲರೂ ಈ ಮಾತಿನಂತೆ ನಡೆದರೆ ಪರಿಣಾಮ ಒಳ್ಳೆಯದಾಗುತ್ತದೆಯೇ ?" ಎಂದು ಪ್ರಶ್ನೆ ಹಾಕಿಕೊಳ್ಳಬೇಕಂತೆ. ಇದು ಪ್ರಸಿದ್ಧ ತತ್ವಜ್ಞಾನಿಯಾದ ಕ್ಯಾಂಟನ ಅಭಿಪ್ರಾಯ. ನಮ್ಮ ಮುಂದಿರುವ ಸಮಸ್ಯೆಯನ್ನು ಈ ಒರೆಗಲ್ಲಿಗೆ ಹಚ್ಚಿ ನೋಡೋಣ. "ಮೂರ್ಖರು ಮನೆ ಕಟ್ಟುತ್ತಾರೆ, ಜಾಣರು ಅದರಲ್ಲಿ ವಾಸಿಸುತ್ತಾರೆ" ಎಂಬ ಗಾದೆಯನ್ನು ನಾವೆಲ್ಲಾ ಕೇಳಿದ್ದೇವೆ. ಅದೇ ಭಾವ ನೆಯೇ "ಮನೆ ಕಟ್ಟಿ ನೋಡು" ಎಂಬ ಮಾತಿನಲ್ಲೂ ಅಡಗಿದೆ. ಅದು ನಿಜ ವೆಂದು ನಂಬಿ ಯಾರೂ ಮನೆ ಕಟ್ಟುವ ಗೋಜಿಗೆ ಹೋಗದಿದ್ದರೆ ನಮ್ಮ ಜಾಣರಿಗೆ ಮನೆಯೆಲ್ಲಿ ? ಜಾಣರು ಈ ಗಾದೆಗೆ ತಮ್ಮ ಒಪ್ಪಿಗೆ ಕೊಟ್ಟರೆ ಅವರಿಗೆ ಜಾಣರೆಂಬ ಹೆಸರು ಹೇಗೆ ತಾನೆ ಸಂದೀತು ? ತಮ್ಮ ಸೌಖ್ಯಕ್ಕೆ ತಾವೇ ಕೊಡಲಿಪೆಟ್ಟು ಹಾಕುವಂಥ ಜನ ಯಾವ ಸೀಮೆಯ ಜಾಣರು ?

ಆದ್ದರಿಂದ ಜಾಣರು ಇತರರೆಲ್ಲರಿಗೂ "ನೀವು ಮನೆ ಕಟ್ಟಿ" ಎಂದೇ ಉತ್ತೇಜನ ಕೊಡಬೇಕು. ಮನೆ ಕಟ್ಟುವುದು ಹುಚ್ಚುತನವೆಂದು ತಿಳಿದೂ ತಿಳಿದೂ ಅವರು ಹೀಗೆ ಉತ್ತೇಜನ ಕೊಟ್ಟರೆನ್ನಿ-ಅದು ಸ್ವಾರ್ಥದ ಪರಮಾ ವಧಿಯಾಗುತ್ತದೆ. ಅವರ ತರ್ಕ ಹೆಚ್ಚು ಕಡಿಮೆ ಈ ರೀತಿ ಇರಬೇಕಾಗು ತ್ತದೆ:—"ಮನೆ ಕಟ್ಟುವುದು ಹುಚ್ಚುತನ. ನಾವು ಹುಚ್ಚರಾಗಬಾರದು. ಆದರೆ ನಮಗೆ ವಾಸಕ್ಕೆ ಮನೆ ಬೇಕು. ಆದ್ದರಿಂದ ಇತರರು ಹುಚ್ಚರಾಗಿ ಮನೆ ಕಟ್ಟುವಂತೆ ಪ್ರೇರಿಸಬೇಕು." ನಮಗೆ ಬೇಡದ ಮೂರ್ಖತನವನ್ನು ಇತರರ ತಲೆಗೆ ಕಟ್ಟುವುದು ಯಾವ ನ್ಯಾಯ ? ಇದು ಕಂಡವರ ಮಕ್ಕಳನ್ನು ಬಾವಿಗೆ ತಳ್ಳುವ ನೀತಿ ತಾನೆ ?

ಪ್ರಪಂಚದಲ್ಲಿ ಎಲ್ಲರೂ ಜಾಣರೇ ಆಗಿ ಯಾರೂ ಮನೆ ಕಟ್ಟುವ ಸಾಹಸಕ್ಕೆ ಕೈಹಾಕದಿದ್ದರೆ ನಮ್ಮ ನಾಗರಿಕತೆ ನಾಲ್ಕು ಸಾವಿರ ವರ್ಷದ ಹಿಂದಿನ ಸ್ಥಿತಿಯಲ್ಲಿರುತ್ತಿತ್ತು. ಆಗ ಜನಗಳು ದನಕರುಗಳನ್ನು ಹೊಡೆದುಕೊಂಡು ನಿಂತಲ್ಲಿ ನಿಲ್ಲದೆ ತಿರುಗುತ್ತಿದ್ದರಂತೆ. ಯಾರೋ ಒಬ್ಬನಿಗೆ ಮನೆಕಟ್ಟುವ ಹುಚ್ಚು ಹಿಡಿದು ಅದೇ ಪ್ರವೃತ್ತಿ ಬೆಳೆದು ಬರದಿದ್ದರೆ ನಮ್ಮ ನಾಗರಿಕತೆಯ ಹೆಗ್ಗುರುತುಗಳಲ್ಲೊಂದಾದ ಶಿಲ್ಪಕಲೆಯೇ ಇರುತ್ತಿರಲಿಲ್ಲ. ಜಗತ್ಪ್ರಸಿದ್ಧವಾದ ತಾಜಮಹಲ್, ಬೇಲೂರಿನ ದೇವಾಲಯ, ಗ್ರೀಕರ ಪಾರ್ಥಿನನ್—ಮುಂತಾದ್ದನ್ನು ನೆನೆಯುವಾಗ ನಾವು ಈ ಬಗೆಯ ಹುಚ್ಚರಿಗೆ ವಂದನೆಗಳನ್ನು ಸಲ್ಲಿಸಬೇಕು. ಅಂಥ ಮೂರ್ಖರಿಂದಲೇ ಪ್ರಪಂಚದ ನಾಗರಿಕತೆ ಬೆಳೆದು ಈ ಸ್ಥಿತಿಗೆ ಬಂದಿರುವುದು. ಕಷ್ಟಕ್ಕೆ ಸಿಕ್ಕಿದರೆ ಗತಿಯೇನು ಎಂದು ಹೆದರಿ ಕುಳಿತ ಜನರು ಏನನ್ನು ತಾನೆ ಸಾಧಿಸಿಯಾರು!

ನನಗೇನೋ ಮನೆಕಟ್ಟುವವರ ವಿಷಯದಲ್ಲಿ—ಅವರ ಕಷ್ಟಕಾರ್ಪಣ್ಯಗಳೇನೇ ಇರಲಿ—ಸಹಾನುಭೂತಿ ಮಾತ್ರವಲ್ಲ, ಅತಿಶಯವಾದ ಗೌರವವುಂಟು. ಅವರು ಪ್ರಪಂಚದ ತ್ಯಾಗಿಗಳ ಗುಂಪಿಗೆ ಸೇರುತ್ತಾರೆ. ಅವರಲ್ಲಿ ನಾನೂ ಒಬ್ಬನಾದ್ದರಿಂದ ನನ್ನ ವಿಷಯದಲ್ಲೂ ಗೌರವ ಇಟ್ಟುಕೊಂಡಿದ್ದೇನೆ. ಮನೆಕಟ್ಟುವುದು ಒಂದು ದೃಷ್ಟಿಯಿಂದ ಮೂರ್ಖತನವೆನ್ನಬಹುದು. ಕಟ್ಟಿದವನಿಗೆ ಕಷ್ಟ ತಪ್ಪಿದ್ದಲ್ಲ. ಆದರೆ "ಕಷ್ಟವನ್ನು ನಾನು ಅನುಭವಿಸುತ್ತೇನೆ. ಇತರರಿಗಾದರೂ ಅದರಿಂದ ಸುಖವಾಗಲಿ" ಎನ್ನುವ ಸಾಹಸಿಗಳಿಗೆ ನಮ್ಮ ಕೃತಜ್ಞತೆ ಸಲ್ಲಲೇಬೇಕು. ಆದ್ದರಿಂದ ನಾನು ಯಾರನ್ನೂ "ಮನೆ ಕಟ್ಟಿ ನೋಡಿ" ಎಂದು ಮೂದಲಿಸುವುದಿಲ್ಲ. "ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು ಕಟ್ಟಿಯೇಬಿಡಿ" ಎಂದು ಉತ್ತೇಜನ ಕೊಡುತ್ತೇನೆ.

# ಅಕ್ಕಿಹೆಬ್ಬಾಳು

ಮೈಸೂರಿನಿಂದ ನಮ್ಮ ಊರಿಗೆ ಹೋಗಬೇಕಾದರೆ ಹಾಸನದ ರಸ್ತೆಯಲ್ಲಿ ಹೊರಟು ಭೇರ್ಯದ ಬಳಿ ತಿರುಗುವ ಹಳ್ಳಿಯ ರಸ್ತೆಯನ್ನು ಹಿಡಿದು ನಾಲ್ಕು ಮೈಲಿ ನಡೆಯಬೇಕು. ನಾನು ಆ ದಾರಿಯನ್ನು ತುಳಿದದ್ದು ಕಾಲು ಶತಮಾನದ ಹಿಂದೆ—ದುಃಖದ ಸನ್ನಿವೇಶದಲ್ಲಿ. ಆಗ ನಾನು ಬಿ.ಎ., ಪರೀಕ್ಷೆಗೆ ಕಟ್ಟಿದ್ದ ಕಾಲ. ಪರೀಕ್ಷೆ ಹದಿನೈದು ದಿನವಿದೆಯೆನ್ನುವಾಗ ನಮ್ಮ ತಂದೆಗೆ ಸಖತ್ತು ಕಾಯಿಲೆಯೆಂದು ತಂತಿ ಬಂತು. ಕೂಡಲೆ ಹೊರಟು ಸಂಜೆ ಎಂಟು ಘಂಟೆಗೆ ಹೊಸ ಅಗ್ರಹಾರದಲ್ಲಿ ರೈಲಿನಿಂದಿಳಿದು, ಕತ್ತಲೆಯಲ್ಲೇ ಆ ನಾಲ್ಕು ಮೈಲಿಗಳನ್ನು ನಡೆದೆ. ಮನಸ್ಸಿನಲ್ಲೂ ಕತ್ತಲೆಯೇ ತುಂಬಿತ್ತು. ಕೆಲವು ತಿಂಗಳಿಂದ ನರಳುತ್ತಿದ್ದ ನಮ್ಮ ತಂದೆಯ ಮರಣವೇನೂ ಅನಿರೀಕ್ಷಿತವಾದದ್ದಲ್ಲ. ತಂತಿಯ ಒಕ್ಕಣೆ 'ಕಾಯಿಲೆ' ಎಂದು ಮಾತ್ರವಿದ್ದರೂ ನನ್ನ ಮನಸ್ಸು ಹೇಳುತ್ತಿತ್ತು, ತಂದೆಯ ಮುಖ ಸಿಕ್ಕುವುದಿಲ್ಲವೆಂದು.

ಆದದ್ದೂ ಹಾಗೆಯೇ. ಹಿಂದಿನ ದಿನ ಸರಿರಾತ್ರಿಯಲ್ಲೇ ದಹನಕ್ರಿಯೆ ನಡೆದುಹೋಗಿತ್ತು. ಅವರು ಕೊನೆಯ ಬಾರಿ ಮಲಗಿದ್ದ ಬಳಿ ಹಿತ್ತಾಳೆಯ ಕಂಬವೊಂದರಲ್ಲಿ ದೀಪ ಉರಿಯುತ್ತಿತ್ತು. ಹಿರಿಯರೊಬ್ಬರು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ನಮಸ್ಕಾರ ಮಾಡಿಸಿ, "ಇಂದಿನಿಂದ ಮನೆಯಲ್ಲಿ ನೀನು ಕರ್ತನಾದೆ; ಮನೆಯ ಸಂಪ್ರದಾಯವನ್ನು ಉಳಿಸಿಕೊಂಡು ಬರುವ ಭಾರ ನಿನ್ನದು, ಕಂಡೆಯ" ಎಂದು ಹೇಳಿದರು. ಸಾಮಾನ್ಯವಾಗಿ ಅದು ಅನುಕಂಪವನ್ನು ವ್ಯಕ್ತಪಡಿಸುವ ಸನ್ನಿವೇಶ. ಆದರೆ ಅವರ ದನಿಯಲ್ಲಿ ಎಚ್ಚರಿಕೆಯೇ ಹೆಚ್ಚಾಗಿ ತೋರಿಬಂತು. ಆ ಸಂದರ್ಭದಲ್ಲಿ ಕೂಡ ಅವರು ನನ್ನ ಬಾಧ್ಯತೆಯನ್ನು ಒತ್ತಿ ಹೇಳದಿರಲಾರರು. ಅವರ ಪರಿಪಕ್ವವಾದ ದೃಷ್ಟಿ ಸಂದ ಜೀವದ ಕಡೆಗಿಂತ ಹೆಚ್ಚಾಗಿ ಬದುಕಿ ದುಡಿಯಬೇಕಾದ ಜೀವದ ಕಡೆಗಿತ್ತು. ಸಾವು ದೊಡ್ಡ ಸಮಸ್ಯೆಯಲ್ಲ, ದೊಡ್ಡ ಸಮಸ್ಯೆಯೆಂದರೆ ಜೀವನ. ಈಗ ತಂದೆ ಸತ್ತ ದುಃಖ ಅಷ್ಟಾಗಿ ನನ್ನ ನೆನಪಿಗೆ ಬರುತ್ತದೆಯೆಂದು ಹೇಳಲಾರೆ. ಆದರೆ ಬಂಧುಗಳು ತೋರಿದ ಸಹಾನುಭೂತಿ, ಉತ್ತರಕ್ರಿಯೆಗಳು ನಡೆಯುವಾಗ ಅವರು ಹೆಜ್ಜೆಹೆಜ್ಜೆಗೂ ಕೊಟ್ಟ ಬೆಂಬಲ, ಅವರ ಹಿತನುಡಿಗಳು—ಇವೆಲ್ಲಾ ಅಚ್ಚಳಿಯದೆ ನಿಂತಿವೆ.

ಈ ಬಾರಿ ನಾನು ಅಕ್ಕಿಹೆಬ್ಬಾಳಿಗೆ ಹೋದದ್ದು ಭೇರ್ಯದ ಮೇಲಲ್ಲ, ಕೃಷ್ಣರಾಜಪೇಟೆಯ ಕಡೆಯಿಂದ. ಆದರೆ ಮನಸ್ಸೇನೋ ಆ ಹಳೆಯ ರಸ್ತೆಯನ್ನೇ ತುಳಿಯುತ್ತಿತ್ತು. ಈಗ ಊರು ಮೊದಲಿದ್ದ ಸ್ಥಳದಲ್ಲಿಲ್ಲ. ಮಲೇರಿಯ ರೋಗದ ಹಾವಳಿಯಿಂದ ಅರ್ಧಪಾಲು ಜನ ಸತ್ತಮೇಲೆ ಹಳ್ಳಿಯನ್ನು ಅಲ್ಲಿಂದ ವರ್ಗಾಯಿಸುವುದು ಅನಿವಾರ್ಯವಾಯಿತು. ಹಳೆಯ ಊರಿನಿಂದ ಒಂದುವರೆ ಮೈಲಿ ದೂರವಿರುವ ಬೋರೆಯ ಮೇಲೆ ಹೊಸ ಊರನ್ನು ಕಟ್ಟಿದ್ದಾರೆಂದು ಕೇಳಿದ್ದೆ.

ಊರು ಹತ್ತಿರ ಬಂದಾಗ ನನ್ನ ಕಣ್ಣು ಚೆನ್ನಿಗರಾಯಸ್ವಾಮಿಯ ಪಾಳುಗುಡಿಯನ್ನು ಹುಡುಕಿತು. ಆ ದಾರಿಯಲ್ಲಿ ಅದು ಸಿಕ್ಕುವುದಿಲ್ಲವೆಂದು ಬಲ್ಲೆನಾದರೂ ಮನಸ್ಸಿಗೆ ಅಸಮಾಧಾನವಾಯಿತು—ಹಿಂದೆಂದೂ ಆ ಗುಡಿಯನ್ನು ಹಾಯದೆ ಊರಿಗೆ ಪ್ರವೇಶ ಮಾಡಿರಲಿಲ್ಲ. ಊರನ್ನು ಸೇರಿದ ಮೇಲೆ ಅಲ್ಲಿ ಕಂಡ ದೃಶ್ಯವೂ ಸಮಾಧಾನ ತರುವಂಥದಲ್ಲ. ಕಾರು ನಡೆಸುವುದನ್ನೂ ಮರೆತು ನಾನು ದಾರಿಯುದ್ದಕ್ಕೂ ಧ್ಯಾನಿಸುತ್ತ ಬಂದದ್ದು ಈ ದೃಶ್ಯವನ್ನಲ್ಲ—ಇದಲ್ಲ ನನ್ನ ಅಕ್ಕಿಹೆಬ್ಬಾಳು, ಎನ್ನಿಸಿತು. ಆ ಚಚ್ಚೌಕದ ನಾಲ್ಕು ಬೀದಿಗಳ ಹಳ್ಳಿಯೆಲ್ಲಿ ? ಊರಿನ ಚಾವಡಿ, ಹನುಮಂತರಾಯನ ಗುಡಿ, ಅಲ್ಲಲ್ಲಿಯೇ ಬೆಳೆದಿದ್ದ ತೆಂಗಿನ ಮರಗಳು, ಸಿಹಿನೀರಿನ ಬಾವಿ, ಅದರ ಬಳಿ ತೊಳೆದಿಟ್ಟಿರುವ ಬಿಂದಿಗೆಗಳು, ನೀರೆಳೆಯುವ ಹೆಂಗಸರು, ಮನೆಗಳ ಮುಂದಿನ ರಂಗವಲ್ಲಿ, ಎಲ್ಲಕ್ಕಿಂತಲೂ ಹೆಚ್ಚಾಗಿ ದೇವಾಲಯದ ಗೋಪುರ—ಇವೊಂದೂ ಇಲ್ಲದೆ ಇದು ಹೇಗೆ ನಮ್ಮ ಊರಾದೀತು ? ಈಗಿನ ಊರು ಬಸ್ ರಸ್ತೆಯ ಎರಡು ಪಕ್ಕಗಳಲ್ಲೂ ಕ್ರಮವ್ಯವಸ್ಥೆಗಳಿಲ್ಲದೆ ಬೆಳೆದಿದೆ. ಕೆಲವು ಮನೆಗಳನ್ನಂತೂ ಮನೆಯೆನ್ನುವುದಕ್ಕಿಂತ ಜೋಪಡಿ ಎಂದರೆ ತಡೆದೀತು. ಮನೆಗಳ ಮಗ್ಗುಲಲ್ಲಿ ಅಲ್ಲೊಂದು ಇಲ್ಲೊಂದು ಗಾಡಿಗಳು ಅಸ್ತವ್ಯಸ್ತವಾಗಿ ನಿಂತಿವೆ. ಎಲ್ಲಿಯೂ ಹಸುರು ಕಾಣಿಸದು. ರಂಗವಲ್ಲಿಯಿಲ್ಲ, ತೋರಣವಿಲ್ಲ. ಎಲ್ಲಕ್ಕಿಂತಲೂ ಹೆಚ್ಚಿನ ಕೊರತೆಯೆಂದರೆ ಊರಿನಲ್ಲೊಂದು ಗುಡಿಯ ಗೋಪುರ ಕಾಣಿಸದು. ಇದನ್ನು ನೋಡಿದರೆ, ಇದು ಊರಲ್ಲ, ಇಂದಿದ್ದು ನಾಳೆ ಹೊರಡುವ ಯಾವುದೋ ದಂಡಿನವರು ಅವಸರದಲ್ಲಿ ನಿರ್ಮಿಸಿಕೊಂಡ ಶಿಬಿರ, ಎನ್ನುವಂತಿದೆ.

ಊರು ಹೊಸದಾದರೂ ಜನರು ಹಿಂದಿನವರು ತಾನೆ, ಎಂದು ನನ್ನ ಅತೃಪ್ತಿಯನ್ನು ನುಂಗಿಕೊಳ್ಳೋಣವೆಂದರೆ, ಜನರೂ ಹಿಂದಿನವರಲ್ಲ. ನನಗೆ ಪರಿಚಿತರಾದ ಹಿರಿಯರಲ್ಲಿ ಬಹುಮಂದಿ ಸತ್ತುಹೋಗಿದ್ದಾರೆ. ಕಿರಿ

ಯರು—ಆಗ ಐದಾರು ವರ್ಷದ ಹುಡುಗರಾಗಿದ್ದವರು—ಈಗ ಯಜಮಾನಿಕೆಯ ಗೌರವ ಸಂಪಾದಿಸಿಕೊಂಡಿದ್ದಾರೆ. ಅವರಿಂದ ನನಗೆ ದೊರೆಯುವುದು ಮರ್ಯಾದೆಯೇ ಹೊರತು ಸ್ನೇಹವಲ್ಲ. ನನ್ನ ಒಡನಾಡಿಗಳಾಗಿದ್ದವರು, ನನ್ನೊಡನೆ ಕೊಪ್ಪರಿಗೆ ಮಡುವಿನಲ್ಲಿ ಈಜಿದವರು, ತೋಟದಲ್ಲಿ ಎಳನೀರು ಕದ್ದವರು, ನಡುರಾತ್ರಿಯಲ್ಲಿ ಕಂಡವರ ಹೊಲಕ್ಕೆ ನುಗ್ಗಿ ಸೌತೆಯಕಾಯನ್ನು ಲೂಟಿ ಮಾಡಿದವರು—ಅವರೆಲ್ಲರೂ ಈಗ ಬೆಂಗಳೂರು ಮೈಸೂರುಗಳಲ್ಲಿ ನೌಕರಿಯಲ್ಲಿದ್ದಾರೆ. ಅವರನ್ನು ವರ್ಷಕ್ಕೊಂದು ಸಾರಿ ನೋಡುವುದೂ ಕಷ್ಟ.

ನನಗೆ ಆ ದಿನ ಸತ್ಕಾರ ಮಾಡಿದವನೇನೋ ಹಳೆಯ ಸ್ನೇಹಿತನೇ. ಆದರೂ ಅವನಿಗಿದ್ದ ನೂರೆಂಟು ಕೆಲಸಗಳಲ್ಲಿ ಹರಟೆಗೆ ಕುಳಿತುಕೊಳ್ಳಲು ವ್ಯವಧಾನವಿಲ್ಲ. ಅವನ ಗದ್ದೆಯ ಪೈರು ಕೊಯ್ಲಾಗಿತ್ತು; ಅಂದೇ ಹೋಗಿ ಭತ್ತವನ್ನು ಅಳೆಸಬೇಕು. ಅವನ ತಮ್ಮ ಅಂಗಡಿಯ ವ್ಯಾಪಾರವನ್ನು ಬಿಟ್ಟುಬರುವಂತಿಲ್ಲ. ಅವರು ಯಾರೂ ಈಗ ಲಂಗುಲಗಾಮಿಲ್ಲದ ಹುಡುಗರಲ್ಲ, ಸಂಸಾರದ ಹೊರೆಯನ್ನು ಹೊತ್ತವರು. ಒಂದು ವೇಳೆ ಅವರಿಗೆ ಪುರಸೊತ್ತಿದ್ದರೂ ನಾವು ಮಾತಾಡುವುದು ಯಾವ ವಿಷಯವನ್ನು ಕುರಿತು? ತಮ್ಮ ದಿನದಿನದ ಕಷ್ಟಸುಖಗಳನ್ನು ಹೇಳಿಕೊಂಡರೆ ನನಗೆ ಬೇಸರವಾದೀತೆಂದು ಅವರ ಭಯ; ನನ್ನ ಉತ್ಸಾಹಗಳನ್ನು ಇವರೆದುರಿಗೆ ಮೆರಸಿದರೆ ಇವರಿಗೆ ಬೇಸರವಾಗಬಹುದೆಂದು ನನ್ನ ಭಯ. ಅಹಿತವಾಗುವಂತೆ ನಡೆದುಕೊಳ್ಳಬಾರದೆಂಬ ಸದ್ಭಾವನೆಯೇ ನಮ್ಮಿಬ್ಬರನ್ನೂ ದೂರವಾಗಿಟ್ಟಿತು. ಅಲ್ಲದೆ, ನಾನು ಯಾವ ಊರಿನ ನೆನಪುಗಳನ್ನು ಮೆಲಕುಹಾಕುತ್ತಾ ಬಂದೆನೋ ಆ ಊರಿನಿಂದ ಇವರೆಲ್ಲರೂ ಬೇರು ಕಿತ್ತು ಬಂದವರು. ಅವರಿಗೆ ಇಂದಿನ ಸಮಸ್ಯೆಗಳು ಮುಖ್ಯ. ವರ್ತಮಾನಕಾಲದ ಒತ್ತಡವೂ ಭವಿಷ್ಯದ ಶಂಕೆಯೂ ಭೂತಕಾಲವನ್ನು ಮರೆಸಿತ್ತು. ನನ್ನಂತೆ ಅವರೇನೂ ರೊಮ್ಯಾಂಟಿಕ್ ಮನೋವೃತ್ತಿಗೆ ಬಲಿಬಿದ್ದವರಲ್ಲವಷ್ಟೆ.

ಅಂತೂ ಆ ದಿನ ಅಕ್ಕಿಹೆಬ್ಬಾಳು ನನಗೆ ಆತ್ಮೀಯವೆನಿಸಲಿಲ್ಲ. ಯಾರೊಬ್ಬರಿಗಾಗಲಿ ವಿಶ್ವಾಸ ಕಡಿಮೆಯಾಗಿತ್ತೆಂದಲ್ಲ—ಒಬ್ಬರೊಡನೊಬ್ಬರು ಹೇಗೆ ನಡೆದುಕೊಳ್ಳಬೇಕೆಂದು ಇಬ್ಬರಿಗೂ ತಿಳಿಯದು. ಏನು ಮಾಡಿದರೂ ಮನಸ್ಸುಗಳು ಬೆರೆಯಲೊಲ್ಲವು. ಯಾವ ವಿಷಯವನ್ನು ಆರಂಭಿಸಿದರೂ ಅದಕ್ಕೆ ಸಂಚಾರವೇ ದೊರೆಯದೆ ಬಹು ಬೇಗ ನೆಲೆಗೆ ಬಂದು ನಿಲ್ಲುತ್ತಿತ್ತು. ನನ್ನ ಮಗ ಎಲ್ಲಿದ್ದಾನೆ, ಎಷ್ಟು ಸಂಬಳ ಬರುತ್ತಿದೆ, [illegible] ಈಗ ಏನು

ಓದುತ್ತಿದ್ದಾನೆ—ಇದನ್ನೆಲ್ಲಾ ಅರ್ಧಘಂಟೆಯೊಳಗೆ ಹೇಳಿ ಮುಗಿಸಿದ್ದಾಯಿತು. ಅವರ ಮಗಳಿಗೆ ಯಾರಾದರೂ ವರನನ್ನು ಹುಡುಕುತ್ತೇನೆಂದು ಭರವಸೆ ಕೊಟ್ಟದ್ದಾಯಿತು. ಅಲ್ಲಿಂದಾಚೆಗೆ ಮಾತೇ ಹೊರಡಲೊಲ್ಲದು.

ಮಾತಾಡುವಾಗಲೂ ಅವರು ಆದರದ ಜೊತೆಗೆ ಬೆರಸಿದ ಗೌರವ ಹೇಗೋ ಮನಸ್ಸಿಗೆ ಹಿತವಾಗಲಿಲ್ಲ. ಹಿಂದೆ ಅಲ್ಲಿಗೆ ಹೋದಾಗ ಯಾವ ಮನೆ ಮೊದಲು ಸಿಕ್ಕಿದರೆ ಅಲ್ಲಿ ಬಟ್ಟೆಯ ಗಂಟನ್ನಿಡುವುದು ಹೊರತು, "ನಾನು ಈ ಮನೆಯ ಅತಿಥಿ" ಎಂಬ ಭಾವನೆಯೇ ಮನಸ್ಸಿಗೆ ಬರುತ್ತಿರಲಿಲ್ಲ. "ಚಿಕ್ಕಮ್ಮ, ವಾರದ ಹುಡುಗ ಬಂದಿದ್ದಾನೆ, ಏನಡಿಗೆ?" ಎನ್ನುತ್ತಾ ನೇರವಾಗಿ ಅಡಿಗೆ ಮನೆಗೆ ನುಗ್ಗಿ ಕೈತುತ್ತು ಹಾಕಿಸಿಕೊಳ್ಳುವ ಸ್ವಾತಂತ್ರ್ಯ ಈಗ ಇಲ್ಲದಂತಾಗಿದೆ. ಈಗ ಮನೆಗೆ ಹೋದರೆ ಬಾಳೆ ಎಲೆ ತರಿಸುತ್ತಾರೆ; ಹಪ್ಪಳ ಸುಟ್ಟು ಸಂಡಿಗೆ ಕರೆಯುತ್ತಾರೆ. "ನರಸಿಂಹಮೂರ್ತಿ ಬಂದಿದ್ದಾನೆ, ಒಂದು ದಿನ ಊಟಕ್ಕೆ ಕರೆಯಬೇಡವೆ?" ಎಂದು ಮೊದಲೇ ಮಾತುಕಥೆ ನಡೆದಿರುತ್ತದೆ. ನರಸಿಂಹಮೂರ್ತಿ ಹೊರಗಿನವನಾಗಿದ್ದಾನೆ.

ಹೀಗಾಗುವುದು ಸ್ವಾಭಾವಿಕವೆಂದು ನಾನು ಮೊದಲೇ ಯೋಚಿಸಬೇಕಾಗಿತ್ತು. ನನಗೆ ಕೈತುತ್ತು ಹಾಕುತ್ತಿದ್ದವರು ಇನ್ನೂ ಬದುಕಿರುವುದು ಸಾಧ್ಯವಲ್ಲ. ಈಚಿನವರೊಡನೆ ಆ ಬಾಂಧವ್ಯವಿರುವುದೂ ಸಾಧ್ಯವಲ್ಲ. ನಾನು ನಿರೀಕ್ಷಿಸಿದ್ದಾದರೂ ಏನು? ಅಲ್ಲಿಯ ಜನರೆಲ್ಲರೂ ಮೂವತ್ತು ವರ್ಷಗಳ ಹಿಂದಿನಂತೆಯೇ ಇರಬೇಕೆಂದೆ? ಚಿಕ್ಕಂದಿನ ಹಾಸ್ಯ, ಅಬ್ಬರ, ಕುಣಿತ, ನಲಿವು—ಇವನ್ನೆಲ್ಲಾ ಮತ್ತೆ ಜೀತನಗೊಳಿಸಬೇಕೆಂದರೆ ಅದು ಬರಿಯ ಕನಸು. ಅವರೆಲ್ಲರಿಗೂ ವಯಸ್ಸಾಗಿದೆ. ಜೀವನವನ್ನು ಲಘು ದೃಷ್ಟಿಯಿಂದ ನೋಡುವ ಶಕ್ತಿ ಕುಗ್ಗಿದೆ. ಮುಖದಲ್ಲಿ ನಗೆಗಿಂತ ಭ್ರುಕುಟಿಯೇ ಸಹಜವಾಗಿ ಮೂಡುತ್ತದೆ. ಕಂಡೊಡನೆ ಮೇಲೆ ಬಿದ್ದು ಅಪ್ಪುವ ಆ ಪ್ರೇಮ, ತಡೆಯಿಲ್ಲದೆ ಮಾತಾಡುವ ಆ ಸರಳತೆ, ಈಗ ಸಾಧ್ಯವಿಲ್ಲ. ಜರೆಯಲ್ಲಿ ಯೌವನದ ಉತ್ಸಾಹವನ್ನು ನಿರೀಕ್ಷಿಸಿ ಬಂದದ್ದು ನನ್ನ ಹುಚ್ಚುತನ. ಪುಸ್ತಕವನ್ನೋದುವಾಗ ಎಲ್ಲೆಂದರೆ ಅಲ್ಲಿಗೆ ನಿಲ್ಲಿಸಿ ಮತ್ತೆ ನಿಲ್ಲಿಸಿದ ಕಡೆಯಿಂದ ಮುಂದುವರಿಸಬಹುದು. ಜೀವನವನ್ನೂ ಹಾಗೇ ನಿಲ್ಲಿಸಿದ ಕಡೆಯಿಂದ ಅದೇ ದಾರಿಯಲ್ಲಿ ಮುಂದುವರಿಸಲಾದೀತೆ—ಜೀವನ ನಾವು ನಿಲ್ಲಿಸಿದ ಕಡೆ ನಿಂತಿರುವುದಿಲ್ಲ.

ಮೂರನೆಯ ದಿನವೇ ನಾನು ಅಕ್ಕಿಹೆಬ್ಬಾಳಿನಿಂದ ಹೊರಟೆ. ರಸ್ತೆ ಕವಲೊಡೆಯುವ ಬಳಿಗೆ ಬಂದಾಗ ಕಾಡು ಹಾದಿಯೇ ಹತ್ತಿರ ಊರಿನ

ಕಡೆಗೆ ತಿರುಗಿ ಚಾಲಕನಾದ ನನ್ನ ಅರಿವಿಲ್ಲದೆಯೇ ಅಲ್ಲಿಯ ದೇವಾಲಯದ ಬಳಿ ನಿಂತಂತೆ ತೋರಿತು. ಅದು ನ್ಯಾಯವೇ. ನಾನು ಮೊದಲು ಹೊಸ ಊರಿಗೆ ಹೋದದ್ದು ತಪ್ಪಾಯಿತು.

ಹನ್ನೆರಡು ವರ್ಷಗಳಿಗಿಂತ ಹೆಚ್ಚಾಗಿ ಬಂಧುಗಳನ್ನು ಅಗಲಿದ್ದ ಅನಂತರ ಅವರನ್ನು ನೋಡಬೇಕಾದರೆ ದೇವಾಲಯದಲ್ಲಿ, ದೈವಸನ್ನಿಧಿಯಲ್ಲಿ ಅವರ ಮುಖದರ್ಶನ ಮಾಡಬೇಕೆಂದು ನಮ್ಮಲ್ಲಿ ಹಳೆಯ ನಿಯಮ ವೊಂದಿದೆ. ಅಷ್ಟು ವರ್ಷವೂ ನಾವು ಬೇರೆ ಬೇರೆ ಉದ್ಯೋಗಗಳಲ್ಲಿದ್ದು, ಮನಸ್ಸು ಬೇರೆ ಬೇರೆ ಕಾಲುವೆಗಳಲ್ಲಿ ಹರಿದು, ನಮ್ಮ ದೃಷ್ಟಿಯೂ ಜೀವ ನಾನುಭವವೂ ರೂಪಾಂತರಗೊಂಡಿರುತ್ತವೆ. ಹಿಂದೆ ನಮ್ಮನ್ನು ಒಟ್ಟಿಗೆ ಸೆಳೆದಿಟ್ಟಿದ್ದ ಅನುಭವಗಳಲ್ಲಿ ಕೆಲವು ಮಾಸಿ ಮಂಕಾಗಿರುತ್ತವೆ; ಮತ್ತೆ ಕೆಲವು ಮನಸ್ಸಿನ ಅಂತರಾಳವನ್ನು ಹೊಕ್ಕು ಅಲ್ಲಿ ಬಹುಕಾಲ ನೆನೆದು ಅಲೌಕಿಕವಾದ ಕಾಂತಿಯೊಂದನ್ನು ತಳೆದು ಮತ್ತೆ ಸ್ಮೃತಿಪಥಕ್ಕೆ ಬರು ತ್ತವೆ. ಪ್ರಿಯಜನರಿಂದ ದೂರವಾದದ್ದೇ ಕಾರಣವಾಗಿ ಅವರೊಡನೆ ವ್ಯವ ಹರಿಸಿದ ಸ್ಥಳಗಳು, ಅವರಾಡಿದ ಮಾತುಗಳು, ಅವರ ನಿಲುವು ಭಂಗಿ ಗಳು, ಒಟ್ಟಿನಲ್ಲಿ ಅವರಿದ್ದ ಆವರಣ—ಇವೆಲ್ಲಕ್ಕೂ ಇಲ್ಲದ ಮೆರುಗು ಬಂದು ಅವುಗಳಿಗೆ ಪ್ರೇಮ ಮಾತ್ರ ಕಟ್ಟಬಲ್ಲ ಬೆಲೆಯನ್ನು ಕಟ್ಟುವಂತಾ ಗುತ್ತದೆ.

ಮತ್ತೆ ಅವರನ್ನು ಸಂಧಿಸಿದಾಗ ನಮ್ಮ ಕಲ್ಪನೆಯ ಜೀವನಚಿತ್ರಗಳನ್ನೂ, ಅವುಗಳಿಗೆ ಒಂದಾನೊಂದು ಕಾಲದಲ್ಲಿ ಮೂಲವಾಗಿದ್ದ ಬಾಹ್ಯಪ್ರಪಂಚದ ಚಿತ್ರಗಳನ್ನೂ ಹೋಲಿಸುತ್ತೇವೆ. ಅವೆರಡಕ್ಕೂ ಸಾಮ್ಯವನ್ನು ಕಂಡು ಹಿಡಿಯಬೇಕೆಂದು ಎಳಸುತ್ತೇವೆ. ನಮ್ಮ ನೆನಪಿನ ಚಿತ್ರಗಳ ಸೌಂದರ್ಯ ಬಾಹ್ಯವಸ್ತುಗಳಲ್ಲಿ ಕಾಣದು. ಕಾಲದ ಮಹಿಮೆಯಿಂದ ಅವುಗಳ ಕಾಂತಿ ಮಸಕಾಗಿದೆಯೆಂದಲ್ಲ. ಆ ಕಾಂತಿ ನಮ್ಮ ಮನಸ್ಸಿನಿಂದ ಪುಟಿದದ್ದೇ ಹೊರತು ಬಾಹ್ಯ ಪ್ರಪಂಚದಲ್ಲಿ ಎಂದೂ ಇರಲೇ ಇಲ್ಲವೇನೊ. ನಮ್ಮ ಮನಸ್ಸಿನಲ್ಲಿರುವುದು ಯಾವುದೋ ಸಂಕೀರ್ಣಚಿತ್ರ—ಎಲ್ಲೆಲ್ಲಿಯೋ ನೋಡಿದ್ದ ಹಲವಾರು ದೃಶ್ಯಗಳನ್ನು ಭಾವನೆಯ ಗಾರುಡಿಯಿಂದ ಒಟ್ಟು ಗೂಡಿಸಿದ್ದು. ನಾವು ವಸ್ತುತಃ ನೋಡುವುದೊಂದು ದೃಶ್ಯ; ನೆನಪಿನಲ್ಲಿ ನಿಲ್ಲುವುದಾದರೋ, ಒಂದು ಬಗೆಯ 'ದರ್ಶನ.' ಅದಕ್ಕೂ ವಾಸ್ತವ ಪ್ರಪಂಚಕ್ಕೂ ಮೊದಲು ಸ್ವಲ್ಪ ಸಂಬಂಧವಿದ್ದಿರಬೇಕು. ಆದರೆ ಆ ಸಂಬಂಧ ಎಂದೋ ಕಡಿದುಹೋಗಿ ನೆನಪಿನ ಚಿತ್ರ ಸ್ವತಂತ್ರವಾಗಿ ಬೆಳೆದಿರುತ್ತದೆ.

ಅಕ್ಕಿಹೆಬ್ಬಾಳಿನ ಮತ್ತು ಅಲ್ಲಿನ ಜನರ ನೆನಪೂ ಹಾಗೆಯೇ. ಮೂವತ್ತು ವರ್ಷಗಳ ಕಾಲ ನಾನು ಆ ಊರು, ಅಲ್ಲಿಯ ಜನರು, ಹತ್ತಿರದಲ್ಲಿರುವ ಹೇಮಗಿರಿ, ಹೇಮಾವತಿ ನದಿ—ಎಲ್ಲವನ್ನೂ ಮನಸ್ಸಿನಲ್ಲೇ ಧ್ಯಾನಮಾಡಿ ನನಗೇ ಅರಿವಿಲ್ಲದಂತೆ ಆ ಚಿತ್ರಕ್ಕೆ ಶೃಂಗಾರ ಮಾಡುತ್ತ ಬಂದಿದ್ದೇನೆ. ಒಂದು ಕಡೆ ಆ ಪ್ರದೇಶದ ವಾಸ್ತವಚಿತ್ರ ದೂರವಿದ್ದುದರಿಂದ, ಮತ್ತೊಂದು ಕಡೆ ಅದರ ವಿಷಯದಲ್ಲಿ ಅಭಿಮಾನ ಹೆಚ್ಚಿದ್ದುದರಿಂದ, ಈ ಬಗೆಯ ಶೃಂಗಾರ ಸಾಧ್ಯವಾಯಿತು ಮಾತ್ರವಲ್ಲ, ಅನಿವಾರ್ಯವಾಯಿತು. ನಮ್ಮ ಊರು ಚಿತ್ರ ಬರೆಯುವ ಪಟವನ್ನು ಮಾತ್ರ ಒದಗಿಸಿ ಕೊಟ್ಟಿರಬೇಕು ; ರೇಖೆಗಳ ವಿನ್ಯಾಸ, ಬಣ್ಣದ ಮೇಳ, ಕುಂಚ, ಇವೆಲ್ಲವನ್ನೂ ನನ್ನ ಮನಸ್ಸೇ ಒದಗಿಸಿದೆ.

ಆ ಊರಿನವರಲ್ಲದ ಜನರಿಗೆ ನಾನು ಹಿಂದೆ ಕಂಡ ಸೌಂದರ್ಯದ ಅನುಭವವೂ ಇಲ್ಲ, ಈಗ ಆ ಸೌಂದರ್ಯದ ಅಭಾವವೂ ಗೋಚರಿಸುವುದಿಲ್ಲ. ಅವರು ಭಾವನೆಯ ಪ್ರಭಾವಕ್ಕೆ ಸಿಕ್ಕದೆ ವಾಸ್ತವಪ್ರಪಂಚಕ್ಕೆ ಕಟ್ಟುಬಿದ್ದವರು. ಅವರಿಗೂ ಅಕ್ಕಿಹೆಬ್ಬಾಳಿಗೂ ನಡುವೆ ಮಾನಸಿಕ ದೂರ (Psychic distance) ಇಲ್ಲ. ಅದಿಲ್ಲದಿದ್ದರೆ ಸೌಂದರ್ಯದರ್ಶನವಾಗುವುದು ಕಷ್ಟ. ಯಾವ ಬೆಟ್ಟವೂ ವಾಸ್ತವವಾಗಿ ನೀಲಿಯ ಬಣ್ಣವನ್ನು ಹೊಂದಿಲ್ಲ—ದೂರದಿಂದ ನೋಡಿದಾಗ ಮಾತ್ರ ಆ ಬಣ್ಣ ಬರುತ್ತದೆ. ನಮಗೆ ಪ್ರಿಯವಾದ ವಸ್ತುಗಳು ತಮ್ಮಲ್ಲಿರುವ ಅಲ್ಪತೆ ವಿಕಾರಗಳನ್ನು ಕಳೆದುಕೊಂಡು ನಮಗೆ ಸಹ್ಯವಾಗುವಂತೆ, ನಮ್ಮ ಪ್ರೇಮವನ್ನುಳಿಸಿಕೊಳ್ಳುವಂತೆ, ದೇವರು ಕಲ್ಪಿಸಿರುವ ಮಾಯೆ, ಇದು. ಅಥವಾ ನಾವು ಸಿನಿಕ್ ಜನರಾದರೆ ಅದೊಂದು ಬಗೆಯ ಆತ್ಮವಂಚನೆಯೆನ್ನಬಹುದು. ಮನಸ್ಸು ಪ್ರಫುಲ್ಲವಾಗಿದ್ದಾಗ ಒಮ್ಮೆ ಕೇಳಿದ ಗಾನವು ಮತ್ತೆ ಅದೇ ಕಂಠಸ್ವರದ ಸಂಪರ್ಕವಿಲ್ಲದೆ, ನೆನಪಿನ ಮತ್ತು ಕಲ್ಪನೆಯ ಅಮೃತದಿಂದಲೇ ಪೋಷಿತವಾದರೆ ಅದಕ್ಕೆ ಗಂಧರ್ವಗಾನದ ಇಂಪು ಬರುತ್ತದೆ. ಪುನಃ ಅದೇ ಗಾನವನ್ನು ಅದೇ ಕಂಠದಿಂದ ಕೇಳದಿದ್ದರೇ ಒಳ್ಳೆಯದೇನೊ. ಮತ್ತೆ ಹೊರಗಿನ ಪ್ರಪಂಚದಿಂದ ಬಂದ ಆ ಗಾನವು ನಮ್ಮ ಮನೋಕ್ಷೇತ್ರದಲ್ಲಿ ಗುಂಗುಟ್ಟುತ್ತಿರುವ ತನ್ನ ಅಕ್ಕನ ದಿವ್ಯ ಮೋಹಕ ಶಕ್ತಿಯನ್ನು ಎಂದಿಗೂ ಪಡೆಯಲಾರದು. ನಮ್ಮ ಮನಸ್ಸಿನಷ್ಟು ಉದಾರವಲ್ಲ, ಈ ಬಾಹ್ಯಪ್ರಪಂಚ.

ನಾನು ಮತ್ತೆ ಅಕ್ಕಿಹೆಬ್ಬಾಳಿನ ಒಡನಾಡಿಗಳನ್ನು ನೋಡಿದಾಗ ನನಗಾದ ಅತೃಪ್ತಿಗೆ ಇದೇ ಕಾರಣವಿರಬೇಕು. ನನ್ನನ್ನು ನೋಡಿದಾಗ ಅವರಿಗೂ

ಹೀಗೆಯೇ ಅನ್ನಿಸಿರಬೇಕು. ಅವರಲ್ಲಿ ಹಿಂದೆ ಗಮನಿಸದಿದ್ದ ದುಶ್ಶಕ್ತಿಗಳು ಜಾಗ್ರುತವಾಗಿ ಅವರ ಸ್ವಭಾವವನ್ನೆಷ್ಟು ವಿಕಾರ ಮಾಡಿವೆಯೋ, ಜೀವನದ ಹೋರಾಟದಲ್ಲಿ ಘಾಸಿ ಹೊಂದಿದ ಅವರ ಮುಖದ ಮೇಲೆ ಅದೆಷ್ಟು ಗಾಯಗಳು ಕಾಣುತ್ತವೆಯೋ, ಹೃದಯದ ಮಾರ್ದವ ಘನಿಸಿ ಅದೆಷ್ಟು ಕಲ್ಲಾಗಿದೆಯೋ—ಇದನ್ನೆಲ್ಲಾ ನಾನು ಮತ್ತೆ ನೋಡದೆ, ವಿಚಾರಿಸದೆ ಇದ್ದರೆ ಚೆನ್ನಾಗಿತ್ತೇನೊ. ಅಥವಾ ಇವೆಲ್ಲಾ ವಿಳಂಬವಾಗಿ ಕೊಂಚ ಕೊಂಚವಾಗಿ ನನ್ನ ತಿಳಿವಿಗೆ ಬಂದಿದ್ದರೆ ಚೆನ್ನಾಗಿತ್ತು. ಕಲ್ಪನೆಯ ಚಿತ್ರದಿಂದ ವಾಸ್ತವ ಚಿತ್ರಕ್ಕೆ ಹಠಾತ್ತಾಗಿ ನೆಗೆದರೆ ಕಷ್ಟ.

ಆದರೆ ಪುನರ್ದರ್ಶನ ದೈವಸನ್ನಿಧಿಯಲ್ಲಿ ನಡೆದರೆ ನಮ್ಮಿಬ್ಬರ ಹೃದಯವೂ ಮತ್ತೆ ಕರಗಬಹುದು. ದೋಷವನ್ನೇ ಕೆದಕುವ ಕಲ್ಮಷದ ದೃಷ್ಟಿ, ಅವಿಶ್ವಾಸ, ತೆಗಳುಗಾರನ ಮನೋವೃತ್ತಿ—ಆ ದೇವಾಲಯದ ಪವಿತ್ರ ವಾತಾವರಣಕ್ಕೆ ಇವೆಲ್ಲಾ ಸಲ್ಲವು. ಆ ಘಳಿಗೆಯಲ್ಲಿ ನಾವು ಹಳೆಯ ಬಂಧುಗಳೊಡನೆ ಪವಿತ್ರಕಾರ್ಯವೊಂದರಲ್ಲಿ ಭಾಗಿಗಳಾಗುತ್ತೇವೆ. ಕಾಲದ ಒತ್ತಡಕ್ಕೆ ಸಿಕ್ಕಿದ ನಾವು ಕಾಲಾತೀತವಾದ ವಸ್ತುವಿನೆದುರಿನಲ್ಲಿ ನಿಂತು ಅದನ್ನು ಅರ್ಚಿಸುತ್ತಿರುವಾಗ ಮನಸ್ಸಿನ ಕೀಳುಭಾವನೆಗಳು ತಾತ್ಕಾಲಿಕವಾಗಿಯಾದರೂ ಅಳಿಸಿಹೋಗಬಹುದು. ನೆನಪಿನಲ್ಲಿರುವ ಸೌಂದರ್ಯ ಬಾಹ್ಯ ಪ್ರಪಂಚಕ್ಕೂ ತನ್ನ ಪ್ರಭೆಯನ್ನು ಬೀರಬಹುದು.

(ಈ ಬಗೆಯ ವಿಚಾರ ನನ್ನ ಮನಸ್ಸಿನಲ್ಲಿ ಹೊಳೆದು ನನ್ನನ್ನು ದೇವಾಲಯದ ಬಳಿಗೆ ಎಳೆತಂದಿರಬೇಕು. ನಾನು ಗುಡಿಯ ಮುಂದೆ ನಿಂತೆನೇ ಹೊರತು ಒಳಗೆ ಹೋಗಲಿಲ್ಲ—ಹೋಗಬೇಕೆಂದೆನ್ನಿಸಲೂ ಇಲ್ಲ.) ಅಲ್ಲಿದ್ದ ಕೆಲವರು ನನಗೆ ಅಪರಿಚಿತರು. ಅವರೆದುರಿಗೆ ನನ್ನ ಮನಸ್ಸಿನ ಉದ್ವೇಗವನ್ನು ಹೊರಗೆಡಹುವುದು ತರವಲ್ಲ. ಶುದ್ಧ ಉನ್ಮಾದದ ಪ್ರಾಣಿ ಎಂದುಕೊಳ್ಳುತ್ತಾರೆ. ಆ ಗುಡಿಯಲ್ಲಿ ನೆಲಸಿರುವ ದೈವ ನಿರೀಶ್ವರವಾದಿಯೆನ್ನಬಹುದಾದ ನನಗೂ ಅದೆಷ್ಟು ಪ್ರಿಯವೆಂಬುದನ್ನು ಅವರು ಹೇಗೆ ತಿಳಿದಾರು! ನನಗೆ ಗುಡಿಯಲ್ಲಿರುವ ವಿಗ್ರಹ ದೇವರಲ್ಲ—ಅಥವಾ ದೇವರೆಂದರೆ ಅದೊಂದು ಮಾತ್ರವೇ ಅಲ್ಲ. ಅಲ್ಲಿಯ ಅರೆಗತ್ತಲಿನ ವಾತಾವರಣ, ಸೊಡರುಗಳಿಂದ ಎಣ್ಣೆ ಹರಿದು ಅಲ್ಲಲ್ಲಿ ಕಪ್ಪಾಗಿರುವ ಕಂಬಗಳು, ಮೂಲೆಯಲ್ಲಿಟ್ಟಿರುವ ಪ್ರಭಾವಳಿ, ಮೊಣಕಾಲೂರಿ ಗರಿಗೆದರಿ ದೇಹದೊಡನೆ ಗಗನಕ್ಕೆ ಹಾರಲು ಸಿದ್ಧವಾಗಿರುವ ಗರುಡ, ಮತ್ತೊಂದು ಮೂಲೆಗೆ ಒರಗಿಸಿರುವ ಮುತ್ತಿನ ಬಣ್ಣದ ಛತ್ರಿ, [illegible] [illegible]ಯಲ್ಲಿ ಬಲೆಹಾಡುವ

ಕುಂಕುಮವರ್ಣದ ಗೊಂಡೆಗಳು—ಕಣ್ಣಿಗೆ ಕಟ್ಟಿದಂತಿರುವ ಇವೆಲ್ಲಕ್ಕೂ ನನ್ನ ಪ್ರೇಮ ಮತ್ತು ಒಂದು ಬಗೆಯ ಭಕ್ತಿ ಹರಡಿದೆ. ಆ ಗರ್ಭಗುಡಿಯ ಕತ್ತಲೂ ಸಹ ನನಗೆ ಪ್ರಿಯವಾದದ್ದು. ಅದು ನಮ್ಮ ಮತ್ತು ಪರಮಾತ್ಮನ ಸಂಬಂಧದ ಸಂಕೇತ. ನಾವು ಅಜ್ಞಾನದಲ್ಲಿ ಯಾವುದನ್ನು ಬೆಳಕೆಂದು ಭಾವಿಸುತ್ತೇವೆಯೋ ಅದರಿಂದ ವಿಮುಖರಾಗಿ ಕೆಲಕಾಲ ಮಸಕುಮಸ ಕಾದ ಅಸ್ಪಷ್ಟ ಪ್ರಪಂಚದಲ್ಲಿ ತೊಳಲಿದ ಮೇಲೆ ತಾನೆ ದೈವಸನ್ನಿಧಿಯ ಅರಿವಾಗಬೇಕಾದರೆ.

ನಮ್ಮೂರಿನ ದೇವರು ನರಸಿಂಹ. ಉಗ್ರನರಸಿಂಹನಲ್ಲ; ರಾಕ್ಷಸ ಸಂಹಾರದ ರೋಷವೆಲ್ಲಾ ಕಳೆದು ಲಕ್ಷ್ಮಿಯ ಸಾಮೀಪ್ಯದಿಂದ ಶಾಂತನಾಗಿ ಪ್ರಹ್ಲಾದ ನನ್ನು ಅನುಗ್ರಹಿಸಿ ಅಭಯಹಸ್ತವನ್ನು ತೋರುತ್ತಿರುವ ಪ್ರಸನ್ನಮೂರ್ತಿ—ಲಕ್ಷ್ಮೀನೃಸಿಂಹ. ಭಕ್ತರು ದೇವರಿಗೆ ಬೆಳ್ಳಿಯ ಕೋರೆ ಹಲ್ಲುಗಳನ್ನೂ ಹೊರಬಿದ್ದಿರುವ ನಾಲಗೆಯನ್ನೂ ಮಾಡಿಸಿದ್ದಾರೆ. ಬೆಳ್ಳಿಯ ಹುಬ್ಬುಗಳ ಕೆಳಗೆ ವಿಚಿತ್ರ ಬೆಳಕಿನಿಂದ ಕಣ್ಣುಗಳು ಹೊಳೆಯುತ್ತವೆ. ಆರಂಗುಲದ ಕೆಂಪು ಅಂಚಿನ ಪಂಚೆಯನ್ನುಡಿಸಿದ್ದಾರೆ. ಅಲಂಕಾರದಲ್ಲಿ ವಿತರಣೆಯಿಲ್ಲವೆನ್ನ ಬಹುದು. ಆದರೆ ಇವೊಂದೂ ವಿಗ್ರಹದ ಸೌಮ್ಯತೆಗೆ ಕುಂದು ತಂದಿಲ್ಲ. ಅಲ್ಲಿ ಸರ್ವದಾ ಕಾವಲಿರುವ ಸರ್ಪವೂ ಸಹ ಆಗಾಗ ಕಣ್ಣಿಗೆ ಬೀಳುತ್ತ ದೆಯೇ ಹೊರತು ಯಾರ ಗೊಡವೆಗೂ ಹೋಗುವುದಿಲ್ಲ. ದೇವರು ನಿಜ ವಾಗಿಯೂ ಪ್ರಸನ್ನಮೂರ್ತಿ. ಆದರೂ ಆತನಲ್ಲಿ ನಂಬಿಕೆ ತಪ್ಪಿದರೆ ಮಾತ್ರ ಒಂದೊಂದು ವೇಳೆ ಕೆರಳುತ್ತಾನೆ. ಹಿರಣ್ಯಕಶಿಪುವನ್ನು ಕೊಂದಾಗಲೇ ನಾಶವಾಗಬೇಕಾಗಿದ್ದ ಅಂಧಕಾರವು ಮರುಕಳಿಸಿ, ತನ್ನ ಬಳಗದವರಲ್ಲಿಯೇ —ತನ್ನನ್ನು ಮನೆದೇವರೆನ್ನುವವರಲ್ಲಿಯೇ—ಕಾಣಿಸಿಕೊಂಡರೆ ಮತ್ತೆ ಉಗ್ರ ನರಸಿಂಹನ ಅವತಾರವಾಗಬೇಡವೆ!

ನಮ್ಮ ತಾತಂದಿರಿಗೆ ಆ ಕೋಪದ ಅನುಭವ ಒಂದು ಬಾರಿ ಆಯಿ ತಂತೆ. ನಮ್ಮ ತಂದೆ ಆಗ ಚಿಕ್ಕ ಮಗು. ಒಬ್ಬನೇ ಮಗ; ಸಿಡುಬು ಮಾರಿಯ ಕೈಗೆ ಸಿಕ್ಕಿ ನರಳುತ್ತಿದ್ದರಂತೆ. ತಿಂಗಳ ಮೇಲಾದರೂ ರೋಗ ವಾಸಿಯಾಗಲಿಲ್ಲ. ಮಗುವಿನ ತಂದೆತಾಯಿಯರು ದೇವರಿಗೆ ಹರಕೆ ಹೊತ್ತು ತೀರಿಸಿದ್ದರು. ಆದರೂ ಅವನು ಕೃಪೆತೋರಿದಂತೆ ಕಾಣಲಿಲ್ಲ. ಪ್ರತಿ ದಿನವೂ ನಮ್ಮ ತಾತಂದಿರು ದೇವರ ಬಾಗಿಲನ್ನು ಕಾದು ತಮ್ಮ ಸಂಕಟ ವನ್ನು ತೋಡಿಕೊಳ್ಳುತ್ತಿದ್ದರು. ಮಗುವಿನ ಸ್ಥಿತಿ ಮಾತ್ರ ದಿನದಿನಕ್ಕೂ ಕೆಡುತ್ತ ಬಂದು ಉಳಿಯುವ ಚಿಹ್ನೆಯೇ ಕಾಣಲಿಲ್ಲ.

ಕೊನೆಗೆ ಒಂದು ದಿನ ರಾತ್ರಿ ಮನೆಯವರೆಲ್ಲರೂ ಮಗುವಿನ ಬಳಿ ಕುಳಿತು ಅಳುತ್ತಿದ್ದಾಗ ಅವರು ಒಂದು ಬಗೆಯ ಹುಚ್ಚಿನಲ್ಲಿ ಎದ್ದು ಗುಡಿಗೆ ಓಡಿಹೋಗಿ ಒಳ ಅಂಗಳದಲ್ಲಿ ನೆಟ್ಟಿದ್ದ ಬಲಿಕಲ್ಲಿನ ಮೇಲೆ ಉದ್ವೇಗದಿಂದ ಹಣೆ ಚಚ್ಚಿಕೊಂಡು, "ಇನ್ನೂ ನಿನಗೆ ದಯೆ ಬರಲಿಲ್ಲವೆ ? ಮತ್ತೆಷ್ಟು ಕಾಡ ಬೇಕೆಂದಿದ್ದೀಯೆ ? ಆಗಲಿ, ನೀನಲ್ಲದೆ ಇನ್ನು ಯಾರು ಕಾಡಬೇಕು ! ನನಗೆ ಬೇರೆ ಶರಣಿಲ್ಲವೆಂದು ಬಲ್ಲೆ, ಆ ಹೆಮ್ಮೆಯಿಂದ ಕಾಡುತ್ತೀಯೆ. ನನ್ನ ಸೇವೆ ಬೇಡವಾಯಿತಷ್ಟೆ. ಮಗುವನ್ನು ಬಲಿ ತೆಗೆದುಕೊ !" ಎಂದು ದೇವರನ್ನು ನಿಂದಿಸಿ ಬಿಕ್ಕಿ ಬಿಕ್ಕಿ ಅಳುತ್ತಾ ಮನೆಗೆ ಬಂದು ಮಲಗಿ ದರಂತೆ. ಮಲಗಿದೊಡನೆ ನಿದ್ದೆ ಬಂತು. ಕನಸಿನಲ್ಲಿ ನರಸಿಂಹನ ಮೂರ್ತಿ ಎದುರು ನಿಂತು ಕಣ್ಣಿನಲ್ಲಿ ಕೆಂಡವನ್ನು ಕಾರುತ್ತಿತ್ತು. ಒಂದೊಂದು ಕಿಡಿ ಹೊರಟಾಗಲೂ ಚಾವಟಿಯಿಂದ ಹೊಡೆದಂತಾಗುತ್ತಿತ್ತು. "ನನ್ನನ್ನು ಆತುರ ಪಡಿಸುವ ಧೈರ್ಯ ಬಂತೆ, ನಿನಗೆ ? ನಿನ್ನ ಮಗು ಬದುಕುತ್ತೆ. ತಲೆ ಚಚ್ಚಿ ಕೊಳ್ಳಬೇಡ," ಎಂದು ರೋಷದಲ್ಲೇ ಆಶ್ವಾಸನ ಕೊಟ್ಟು ಆ ಮೂರ್ತಿ ಅದೃಶ್ಯ ವಾಯಿತಂತೆ.

ನಮ್ಮ ಅಜ್ಜ ಕೂಡಲೆ ಎಚ್ಚತ್ತು ಮಗುವಿನ ಬಳಿಗೆ ಹೋಗಿ ಕುಳಿತರು. ಮಗುವಿನ ಕೈಕಾಲುಗಳ ಸಂದುಸಂದಿನಲ್ಲೂ ಸಿಡುಬಿನ ಹುಣ್ಣುಗಳೆದ್ದು ಎಲ್ಲಾ ಒಂದು ಮುದ್ದೆಯಾದಂತಿದ್ದುವು. ಎಣ್ಣೆ ಸವರಿ ಕಾಲುಗಳನ್ನು ಬಿಡಿಸಬೇಕೆಂದು ಅದುವರೆಗೆ ಮಾಡಿದ್ದ ಪ್ರಯತ್ನಗಳೆಲ್ಲಾ ವಿಫಲವಾಗಿ ದ್ದವು. ಆ ದಿನ ಮಾತ್ರ ಮೃದುವಾಗಿ ಕಾಲುಗಳನ್ನು ಸಡಿಲಿಸಹೋದಾಗ ತೊಡೆಗೆ ಅಂಟಿಕೊಂಡಿದ್ದ ಮುಂಗಾಲು ಸ್ವಲ್ಪ ಬೇರೆಯಾಯಿತು. ಇದನ್ನು ನೋಡಿದ ತಂದೆಗೆ ಒಂದು ಕಡೆ ಆನಂದವಾದರೆ ಮತ್ತೊಂದು ಕಡೆ ಪಶ್ಚಾ ತ್ತಾಪ. ಕೂಡಲೆ ಎದ್ದು ಉರಿಯುತ್ತಿದ್ದ ನಂದಾದೀಪಕ್ಕೆ ತುಪ್ಪವನ್ನು ಹಾಕಿ, ಮತ್ತೆರಡು ತುಪ್ಪದ ದೀಪಗಳನ್ನು ದೇವರ ಮುಂದೆ ಹೊತ್ತಿಸಿಟ್ಟರು. ಅನಂತರ ಹೆಂಡತಿಗೆ "ಮಗು ಬದುಕುತ್ತೆ, ಅಳಬೇಡ" ಎಂದು ನಂಬಿಕೆ ಕೊಟ್ಟು ಆ ನಡುರಾತ್ರಿಯಲ್ಲೇ ಹೊಳೆಗೆ ಹೋಗಿ ಸ್ನಾನಮಾಡಿ ದೇವಾ ಲಯದ ಮುಂದೆ ಬೆಳಗಿನವರೆಗೂ ಅಪರಾಧಸ್ತೋತ್ರಗಳನ್ನು ಹೇಳುತ್ತಾ ನಿಂತಿದ್ದರು. ದಿನ ಕಳೆದಂತೆಲ್ಲಾ ಮಗು ಗುಣಮುಖವಾಗುತ್ತಾ ಬಂತು. ಅಂದಿನಿಂದಾಚೆಗೆ ನಮ್ಮ ಅಜ್ಜನಿಗೆ ಜೀವನದ ಕಷ್ಟನಿಷ್ಠುರಗಳೆಲ್ಲಾ ಅರಳೆಯಂತೆ ಲಘುವಾಗಿ ಕಂಡವು. ಮಗ ಬೆಳೆದು ದೊಡ್ಡವನಾಗುವವರೆಗೂ ಅವರು ಬದುಕಿರಲಿಲ್ಲ. ಆದರೆ ಯಾವ ಚಿಂತೆಯೂ ಇಲ್ಲದೆ ಪ್ರಸನ್ನಚಿತ್ತರಾಗಿ

ತಮ್ಮ ಕೊನೆಯ ಉಸಿರನ್ನು ಒಪ್ಪಿಸಿದರಂತೆ.

ಚಿರಕಾಲ ವೈಧವ್ಯವನ್ನು ಅನುಭವಿಸಿದ ನಮ್ಮ ಅಜ್ಜಿಗೂ ಅಂದು ದೇವರು ಕಲಿಸಿದ ಪಾಠ ಚೆನ್ನಾಗಿ ಮನವರಿಕೆಯಾಗಿದ್ದಿರಬೇಕು. ಆಗ ಉಳಿದುಕೊಂಡ ಮಗ ನಡುವಯಸ್ಸಿನಲ್ಲಿ ಭಯಂಕರವಾದ ವಾತರೋಗಕ್ಕೆ ಸಿಕ್ಕಿ ಹನ್ನೆರಡು ವರ್ಷ ನರಳಿ ಪ್ರಾಣ ಬಿಟ್ಟದ್ದನ್ನು ಆಕೆ ತನ್ನ ವೃದ್ಧಾಪ್ಯದಲ್ಲಿ ನೋಡಬೇಕಾಯಿತು. ಆದರೂ ಅವರ ದೈವಭಕ್ತಿ ಸಡಿಲವಾದದ್ದನ್ನು ಯಾರೂ ಕಾಣರು. ಮಾನವತೆಗೆ ಸಲ್ಲಿಸಬೇಕಾದ ಕಾಣಿಕೆಯನ್ನು ಸಲ್ಲಿಸಿ ಒಂದೊಂದು ವೇಳೆ ಕಣ್ಣೀರು ಕರೆಯುವರು. ಆದರೂ ಅವರ ಮನಸ್ಸಿನ ನಂಬಿಕೆ ಅಚಲವಾದದ್ದು. "ಯಾವ ದಿನ ಅವನ ಕರುಣೆ ಬರುತ್ತದೆಯೋ ನಮಗೇನು ಗೊತ್ತು ? ಹಿಂದೆ ಕೃಪೆ ಮಾಡಿ ಬದುಕಿಸಿದ ಮಗುವನ್ನು ನರಳಿಸುವುದಕ್ಕೆ ಅವನಿಗಲ್ಲದೆ ಮತ್ತಾರಿಗೆ ಹಕ್ಕುಂಟು ? ಅವನ ಸಂಕಲ್ಪವೇನೋ ಇದೆ—ನಾವು ತಿಳಿಯಲಾರೆವು," ಎಂದು ಹಿಂದಿನ ಕಥೆಯನ್ನು ನಮಗೆಲ್ಲಾ ಹೇಳುವರು. ಈಗ ನಾನು ದೇವಾಲಯದ ಬಳಿಗೆ ಹೋದರೆ ಆ ಬಲಿಕಲ್ಲಿನ ಮೇಲೆ ಇನ್ನೂ ಅಜ್ಜನ ಹಣೆಯ ರಕ್ತದ ಗುರುತಿದೆಯೆ ಎಂದು ನೋಡುವಂತಾಗುತ್ತದೆ. ಅಲ್ಲಿ ಕುಳಿತರೆ ನಾಲಗೆ ತಾನಾಗಿಯೇ ಅಜ್ಜಿ ಹೇಳಿಕೊಟ್ಟಿದ್ದ "ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ" ಸ್ತೋತ್ರವನ್ನು ಉಚ್ಚರಿಸುತ್ತದೆ.

ದೈವಶ್ರದ್ಧೆ ನನ್ನ ಪಾಲಿಗೆ ಬರಲಿಲ್ಲ. ಆದರೂ ನಮ್ಮ ಮನೆತನದ ಸದ್ಗುಣಗಳೇನಿದ್ದರೂ ಅದರಿಂದ ಹುಟ್ಟಿದವೆಂದು ಬಲ್ಲೆ. ಅವರ ಸತ್ಕಾರ್ಯಗಳೆಲ್ಲಾ ಆ ದೇವರ ಹೆಸರಿನಲ್ಲಿ ನಡೆದುವು. ಈಗಲೂ ನಮ್ಮ ಮನೆತನದ ಉತ್ಸವ ಸಂತರ್ಪಣೆಗಳು ಅಲ್ಲಿಯ ರಥೋತ್ಸವದ ಸಮಯದಲ್ಲಿ ನಡೆಯುತ್ತವೆ. ಸೇವೆಯ ಕಾಲದಲ್ಲಿ ಭಕ್ತಿಬಾಹಿರನಾದ ನನ್ನ ಹೆಸರನ್ನೂ ಅಲ್ಲಿ ಭಟ್ಟರು ಉಚ್ಚರಿಸುತ್ತಾರೆ. ನಮ್ಮ ತಾತ ರೂಢಿಮೂಢರೆನ್ನಬಹುದು. ಅವರ ನಂಬಿಕೆ ಹುಚ್ಚುನಂಬಿಕೆಯೆನ್ನಬಹುದು—ಆ ನಂಬಿಕೆ ನನಗೆ ಸಾಧ್ಯವಿಲ್ಲ. ಆದರೂ ಆದರಲ್ಲಿ ಅಮೋಘವಾದ ಶಕ್ತಿಯೊಂದಿತ್ತು. ಹಳ್ಳಿಯ ಜೀವನವೆಲ್ಲಾ ಆ ಭಕ್ತಿಯ ಆಧಾರದ ಮೇಲೆ ನಿಂತಿತ್ತು. ಸಾಲ ಕೊಡುವವರು ಪತ್ರ ಬರೆಸಿಕೊಳ್ಳುವ ಬದಲು ದೇವರ ಸಾಕ್ಷಿಯಾಗಿ ಹಣಕೊಡುವುದು ಸಹ ರೂಢಿಯಲ್ಲಿತ್ತು.

ರಥೋತ್ಸವದ ಸಮಯದಲ್ಲಿ ಊರ ಜನರೆಲ್ಲರಿಗೂ—ಬ್ರಾಹ್ಮಣರು, ಅಬ್ರಾಹ್ಮಣರು, ಹಿಂದುಗಳು ಮುಸಲ್ಮಾನರು—ಎಲ್ಲರಿಗೂ ಹಬ್ಬ. ತೇರನ್ನು

ಎಳೆಯುವುದಕ್ಕೆ ಜಾತಿಮತಗಳೆನ್ನದೆ ಎಲ್ಲರೂ ಸೇರುತ್ತಾರೆ. ಸುತ್ತಮುತ್ತಿನ ಹಳ್ಳಿಗಳಿಂದ ಅಂಗಡಿ ಮುಂಗಟ್ಟುಗಳವರು ಬಂದು ಡೇರೆಗಳನ್ನು ಹಾಕಿ ತಮ್ಮ ಸರಕನ್ನು ಪ್ರದರ್ಶಿಸುತ್ತಾರೆ. ಹುಡುಗರಾಗಿದ್ದಾಗ ನಮಗೆ ಯಾವ ಎಗ್ಸಿಬಿಷನ್ನಿಗಿಂತಲೂ ಅಂದು ಸೃಷ್ಟಿಯಾಗಿ ನಾಳೆ ಮಾಯವಾಗುವ ಆ ಪೇಟೆ ಹೆಚ್ಚು ಆಕರ್ಷಕವಾಗಿತ್ತು. ಅಲ್ಲಿ ಮಾರುತ್ತಿದ್ದ ಸಾಮಾನುಗಳಲ್ಲಿ ವಿಶೇಷವೇನೂ ಇಲ್ಲ. ರೈತರ ಚಡ್ಡಿ, ತಾಯಿತಿ ಕಟ್ಟಲು ಬೇಕಾದ ಅನಂತನ ದಾರ, ಕಡಲೆಪುರಿ, ಬಳೆ, ಕಲ್ಯಾಣಸೇವೆ ಬತ್ತಾಸುಗಳ ರಾಶಿ—ಇಷ್ಟೇ ಅಲ್ಲಿನ ವೈಭವ. ಸಂತೆಗೆ ಬಾರದ್ದೇನೂ ಅಲ್ಲಿಗೆ ಬರುವುದಿಲ್ಲ. ನರಸಿಂಹ ಸ್ವಾಮಿಯ ರಥೋತ್ಸವವಾದ್ದರಿಂದ ಅದಕ್ಕೆ ಪ್ರಾಶಸ್ತ್ಯ ಹೆಚ್ಚು.

ರಥೋತ್ಸವದ ದಿನ ಬೆಳಿಗ್ಗೆ ಎದ್ದೊಡನೆ ಹಿಂದಿನ ರಾತ್ರಿ ಕಟ್ಟಿ ಸಿದ್ಧ ವಾಗಿರುವ ತೇರಿನ ಮೇಲ್ಭಾಗಕ್ಕೆ ಬಟ್ಟೆಯ ಪರದೆಗಳನ್ನು ಹೊದಿಸಿ ಸಜ್ಜು ಮಾಡುತ್ತಾರೆ. ಪರದೆಗಳ ಸೊಬಗು ಅಷ್ಟರಲ್ಲೇ ಇದೆ. ಕೆಂಪು, ಬಿಳುಪು, ಹಳದಿ—ವರ್ಣವೈವಿಧ್ಯವಿದ್ದರೂ ಆ ಬಣ್ಣಗಳ ಮಿಶ್ರಣದಲ್ಲಿ ಅಂಥ ಕಲಾ ವಂತಿಕೆಯೇನೂ ಇರುವುದಿಲ್ಲ. ಅದನ್ನು ನಾವು ನೋಡಹೋಗುವುದು ಅದು ನರಸಿಂಹನ ರಥವಾದ್ದರಿಂದ—ನಮ್ಮ ತೇರು ಸುಮಾರು ೨೫-೩೦ ಅಡಿಗಳ ಎತ್ತರಕ್ಕೆ ಏರುತ್ತದೆ. ತುದಿಯಲ್ಲಿ ಎರಡು ಕಡೆಯಲ್ಲೂ ಗೋಪುರದ ಮೇಲಿರುವಂತೆ ಹಿತ್ತಾಳೆಯ ಅರ್ಧ ಚಂದ್ರ, ನಡುವೆ ಹಿತ್ತಾಳೆಯ ಧ್ವಜ. ತೇರಿನ ಕೆಳಭಾಗವೆಲ್ಲಾ ಕಾಡು ಮರದಿಂದ ಮಾಡಿದ್ದು ; ಗಾಲಿಗಳು ಒಂದೊಂದು ಹತ್ತು ಜನರು ಎತ್ತುವಷ್ಟು ಭಾರ. ಈ ಒರಟು ರಥವೂ ನರಸಿಂಹನ ದೆಸೆಯಿಂದ ನಮಗೆ ಪ್ರಿಯವಾಗುತ್ತದೆ.

ಆದರೆ ರಥೋತ್ಸವದ ಸೊಬಗಿರುವುದು ರಥದಲ್ಲಲ್ಲ—ಅಲ್ಲಿಯ ಆವರಣ ದಲ್ಲಿ. ಆ ದಿನ ಊರಿನ ಸಡಗರ ಹೇಳತೀರದು. ಅಂದು ಊರಿನವರೆಲ್ಲರಿಗೂ ನದಿಯಲ್ಲೇ ಸ್ನಾನ. ಸುಮಾರು ೯ ಘಂಟೆಯವರೆಗೂ ಗುಡಿಯಲ್ಲಿ ಭಟ್ಟರು ಅಭಿಷೇಕ, ಅರ್ಚನೆಗಳಲ್ಲಿ ತೊಡಗಿರುತ್ತಾರೆ. ಆಗ ಯಾರಿಗೂ ದೇವರ ದರ್ಶನವಿಲ್ಲ. ಆಮೇಲೆ ತಂಡತಂಡವಾಗಿ ಜನರು ದರ್ಶನ ಮಾಡಿಕೊಂಡು ಬರುತ್ತಾರೆ—ಅದು ಮುಗಿಯುವ ವೇಳೆಗೆ ಸುಮಾರು ಹನ್ನೆರಡು ಘಂಟೆ ಯಾಗುತ್ತದೆ. ಆಗ ಅಭಿಜಿನ್ಮುಹೂರ್ತದಲ್ಲಿ ರಥಾರೋಹಣವಾಗಬೇಕು. ಮಾರ್ಚಿ ತಿಂಗಳಾದ್ದರಿಂದ ಬೇಸಗೆಯ ಉಬ್ಬರವಿಲ್ಲದಿದ್ದರೂ ತಕ್ಕಮಟ್ಟಿಗೆ ಬಿಸಿಲಿನ ತಾಪವಿರುತ್ತದೆ. ಆ ಸಮಯದಲ್ಲಿ ಗುಡಿಯ ಹತ್ತಿರದ ಮನೆಗಳ ವರು ಅರಳುಮೊಸರು ಕಲಸಿಕೊಂಡು ಬಂದು ಹುಡುಗರು ಮಕ್ಕಳಿಗೆಲ್ಲಾ

ಕೊಡುವ ಪದ್ಧತಿ. ಎಲ್ಲರ ಕೈಯಲ್ಲೂ ದವನ ಸಿಕ್ಕಿಸಿದ ಬಾಳೆಯ ಹಣ್ಣು—ಹುಡುಗರಂತೂ ಭಟ್ಟರಿಗೆ ಗುರಿಯಿಟ್ಟು ಹೊಡೆಯಬೇಕೆಂದು ಒಬ್ಬರೊಡನೊಬ್ಬರು ಪೈಪೋಟಿ ಹೂಡಿರುತ್ತಾರೆ.

ಮೂಲವಿಗ್ರಹಕ್ಕೆ ನಡೆಯಬೇಕಾದ ಸೇವೆಯೆಲ್ಲಾ ನಡೆದ ಮೇಲೆ ಉತ್ಸವಮೂರ್ತಿಯನ್ನು ಬಿಜಯ ಮಾಡಿಸಿಕೊಂಡು ಬರುತ್ತಾರೆ. ನಮ್ಮೂರಿನ ಓಲಗದವರಿಗೆ ಆಗ ಎರಡೇ ಎರಡು ಹಾಡು ಬಾರಿಸಲು ಬರುತ್ತಿತ್ತು—ಜ್ಯೋತಿಪಸಮಯ, ಶ್ರೀರಾಮಚಂದಿರನೆ. ರಥೋತ್ಸವ ಸಮಯದಲ್ಲಿ ಮಾತ್ರ ಪ್ರತಿವರ್ಷವೂ ಶ್ರೀರಂಗಪಟ್ಟಣದಿಂದ ಓಲಗದವರು ಬಂದು ತಮ್ಮ ಸೇವೆ ಸಲ್ಲಿಸುತ್ತಿದ್ದರು. ಆದರೆ ಓಲಗ ಎಷ್ಟೇ ಚೆನ್ನಾಗಿರಲಿ, ಆ ದಿನ ಆವರಣಕ್ಕೆ ಕಳೆ ಬರುವುದು ಈ ಸಂಗೀತದಿಂದಲ್ಲ; ವೇದಘೋಷದಿಂದ. ಬ್ರಾಹ್ಮಣರು ಎರಡು ತಂಡ ಮಾಡಿಕೊಂಡು ಮಂತ್ರದ ಒಂದೊಂದು ಭಾಗವನ್ನು ಒಂದೊಂದು ತಂಡದವರು ಉಚ್ಚಕಂಠದಿಂದ ಹಾಡುತ್ತಾರೆ. ಒಂದು ತಂಡದವರು 'ಯೋಽಪಾಮಾಯತನಂ ವೇದ' ಎಂದರೆ ಮತ್ತೊಂದು ತಂಡದವರು 'ಆಯತ ನವಾನ್ ಭವತಿ' ಎಂದು ಅದನ್ನು ಪೂರ್ಣಮಾಡುತ್ತಾರೆ. ಮಧ್ಯಾಹ್ನದ ಸ್ತಿಮಿತ ವಾತಾವರಣದಲ್ಲಿ ಹತ್ತಾರು ಜನರ ತುಂಬುಗೊರಳಿನಿಂದ ಹೊರಟು, ಒಬ್ಬರ ದನಿ ಮತ್ತೊಬ್ಬರ ದನಿಗೆ ಶ್ರುತಿಕೊಟ್ಟು, ಜನರ ಗುಜು ಗುಜು ಶಬ್ದವನ್ನು ಮೆಟ್ಟಿ ಅಂತರಿಕ್ಷವನ್ನು ತುಂಬುವ ಆ ಘೋಷದ ಆನಂದ ಅವರ್ಣನೀಯವಾದದ್ದು. ದೀಕ್ಷಿತರ ಕೃತಿಗಳನ್ನು ವಿಳಂಬವಾಗಿ ಹಾಡಿದ್ದನ್ನು ಕೇಳಿದರೂ ಆ ಶಾಂತೋದ್ವೇಗದ ಅನುಭವವಾಗದು.

ಗುಡಿಯ ಮುಂದೆ ನಿಂತಾಗ ಈ ನೆನಪುಗಳೆಲ್ಲಾ ಮನಸ್ಸಿನಲ್ಲಿ ಹಾದು ಹೋದವು. ಅಲ್ಲಿಂದ ಮುಂದೆ ಹೊರಟು ಊರಿನ ನಾಲ್ಕು ಬೀದಿಗಳನ್ನೂ ಸುತ್ತಿದೆ. ಅಲ್ಲೊಂದು ಇಲ್ಲೊಂದು ಮನೆ ಹರಕುಮುರುಕಾಗಿ ನಿಂತಿದ್ದವು. ಮನೆಗಳ ಬಾಗಿಲುಗಳು ತೆರೆದಿದ್ದವು. ಯಾವುದೊಂದು ಮನೆಯಲ್ಲೂ ಜನರ ವಾಸವಿಲ್ಲ. ಅದು ಈಗ ದೆವ್ವಗಳ ಊರು. ಯಾವುದಾದರೊಂದು ಮನೆಗೆ ಪ್ರವೇಶಿಸಿದ್ದರೆ ಅಡಿಗೆಯ ಮನೆಯಲ್ಲಿ ದೆವ್ವ ಒಲೆಗೆ ತನ್ನ ಕಾಲನ್ನೇ ಚಾಚಿ ಉರಿಸುವುದನ್ನೂ ತನ್ನ ನಾಲಿಗೆಯಿಂದ ದೀಪಿಗೆಯನ್ನು ಮೀಟುವುದನ್ನೂ ನೋಡಬಹುದಾಗಿತ್ತೇನೊ! ನಮ್ಮ ಸ್ವಂತ ಮನೆಯನ್ನು ನೋಡೋಣವೆಂದು ಹೋದರೆ ಅಲ್ಲಿ ಮನೆಯಿದ್ದಿತೆನ್ನುವುದಕ್ಕೆ ಗುರುತಾಗಿ ಒಂದು ಮಣ್ಣು ಹೆಂಟೆ ಸಹ ಕಾಣಲಿಲ್ಲ. ನಮ್ಮಿಂದ ಅದನ್ನು ಕೊಂಡವರು

ಮನೆಯನ್ನು ಕೆಡವಿ ಮರಮುಟ್ಟುಗಳನ್ನೆಲ್ಲಾ ಮಾರಿಕೊಂಡಿದ್ದರು. ನಾನು ಅಲ್ಲಿ ಕಂಡದ್ದು ಉಪ್ಪಿಗಚಿಯ ಮೆಳೆ, ದತ್ತೂರಿಯ ವನ.

ಉತ್ತರ ದಿಕ್ಕಿನ ಬೀದಿಯ ಕೊನೆಯಲ್ಲಿ ಒಂದು ಮನೆಯ ಗೋಡೆಗಳು ಇನ್ನೂ ನಿಂತಿದ್ದವು. ಅದನ್ನು ಕಂಡಾಗ ನಾನು ಬಹುಕಾಲದಿಂದ ಮರೆತಿದ್ದ ಸಂದರ್ಭವೊಂದು ನೆನಪಿಗೆ ಬಂತು. ಆಗ ನನಗಿನ್ನೂ ಹತ್ತು ಹನ್ನೊಂದು ವರ್ಷ. ಊರಿನಲ್ಲಿ ಒಂದು ಮನೆಯವರು ಕೈಗೋನಹಳ್ಳಿಗೆ ಮದುವೆಗೆಂದು ಹೋಗಿದ್ದು ಬರುವಾಗ ಕಾಲರಾ ರೋಗದ ಸೋಂಕನ್ನು ತಂದರು. ಊರಿಗೆ ಬಂದ ರಾತ್ರಿಯೇ ಮನೆಯ ಯಜಮಾನಿತಿ ರೋಗದಿಂದ ಸತ್ತಳು. ಬೆಳಗಿನ ಜಾವದಲ್ಲಿ ಮಗ ಸತ್ತ. ಮಧ್ಯಾಹ್ನದ ಹೊತ್ತಿಗೆ ಯಜಮಾನನೂ ಸತ್ತ. ಇನ್ನೊಬ್ಬರಿಗೆ ರೋಗ ತಗಲಿತು. ರೋಗಿಯನ್ನು ನೋಡಿಕೊಳ್ಳಲು ಯಾರೂ ಇಲ್ಲ. ಊರಿನ ಜನರೆಲ್ಲಾ ಭಯದಿಂದ ಕಂಗೆಟ್ಟಿದ್ದರು. ಮುದ್ದೆಭಟ್ಟರ ಮನೆಯ ಹತ್ತಿರ ಯಾರೂ ಸುಳಿಯ ಕೂಡದೆಂದು ಹಿರಿಯರು ಆಜ್ಞೆಮಾಡಿದ್ದರು. ಇನ್ನೂ ಬದುಕಿದ್ದ ರೋಗಿಯು ಹೇಳುವವರು ಕೇಳುವವರಿಲ್ಲದೆ ನಾನು ನೋಡಿದ ಆ ಪಾಳುಮನೆಯಲ್ಲಿ ನರಳುತ್ತಿದ್ದ.

ಆಗ ನಮ್ಮ ತಂದೆ ಆತನಿಗೆ ಶುಶ್ರೂಷೆ ಮಾಡಲು ಹೊರಟರು. "ರೋಗಿ ಎಂದಿದ್ದರೂ ಸಾಯುತ್ತಾನೆ. ನೀನೂ ಹೋಗಿ ಪ್ರಾಣ ಒಪ್ಪಿಸಬೇಡ," ಎಂದು ಯಾರು ಎಷ್ಟು ಹೇಳಿದರೂ ಕೇಳಲಿಲ್ಲ. ಮೂರು ದಿನ ಆ ಮನೆಯಲ್ಲೇ ಇದ್ದು ರೋಗಿಗೆ ಗಂಜಿ ಮಾಡಿಕೊಟ್ಟು ಅವನ ಯೋಗಕ್ಷೇಮ ನೋಡಿಕೊಂಡರು. ಅದು ಹುಚ್ಚುತನವಿರಬಹುದು—ಏನಾದರೂ ಆಗಲಿ, ರೋಗಿ ಬದುಕಿಕೊಂಡ. ಕಾಲರಾ ಸೋಂಕು ನಮ್ಮ ತಂದೆಗೆ ತಟ್ಟಲಿಲ್ಲ. ಅವರು ನರಸಿಂಹನಿಗೆ ಸಲ್ಲಿಸಬೇಕಾಗಿದ್ದ ಸಾಲವನ್ನು ಹೀಗೆ ತೀರಿಸಿದರೆಂದು ತೋರುತ್ತದೆ. ನನಗೆ ಬುದ್ಧಿ ತಿಳಿಯುವ ವೇಳೆಗೆ ಅವರು ವಾತರೋಗದಿಂದ ನರಳುತ್ತಿದ್ದರು. ರೋಗದ 'ಪಿರ್ಕಿ'ನಲ್ಲಿ ಅವರ ಕೋಪತಾಪಗಳನ್ನು ಸಹಿಸುವುದು ಮನೆಯವರೆಲ್ಲರಿಗೂ ಅತಿ ಕಷ್ಟವಾಗುತ್ತಿತ್ತು. ನನಗಂತೂ ಅವರ ಪೆಟ್ಟುಗಳ ನೆನಪಿತ್ತೇ ಹೊರತು, ಅದು ರೋಗದ ಪ್ರಭಾವವೆನ್ನುವುದಾಗಲಿ, ಅವರ ಸ್ವಭಾವದಲ್ಲಿ ಸಹನೆ, ತ್ಯಾಗಬುದ್ಧಿ, ಮಾರ್ದವ ಎಷ್ಟಿತ್ತೆನ್ನುವುದಾಗಲಿ ತಿಳಿಯದು. ಆ ದಿನ ಪಾಳು ಮನೆಯನ್ನು ನೋಡಿದಾಗ ಇದರ ನೆನಪಾಯಿತು. ಹಿಂದೆ ನಾನು ತಂದೆಯನ್ನು ಕುರಿತು ಆಡಿದ್ದ ಕಟುವಾದ ಮಾತುಗಳನ್ನು ನೆನೆದು ಅಂದು ಮನಸ್ಸಿನಲ್ಲೇ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಯಿತು.

ನಾಲ್ಕು ಬೀದಿಗಳನ್ನೂ ಸುತ್ತುವುದರೊಳಗೆ ಊರಿನ ಹಳೆಯ ಜೀವನವೆಲ್ಲಾ ಒಂದುಬಾರಿ ಸುಪ್ತಚಿತ್ತದಿಂದ ಮೇಲೆದ್ದು ಬಂದಂತಾಯಿತು. ಅಕ್ಕಿಹೆಬ್ಬಾಳೇನೂ ರಾಮರಾಜ್ಯದ ಪ್ರತೀಕವಲ್ಲ. ಅಲ್ಲಿಯ ಜನರಲ್ಲಿ ಆಸೆದುರಾಸೆ, ಲೋಭ ಔದಾರ್ಯ, ಕರುಣೆ ಕ್ರೌರ್ಯ, ಮೋಸ ಋಜುತೆಗಳು ಹೆಚ್ಚುಕಡಿಮೆ ಎಲ್ಲರಲ್ಲಿರುವಂತೆ ಬೆರಕೆಯಾಗಿವೆ. ನಮ್ಮೂರಿನವರು ಕೃಷ್ಣಭಟ್ಟನೆಂಬವನಿಗೆ ಭಾರಿ ಮೋಸಮಾಡಿದ ಫಲವಾಗಿ ಆತ ಹೊಳೆಯಲ್ಲಿ ಬಿದ್ದು ಸತ್ತ ಕಥೆಯನ್ನು ನಾವೇ ಸ್ವಲ್ಪ ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ—ಆತ ಬಿದ್ದ ಸ್ಥಳಕ್ಕೆ ಕೃಷ್ಣಭಟ್ಟನ ಮಡು ಎಂದು ಈಗಲೂ ಹೆಸರಿದೆ. ಆದರೂ ಯಾರೊಬ್ಬರ ಮನೆಯಲ್ಲಾದರೂ ಗಣನೀಯವಾದ ಕೆಲಸ—ಅದು ಶುಭವಾಗಲಿ ಅಶುಭವಾಗಲಿ—ನಡೆಯಬೇಕೆಂದರೆ ಊರಿನವರೆಲ್ಲರ ಸಹಕಾರ ದೊರೆಯುತ್ತಿತ್ತು. ಊರಿನ ಜೀವನವೆಲ್ಲಾ ಒಂದು ಮನೆಯ ಜೀವನದಂತೆ ಸಾಗುತ್ತಿತ್ತು—ಕಲಹಗಳೇನಿದ್ದರೂ ಆ ಮನೆಯ ಅಂತಃಕಲಹ. ಒಬ್ಬರ ಮನೆಯಲ್ಲಿ ಮದುವೆಯಾದರೆ ಹಪ್ಪಳದ ಹಿಟ್ಟು ಸಿದ್ಧಪಡಿಸುವುದಕ್ಕೆ ಊರಿನ ಎಲ್ಲ ಮನೆಗಳಲ್ಲೂ ಕೆಲಸ ನಡೆಯುತ್ತಿತ್ತು. ಸಮಾರಾಧನೆಗೆ ನೀರನ್ನೊದಗಿಸಲು ಹಂಡೆಗಳನ್ನು ಹೇರಿಕೊಂಡು ಹತ್ತು ಮನೆಯ ಗಾಡಿಗಳು ಹೊಳೆಗೆ ಹೋಗುತ್ತಿದ್ದವು. ಎಲೆ ಹಾಕಿ ಬಡಿಸುವುದಕ್ಕೆ ಎಲ್ಲರ ಮನೆಯ ಯುವಕರೂ ನಿಲ್ಲುತ್ತಿದ್ದರು. ಎಲ್ಲರ ತೋಟಗಳಿಂದಲೂ ಹಲಸಿನ ಕಾಯಿ ಬಾಳೆಯಕಾಯಿ ಮುಂತಾದ ಹಳ್ಳಿಯ ತರಕಾರಿಗಳು ಬಂದೊದಗುತ್ತಿದ್ದವು. ಅಡಿಗೆಗಾಗಲಿ ಬಡಿಸುವುದಕ್ಕಾಗಲಿ ಪರಿಚಾರಕರನ್ನು ಗೊತ್ತು ಮಾಡುವುದೆಂದರೆ ಊರಿಗೆ ಅವಮಾನವೆಂದು ಎಲ್ಲರ ಭಾವನೆ.

ಊರಿನಿಂದ ಪೂರ್ವಕ್ಕೆ ಅರ್ಧಮೈಲಿ ನಡೆದರೆ ಹೇಮಾವತಿ ನದಿ ಸಿಕ್ಕುತ್ತದೆ. ಆ ದಾರಿಯಲ್ಲಿ, ದೇವಸ್ಥಾನದ ಹಿಂದೆಯೇ ಇರುವ ಪುರಾತನ ಕಾಲದ ಆಲಳಿಯಮರದ ಕೆಳಗೆ ಉಡುಪಿಯ ರಾಯರು—ಅವರಿಗೆ ಬೇರೆ ಹೆಸರೇನಾದರೂ ಇದ್ದರೆ ಅದು ಯಾರಿಗೂ ತಿಳಿಯದು—ಕಟ್ಟಿಕೊಂಡಿದ್ದ ಸಣ್ಣ ಮನೆಯಿತ್ತು. ರಾಯರ ಕಸಬು ಬಯಲಾಟದವರನ್ನು ತರಬಿಯತ್ತು ಮಾಡುವುದು. ಯಕ್ಷಗಾನದವರಿಗೆ ಬೇಕಾದ ಕಿರೀಟ ಭುಜಕೀರ್ತಿ ಮೊದಲಾದುವನ್ನು ಬೆಂಡಿನಿಂದ ತಯಾರು ಮಾಡುವುದರಲ್ಲೂ ಅವರು ಚತುರರು. ಅವರು ದಕ್ಷಿಣ ಕನ್ನಡವನ್ನು ಬಿಟ್ಟು ನಮ್ಮೂರಿನಲ್ಲಿ ಏಕೆ ನೆಲಸಿದರೋ ತಿಳಿಯದು. ಅವಿವಾಹಿತರಾದರೂ ಅವರು ಯಾರೋ ಒಬ್ಬ ಹೆಂಗಸಿನೊಡನೆ ಸಂಸಾರ ಹೂಡಿದ್ದರೆಂದು ಊರಿಗೆ ಊರೇ ಬಲ್ಲದು.

ಆದರೂ ಹೇಗೋ ರಾಯರು ಊರಿನವರ ವಿಶ್ವಾಸವನ್ನು ಗಳಿಸಿದ್ದರು. ಪ್ರತಿ ಶನಿವಾರವೂ ಅವರು ಜೋಳಿಗೆ ಹಾಕಿಕೊಂಡು "ನೀನೇ ಅನಾಥ ಬಂಧು" ಎಂದು ತಂಬೂರಿಯ ಶ್ರುತಿಗೆ ಹಾಡಿಕೊಳ್ಳುತ್ತ ನಡುಬೀದಿಯಲ್ಲಿ ಬರುವರು —ಒಬ್ಬರ ಮನೆಯ ಬಾಗಿಲಿಗೂ ಹೋಗುತ್ತಿರಲಿಲ್ಲ. ಮನೆಯವರೇ ಬೀದಿಗೆ ಹೋಗಿ ಅವರನ್ನು ನಿಲ್ಲಿಸಿ ಅಕ್ಕಿ ಹಾಕುತ್ತಿದ್ದರು. ಈಗ ಊರಿನಲ್ಲಿ ರಾಯರೂ ಇಲ್ಲ, ಅವರ ಕಲೆಯೂ ಇಲ್ಲ.

ಹಿಂದೆ ಆ ದಾರಿಯಲ್ಲಿ ಯಾವ ದಿನ ಹೋಗಲಿ, ಬೆಳಗಿನ ಹೊತ್ತು ತಲೆಯ ಮೇಲೊಂದು ನೀರು ತುಂಬಿದ ಕೊಡ, ಅದರ ಮೇಲೊಂದು ಚೆಂಬು, ಎಡಸೊಂಟದಮೇಲೆ ಮತ್ತೊಂದು ಕೊಡ, ಬಲಗೈಯಲ್ಲೊಂದು ತಾಲಿ—ಇಷ್ಟನ್ನೂ ಹೊತ್ತು ಸ್ತೋತ್ರಗಳನ್ನು ಹಾಡುತ್ತಾ ಬರುವ ಹೆಂಗಸರ ಸಾಲನ್ನು ನೋಡುವುದು ಕಣ್ಣಿಗೊಂದು ಹಬ್ಬ. ಆ ನಡಗೆಯ ಲಯದಲ್ಲಿ ಯಾವ ನಾಟ್ಯರಾಣಿಯ ಕಲೆಯಲ್ಲೂ ಕಾಣದ ಸೊಬಗಿತ್ತು. ನಾಟ್ಯರಾಣಿ ಪ್ರದರ್ಶನಕ್ಕಾಗಿ ಸೌಂದರ್ಯಸೃಷ್ಟಿ ಮಾಡುತ್ತಾಳೆ. ಇವರ ಸೊಬಗು ಅಪ್ರಯತ್ನತಃ ದೇಹದ ಸೌಷ್ಠವದಿಂದ, ಮನಸ್ಸಿನ ಅನುದ್ರಿಕ್ತ ಗೆಲವಿನಿಂದ, ತಾನಾಗಿ ಹೊರಹೊಮ್ಮಿದ್ದು.

ನಾನು ಹೊಳೆಗೆ ಹೋಗಿ ಕೊಪ್ಪರಿಗೆ ಮಡುವಿನಲ್ಲಿ ಕೈಕಾಲು ದಣಿಯುವವರೆಗೂ ಈಜಿದೆ. ಬಂಡೆಯ ಮೇಲಿಂದ ಹಿಂಕಣ್ಣು ಮುಂಕಣ್ಣು ಲಾಗ ಹಾಕಿದೆ. ದೊಡ್ಡ ಸೆಳವಿಗೆ ಮೈಯೊಡ್ಡಿ ಅರ್ಧ ಘಂಟೆ ಮಲಗಿ ಮೈಯ ನೋವನ್ನೆಲ್ಲಾ ಪರಿಹರಿಸಿಕೊಂಡೆ; ಅದರ ಶ್ರುತಿಗೆ ಕಂಠವನ್ನು ಹೊಂದಿಸಿ ಮನದಣಿಯ ಹಾಡಿಕೊಂಡೆ. ಹೊಸ ಊರಿಗೆ ಹೋದಾಗ ಮನಸ್ಸಿಗೆ ಆದ ಅತೃಪ್ತಿ ಬಹುಮಟ್ಟಿಗೆ ನೀರಿನಲ್ಲಿ ತೇಲಿಹೋಗಿ ಮೈಮನಗಳೆರಡಕ್ಕೂ ಹಿತವಾದ ಲಾಘವ ಬಂದಂತಾಯಿತು. ಆದರೂ ಮನಸ್ಸಿನ ಮೂಲೆಯೊಂದರಲ್ಲಿ ಏನೋ ಕೊರತೆಯಿತ್ತು ಹೀಗಾಗಬಾರದು—ಹೊಳೆಯೂ ನನ್ನದು, ಊರಿನ ಜನರೂ ನನ್ನವರು. ಆದರೆ ಜನರು ಮುಂದಾಗಬೇಕು, ಪ್ರಕೃತಿ ಹಿನ್ನೆಲೆಯಾಗಬೇಕು. ನನ್ನ ಮನಸ್ಸಿಗೆ ಬೇಕಾಗಿದ್ದ ತಂಪು ಜನರಿಂದ ಬರಬೇಕು.

ನೀರಿನಿಂದೆದ್ದು ಹೊಂಗೆಯ ನೆರಳಿನಲ್ಲಿ ನಿಂತು ಮೈಯೊರಸಿಕೊಳ್ಳುತ್ತಿದ್ದಾಗ ನನ್ನ ನೀರಾಟವನ್ನು ನೋಡುತ್ತಿದ್ದ ಇಳಿವಯಸ್ಸಿನ ರೈತನೊಬ್ಬ ಹತ್ತಿರ ಬಂದು ಕೇಳಿದ:

"ಬುದ್ಧಿ, ನೀವು ಇದೇ ಊರಿನವರಲ್ಲವ?"

"ಹೌದು ಹೇಗೆ ಪತ್ತೆ ಮಾಡಿದೆ ?"

"ಬೇರೆಯವರಿಗೆ ನೆಳವಿನಲ್ಲಿ ನಿಲ್ಲೋ ಆಯ ತಿಳಿಯಾಕಿಲ್ಲ, ಬುದ್ಧಿ. ಬೇರೆ ಊರಿನವರು ಹಿಂಗೆ ಹಿಂಕಣ್ಣು ಮುಂಕಣ್ಣು ಹೊಡೆದಾರ? ಅಡೇ ಬಂಡೆಗೇ ಹೋದಾರ?"

ಅನಂತರ ಒಂದು ಕ್ಷಣ ದಿಟ್ಟಸಿ ನೋಡಿ ಮತ್ತೆ ಕೇಳಿದ:

"ನೀವು ಸುಬ್ಬಯ್ಯಾವರ ಮಗ ಅಲ್ಲವ ?"

"ಹೌದು."

"ಎಂಥ ದೊಡ್ಡ ಜೀವ, ಬುದ್ಧಿ! ಇದ್ದರ ಅವರ ಹಂಗೆ ಇರಬೇಕು. ....ರೈತನ್ನ ಮರೆತುಬಿಟ್ಟರಾ? ಎಷ್ಟು ಸಲ ಹರಿಗಲದಾಗೆ ತಿರಿಗಿಸಿವ್ನಿ ಅಯ್ನೋರನ್ನ!"

"ಕಲ್ಯಾಣಿದಾಸನಲ್ಲವೇನೋ? ಎಷ್ಟು ಮುದುಕನಾಗಿಬಿಟ್ಟದೀಯೋ, ಎಷ್ಟು ವರ್ಷವಾಯಿತೋ ನಿನ್ನ ನೋಡಿ! ಅಲ್ಲ ಕಣೋ, ಕೊರವ, ಎಲ್ಲೋ ಮೊಸಳೆ ಮರಿ?"—ನಾನು ಹುಡುಗನಾಗಿದ್ದಾಗ ಮೊಸಳೆ ಮರಿ ತಂದು ಕೊಡುತ್ತೇನೆಂದು ಅವನು ಭರವಸೆಕೊಟ್ಟಿದ್ದ. ಅವನನ್ನು ಕಂಡಾಗಲೆಲ್ಲಾ "ಮೊಸಳೆಯ ಮರಿ ಎಲ್ಲಿ?" ಎಂದು ಕಾಡುವುದು ಪದ್ಧತಿಯಾಗಿ ಹೋಗಿತ್ತು.

"ಏನು ಬುದ್ಧಿ, ಇನ್ನೂ ಮರೆತಿಲ್ಲವ? ಮೊಸಳೆಮರಿ ಕಟ್ಟಿಕೊಂಡು ಈಗೇನು ಮಾಡೀರಿ ಬುಡಿ ಬುದ್ಧಿ....ಕಮಲನಾಯಕ ಹೋಗಿಬಿಟ್ಟ, ತಿಳೀತ್ರಾ?"—ಕಮಲನಾಯಕ ನಮ್ಮೂರಿನಲ್ಲಿ ಹರಿಗೋಲು ನಡಸುವವನು.

ಮಾತು ಸರಳವಾಗಿ ಹರಿಯಿತು. ಒಬ್ಬರಾದ ಮೇಲೆ ಒಬ್ಬರಾಗಿ ಅಂಗಡಿಯ ಕಾಸಿಂ ಸಾಬಿ, ಪಟೇಲ ನಿಂಗೇಗೌಡ, ಬಯಲಾಟದ ಉಡುಪಿ ರಾಯರು—ಸತ್ತವರು, ಕೆಟ್ಟವರು, ಊರು ಬಿಟ್ಟು ಹೋದವರು—ಎಲ್ಲರ ನೆನಪನ್ನೂ ಮಾಡಿಕೊಂಡು ಒಂದು ಘಂಟೆಕಾಲ ಅಲ್ಲೇ ನೆರಳಿನಲ್ಲಿ ಕುಳಿತು ಹರಟೆ ಹೊಡೆದೆವು. ಅವನು ನನ್ನ ಜೊತೆಯಲ್ಲೇ ಗುಡಿಯವರೆಗೂ ಬಂದು ಅಲ್ಲಿ ಬಹಳ ಆದರದಿಂದ ನನ್ನನ್ನು ಬೀಳ್ಕೊಟ್ಟು ತನ್ನ ಮನೆಗೆ ಹೋದ.

ಅಕ್ಕಿಹೆಬ್ಬಾಳು ಮತ್ತೆ ನನಗೆ ಪ್ರಿಯವಾಯಿತು. ಕಲ್ಯಾಣಿದಾಸ ನನ್ನಂತೆಯೇ ಹಿಂದಿನ ನೆನಪುಗಳನ್ನು ಮನಸ್ಸಿನಲ್ಲಿ ಪೋಷಿಸಿಕೊಂಡು ಬಂದಿದ್ದ. ಮೂರು ದಶಕಗಳಿಂದ ನಾನು ಶೇಖರಿಸಿ ಇಟ್ಟಿದ್ದ ನೆನಪಿನ ಸಂಪತ್ತು ವಾಸ್ತವಿಕತೆಯ ಬೆಂಕಿಯಲ್ಲಿ ಸುಟ್ಟುಹೋಗದೆ ಉಳಿದುಕೊಂಡಿತು.

## ಪ್ರೊ|| ಎ. ಎನ್. ಮ[illegible]

### ಅವರ ಕೃತಿಗಳು

| | | ರೂ. ಪೈ. | |
|---|---|---|---|
| ಹಗಲುಗನಸುಗಳು | .... | 1–50 | |
| ಅಲೆಯುವ ಮನ | .... | 5–00 | (9–00) |
| ಆಷಾಢಭೂತಿ | .... | 2–25 | (5–25) |
| ಯೋಗ್ಯನ ಪುನರಾಗಮನ | .... | 3–00 | (6–00) |
| ಶ್ರೀ ಮಾಸ್ತಿಯವರ ಕಥೆಗಳು | .... | 4–00 | (7–50) |
| ಸಂಯುಕ್ತ ಸಂಸ್ಥಾನಗಳ ಸಾಹಿತ್ಯ (ಅನುವಾದ) | | 6–50 | |

---

ಕಾವ್ಯಾಲಯ ಪ್ರಕಾಶಕರು * ಜಯನಗರ * ಮೈಸೂರು–9